

# ಶ್ರೀ

# ಗೀತಾರ್ಥ ಪ್ರಕಾಶ

## ಭಗವದ್ಗೀತೆಯ ಸಾರಸರ್ವಸ್ವ

ವಿದ್ವಾನ್ ಎನ್. ರಂಗನಾಥಶರ್ಮಾ

ಗೀತಾ ಬುಕ್ ಹೌಸ್ : ಪ್ರಕಾಶಕರು : ಮೈಸೂರು



ವಿದ್ವಾನ್ ಎನ್. ರಂಗನಾಥ ಶರ್ಮಾ ಶಿವಮೊಗ್ಗ ಜಿಲ್ಲೆಯ ಸೊರಬ ತಾಲ್ಲೂಕಿನ ನಡಹಳ್ಳಿ ಗ್ರಾಮದಲ್ಲಿ ಏಪ್ರಿಲ್ ೭, ೧೯೧೬ರಂದು ಜನಿಸಿದರು. ಬೆಂಗಳೂರಿನ ಚಾಮರಾಜೇಂದ್ರ ಸಂಸ್ಕೃತ ಪಾಠಶಾಲೆಯಿಂದ ಸಂಸ್ಕೃತ ಅಲಂಕಾರಶಾಸ್ತ್ರ ಮತ್ತು ವ್ಯಾಕರಣಗಳಲ್ಲಿ ವಿದ್ವತ್ ಪದವಿಯನ್ನೂ, ಮೈಸೂರು ಸರ್ಕಾರದ ಕನ್ನಡ ಪಂಡಿತ ಮತ್ತು ಮದರಾಸು ವಿಶ್ವವಿದ್ಯಾನಿಲಯದ ಕನ್ನಡ ವಿದ್ವಾನ್ ಪದವಿಗಳನ್ನೂ ಪಡೆದರು. ಕೆಲಕಾಲ ಪ್ರೌಢಶಾಲೆಯಲ್ಲಿ ಕನ್ನಡ-ಸಂಸ್ಕೃತ ಪಂಡಿತರಾಗಿ, ಬಳಿಕ ತಾವು ವಿದ್ಯಾರ್ಥಿಯಾಗಿದ್ದ ಚಾಮರಾಜೇಂದ್ರ ಸಂಸ್ಕೃತ ಪಾಠಶಾಲೆಯಲ್ಲಿಯೇ ವ್ಯಾಕರಣಶಾಸ್ತ್ರದ ಅಧ್ಯಾಪಕರಾಗಿ, ಪ್ರಾಧ್ಯಾಪಕರಾಗಿ ಸೇವೆ ಸಲ್ಲಿಸಿ ೧೯೭೬ರಲ್ಲಿ ನಿವೃತ್ತರಾದರು.



ವಾಲ್ಮೀಕಿ ರಾಮಾಯಣದ ಕನ್ನಡಾನುವಾದ, ತ್ರಿಕಾಂಡ ಅಮರಕೋಶದ ಗ್ರಂಥಪರಿಷ್ಕರಣ, ಕನ್ನಡ ಸಾಹಿತ್ಯ ಪರಿಷತ್ತಿನ ಹಳಗನ್ನಡ ಕಾವ್ಯಗಳ ಗದ್ಯಾನುವಾದ ಮಂಡಲಿಯ ನೇತೃತ್ವ, ಶರ್ಮರ ಹೆಸರು ಹೇಳಿದ ಕೂಡಲೇ ನೆನಪಿಗೆ ಬರುವಂಥವು. ಕನ್ನಡ ಹಾಗೂ ಸಂಸ್ಕೃತ ಭಾಷೆಗಳಲ್ಲಿನ ಅವರ ಸ್ವತಂತ್ರ ಕೃತಿಗಳು, ಸಂಪಾದಿತ ಗ್ರಂಥಗಳು ಮತ್ತು ಅನುವಾದ ರಚನೆಗಳು ಐವತ್ತರ ಸಂಖ್ಯೆಯನ್ನು ದಾಟಿವೆ.

ಮಂಡ್ಯ ಜಿಲ್ಲೆಯ ಆದಿಚುಂಚನಗಿರಿ ಕ್ಷೇತ್ರದಲ್ಲಿ ೧೯೮೪ರಲ್ಲಿ ನಡೆದ ಅಖಿಲ ಕರ್ನಾಟಕ ಸಂಸ್ಕೃತ ಪರಿಷತ್ತಿನ ಐದನೆಯ ಸಮ್ಮೇಳನದ ಅಧ್ಯಕ್ಷ-ಗೌರವಕ್ಕೆ ಪಾತ್ರರಾಗಿದ್ದ ಶರ್ಮರು ನಾಡಿನ ವಿವಿಧ ಸಾಹಿತ್ಯಿಕ, ಸಾಂಸ್ಕೃತಿಕ, ಧಾರ್ಮಿಕ ಸಂಘಸಂಸ್ಥೆಗಳಿಂದ ವ್ಯಾಕರಣಶಾಸ್ತ್ರಪ್ರವೀಣ, ವಿದ್ಯಾವಾರಿಧಿ ಎಂಬ ಬಿರುದುಗಳೂ ಸೇರಿದಂತೆ ಅನೇಕ ಪ್ರಶಸ್ತಿ-ಸಂಮಾನಗಳನ್ನು ಪಡೆದಿದ್ದಾರೆ. ಸಂಸ್ಕೃತ ಅಧ್ಯಾಪನೆಗೆ ರಾಷ್ಟ್ರಪ್ರಶಸ್ತಿ (೧೯೭೫), ಸಂಸ್ಕೃತ ಪಾಂಡಿತ್ಯಕ್ಕೆ ಕರ್ನಾಟಕ ರಾಜ್ಯ ಪ್ರಶಸ್ತಿ (೧೯೭೭), ಸಾಹಿತ್ಯಸೇವೆಗೆ ಕರ್ನಾಟಕ ರಾಜ್ಯೋತ್ಸವ ಪ್ರಶಸ್ತಿ (೧೯೯೩), ಸಂಸ್ಕೃತ ವಿದ್ವಾಂಸರಿಗೆ ಮೀಸಲಾದ ರಾಷ್ಟ್ರಪತಿ ಪ್ರಶಸ್ತಿ (೧೯೯೪) ಶರ್ಮರಿಗೆ ಲಭ್ಯವಾಗಿವೆ. ಅಭಿಮಾನಿಗಳು ತಮ್ಮ ಪ್ರೀತಿ-ಗೌರವಗಳ ಕುರುಹಾಗಿ 'ರಂಗಾಭಿನಂದನ' ಸಂಭಾವನಾ ಗ್ರಂಥವನ್ನು ಅವರಿಗೆ ಸಮರ್ಪಿಸಿದ್ದಾರೆ (೧೯೯೪).

## ವಿದ್ವಾನ್ ಎನ್. ರಂಗನಾಥ ಶರ್ಮಾ ಅವರ ಕೆಲವು ಕೃತಿಗಳು

### ಕನ್ನಡ ಅನುವಾದ

ವಾಲ್ಮೀಕಿ ರಾಮಾಯಣ (ಸಮಗ್ರ – ಒಂಬತ್ತು ಸಂಪುಟಗಳು)
ವಿಷ್ಣುಪುರಾಣ (ಸಮಗ್ರ – ಎರಡು ಸಂಪುಟಗಳು)
ಭಾಗವತ (೧೦, ೧೧, ೧೨ ಸ್ಕಂಧಗಳು – ಎರಡು ಸಂಪುಟಗಳು)
ಶ್ರೀ ತೋಟಕಾಚಾರ್ಯರ ಶ್ರುತಿಸಾರಸಮುದ್ಧರಣ
ಅಯ್ಯಣ್ಣ ದೀಕ್ಷಿತರ ವ್ಯಾಸತಾತ್ಪರ್ಯನಿರ್ಣಯ
ವಾಕ್ಯಪದೀಯಂ—ಬ್ರಹ್ಮಕಾಂಡ (ಟೀಕೆ, ಟಿಪ್ಪಣಿಗಳೊಡನೆ ಅನುವಾದ)
ತ್ರಿಕಾಂಡ ಅಮರಕೋಶ (ಟೀಕೆ, ಟಿಪ್ಪಣಿಗಳೊಡನೆ)
ಶ್ರೀ ಮಾಧವೀಯ ಶಂಕರ ದಿಗ್ವಿಜಯ (ಎರಡು ಭಾಗಗಳಲ್ಲಿ)
ಶ್ರೀ ಶಂಕರ ಸೂಕ್ತಿಮುಕ್ತಾವಳಿ (ಟೀಕೆ, ಟಿಪ್ಪಣಿಗಳೊಡನೆ)

### ಕನ್ನಡ ಸ್ವತಂತ್ರ ಕೃತಿಗಳು

ರಾಮಾಯಣದ ನಾಲ್ಕು ಸ್ತ್ರೀ ಪಾತ್ರಗಳು
ವೀರ ಕಂಪಣರಾಯ
ಶ್ರೀಧರಸ್ವಾಮಿಗಳು
ವಾಲ್ಮೀಕಿ ಮುನಿಗಳ ಹಾಸ್ಯಪ್ರವೃತ್ತಿ
ಉಪನಿಷತ್ತಿನ ಕಥೆಗಳು
ಸೂಕ್ತಿವ್ಯಾಪ್ತಿ
ಸಂದರ್ಭಸೂಕ್ತಿ
ಶ್ರೀರಾಮಚಂದ್ರ
ಹೊಸಗನ್ನಡ ವ್ಯಾಕರಣ
ರಾಮಾಯಣದ ನಾಲ್ಕು ಪಾತ್ರಗಳು

### ಸಂಸ್ಕೃತ ಸ್ವತಂತ್ರ ಕೃತಿಗಳು

ಬಾಹುಬಲಿವಿಜಯಂ (ನಾಟಕ)
ಏಕಚಕ್ರಂ (ನಾಟಕ)
ಸಂಸ್ಕೃತಂ ನಾಮ ದೈವೀ ವಾಕ್
ಸುಬ್ರಹ್ಮಣ್ಯ, ಶ್ರೀರಾಮ, ಗೊಮ್ಮಟೇಶ್ವರ ಸುಪ್ರಭಾತಗಳು
ಸಂಸ್ಕೃತ ಶಬ್ದಚಂದ್ರಿಕಾ (ವ್ಯಾಕರಣ ಸಂಬಂಧಿ)

### ಗ್ರಂಥ ಸಂಪಾದನೆ

ಚಾಮರಾಜೋಕ್ತಿವಿಲಾಸ ರಾಮಾಯಣ
ಡಿ. ವಿ. ಜಿ.ಯವರ 'ಮರುಳ ಮುನಿಯನ ಕಗ್ಗ'
ಅಯ್ಯಣ್ಣ ದೀಕ್ಷಿತರ ಸಂಸ್ಕೃತ ವ್ಯಾಸತಾತ್ಪರ್ಯನಿರ್ಣಯ

ಶ್ರೀಃ

# ಗೀತಾರ್ಥಪ್ರಕಾಶ

## (ಭಗವದ್ಗೀತೆಯ ಸಾರಸರ್ವಸ್ವ)

**ಸಂಸ್ಕೃತ ಮೂಲ, ಕನ್ನಡ ಅನುವಾದ, ಟಿಪ್ಪಣಿ, ವಿವರಣ ಸಹಿತ**

**ವಿದ್ವಾನ್ ಎನ್. ರಂಗನಾಥಶರ್ಮಾ**

ಮುನ್ನುಡಿ

**ಸ್ವಾಮಿ ಹರ್ಷಾನಂದ**

ಅಧ್ಯಕ್ಷರು : ರಾಮಕೃಷ್ಣ ಮಠ, ಬೆಂಗಳೂರು

ಗೀತಾ ಬುಕ್ ಹೌಸ್ : ಪ್ರಕಾಶಕರು : ಮೈಸೂರು

*GEETARTHAPRAKASHA (Bhagavadgeeteya Kannada Anuvada - Vivarane Sahita)*—[Kannada Translation of *Bhagavadgeeta* with Explanations] by Vidwan N. RANGANATHA SHARMA, 831, 4th Main Road, Vijayanagara, Bangalore 560 040. Published by GEETHA BOOK HOUSE, K. R. Circle, Mysore 570 001. First Published 1997.

ಪ್ರಥಮ ಮುದ್ರಣ ೧೯೯೭


ಡಿ.ಟಿ.ಪಿ. ಸಂಯೋಜನೆ : ಲೇಸರ್ ಲೈನ್ ಗ್ರಾಫಿಕ್ಸ್, ಬೆಂಗಳೂರು ೫೬೦ ೦೫೨
ಮುದ್ರಣ: ಜೆ.ಎಸ್ಎಸ್.ಪ್ರಿಂಟಿಂಗ್ ಪ್ರೆಸ್, ಮೈಸೂರು ೫೭೦ ೦೦೯

# ವಿಷಯಾನುಕ್ರಮಣಿಕೆ



## ಗೀತಾರ್ಥಪ್ರಕಾಶ

ಸರ್ವೋತ್ತಮ - ಅನಧಿಕಾರಿಗೆ ಗೀತೆಯನ್ನು ಉಪದೇಶಿಸಬಾರದು - ಗೀತೋಪದೇಶದ ಪರಮ ಪ್ರಯೋಜನ - ಯುದ್ಧವನ್ನು ಮಾಡಲು ಅರ್ಜುನನ ಒಪ್ಪಿಗೆ - ಉಪಸಂಹಾರ.

# ಮುನ್ನುಡಿ

ಗೀತೆಯಿಲ್ಲದೆ ಹಿಂದೂಧರ್ಮವಿಲ್ಲ ಎನ್ನುವಷ್ಟರಮಟ್ಟಿಗೆ ಗೀತೆಯು ನಮ್ಮ ಜೀವನದಲ್ಲಿ ಹಾಸುಹೊಕ್ಕಾಗಿದೆ. ಆದರೂ ಗೀತೆಯಲ್ಲಿ ಏನಿದೆ ? – ಎಂಬ ಈ ಪ್ರಶ್ನೆಗೆ ಉತ್ತರ ಬಹುಮಂದಿಗೆ ತಿಳಿದಿಲ್ಲ. ಈ ಕೊರತೆಯನ್ನು ಪೂರೈಸಲು ಪ್ರಕಟವಾಗಿರುವ, ಆಗುತ್ತಿರುವ, ಹಲವು ಗೀತಾಗ್ರಂಥಗಳ ಮಾಲೆಯಲ್ಲಿ ಈ ನೂತನ ಅನುವಾದವೂ ಒಂದು ಸುಗಂಧಪುಷ್ಪ.

ಗೀತೆಯ ಪ್ರತಿಯೊಂದು ಅಧ್ಯಾಯದ ಕೊನೆಯಲ್ಲಿಯೂ ಬರುವ ಸಮಾಪ್ತಿವಾಕ್ಯದಲ್ಲಿ ಅದನ್ನು 'ಉಪನಿಷತ್', 'ಬ್ರಹ್ಮವಿದ್ಯಾ' ಮತ್ತು 'ಯೋಗ ಶಾಸ್ತ್ರ' ಎಂದು ಕರೆದಿದೆ. ರಹಸ್ಯವಿದ್ಯೆಯಾದ ಸಂಸಾರಬಂಧನವನ್ನು ಶಿಥಿಲ ಗೊಳಿಸಿ ಅವಿದ್ಯೆಯನ್ನು ನಾಶಮಾಡಿ ಪರಬ್ರಹ್ಮದತ್ತ ಕರೆದೊಯ್ಯುವುದರಿಂದ 'ಉಪನಿಷತ್ತು'. ಪರಬ್ರಹ್ಮವನ್ನು–ಪರಮಾತ್ಮನನ್ನು ಕುರಿತು ಮಾಡಿರುವ ಉಪದೇಶವಾದುದರಿಂದ 'ಬ್ರಹ್ಮವಿದ್ಯೆ'. ಅಧ್ಯಾತ್ಮಸಾಧನೆಗಳನ್ನೂ ವಿವರಿ ಸಿರುವುದರಿಂದ 'ಯೋಗಶಾಸ್ತ್ರ'.

ಗೀತೆಯ ಪ್ರಸಿದ್ಧಿಗೆ ಕಾರಣಗಳು ಮೂರು: (೧) ಅದನ್ನು ಉಪದೇಶಿಸಿದವ ಅವತಾರಪುರುಷ ಶ್ರೀಕೃಷ್ಣ; ಅದನ್ನು ಪಡೆದ ಶಿಷ್ಯ ವೀರಾಗ್ರಣಿ ಅರ್ಜುನ; (೨) ಉಪದೇಶ ಮಾಡಿದ ಸಂದರ್ಭ ಕುರುಕ್ಷೇತ್ರಯುದ್ಧದ ಪ್ರಾರಂಭ; ಸ್ಥಳ ಯುದ್ಧಭೂಮಿ; (೩) ಅರ್ಜುನ ಕೇಳಿದ ಪ್ರಶ್ನೆಗಳು ಜೀವನದ ನಿರ್ವಹಣೆಗೆ ನೇರವಾಗಿ ಸಂಬಂಧಿಸಿದವು ; ಉತ್ತರಗಳು ಇಂದಿಗೂ ಮುಂದೆಯೂ ಅನ್ವಯಿಸತಕ್ಕಂಥವು.

ರಾಜ್ಯಲೋಭದಿಂದ ಗುರುಹಿರಿಯರನ್ನೂ ಬಂಧುಬಳಗದವರನ್ನೂ ಕೊಲ್ಲುವುದು ಅತ್ಯಂತ ಹೇಯಕೃತ್ಯ. ಅದರ ಬದಲು ಯುದ್ಧದಿಂದ ನಿವೃತ್ತನಾಗಿ, ಭಿಕ್ಷಾಟನೆಯಿಂದಲಾದರೂ ಸರಿಯೆ, ಜೀವನ ನಡೆಸುವುದು ಉತ್ತಮ ಎಂಬುದು ಅರ್ಜುನನ ವಾದದ ತಿರುಳು.

ಶ್ರೀಕೃಷ್ಣನ ಉತ್ತರ ನೇರ ಮತ್ತು ಸ್ಪಷ್ಟ. ಇಲ್ಲಿ ಮೂಲ ಪ್ರಶ್ನೆ ಕೊಲ್ಲಬೇಕೇ ಅಲ್ಲವೇ ಎಂಬುದಲ್ಲ. ಧರ್ಮರಕ್ಷಣೆಗಾಗಿ ಲೋಕಹಿತಕ್ಕಾಗಿ ದುಷ್ಟರನ್ನು ಶಿಕ್ಷಿಸಬೇಕೇ ಬೇಡವೇ ಎಂಬುದು. ಅಧರ್ಮವನ್ನು ನಾಶಪಡಿಸಿ ಧರ್ಮವನ್ನು ಸ್ಥಾಪಿಸತಕ್ಕದ್ದು ರಾಜವಂಶದ ಕ್ಷತ್ರಿಯನ ಪವಿತ್ರ ಕರ್ತವ್ಯ. ಈ ಪ್ರಯತ್ನದಲ್ಲಿ

ಅವನು ಯಶಸ್ವಿಯಾಗಬೇಕು, ಇಲ್ಲವೇ, ಪ್ರಾಣಾರ್ಪಣೆ ಮಾಡಬೇಕು. ಇವೆರಡರ ಹೊರತು ಅವನಿಗೆ ಬೇರಾವ ದಾರಿಯೂ ಇಲ್ಲ. ಸಮಾಜವು ಅವನ ಹೆಗಲ ಮೇಲೆ ಹೊರಿಸಿರುವ ಈ ಗುರುತರ ಜವಾಬ್ದಾರಿಯಿಂದ ಅವನು ಹಿಂದಿರುಗುವ ಪ್ರಶ್ನೆಯೇ ಇಲ್ಲ.

ಅರ್ಜುನನು ಮತ್ತೆ ಮತ್ತೆ ಎತ್ತುವ ಸಂದೇಹಗಳಿಗೆ, ಕೇಳುವ ಪ್ರಶ್ನೆಗಳಿಗೆ, ಉತ್ತರ ಕೊಡುತ್ತಾ ಕೊಡುತ್ತಾ ಶ್ರೀಕೃಷ್ಣನು ಒಂದು ದರ್ಶನವನ್ನೇ ಸೃಷ್ಟಿಸಿ ಬಿಟ್ಟಿದ್ದಾನೆ. ನಿಷ್ಕಾಮಕರ್ಮ, ಯಜ್ಞಕಲ್ಪನೆಯ ವಿಸ್ತಾರ, ಲೋಕಸಂಗ್ರಹದ ಆವಶ್ಯಕತೆ, ಯೋಗಗಳ ಸಮನ್ವಯ, ಭಗವದವತಾರದ ಸಾಧ್ಯತೆ ಮತ್ತು ಸತ್ಯತ್ವ – ಇವು ಆ ದರ್ಶನದ ರೂಪರೇಖೆಗಳು.

ಇಂತಹ ಪರಮಪವಿತ್ರ ಗ್ರಂಥವನ್ನು ಮೂಲಶ್ಲೋಕಗಳ ಸಹಿತ, ಸರಳ ಕನ್ನಡಾನುವಾದ ಸಹಿತ, ಸಂಕ್ಷಿಪ್ತ ಟಿಪ್ಪಣಿಗಳ ಸಮೇತ, ನಿಮ್ಮ ಮುಂದಿಡುತ್ತಿದ್ದಾರೆ ವಿದ್ವಾನ್ ಎನ್. ರಂಗನಾಥಶರ್ಮಾ ಅವರು.

ಶ್ರೀಯುತ ರಂಗನಾಥ ಶರ್ಮರು ಸ್ವಯಂ ಸಂಸ್ಕೃತ ವಿದ್ವಾಂಸರು. ಸಂಸ್ಕೃತ ಗ್ರಂಥಗಳ ಕನ್ನಡಾನುವಾದ ಮಾಡುವುದರಲ್ಲಿ ಸಿದ್ಧಹಸ್ತರು. ಶ್ರೀಮದ್ ವಾಲ್ಮೀಕಿರಾಮಾಯಣ ಮತ್ತು ಶ್ರೀಮದ್ಭಾಗವತದ (ಸ್ಕಂಧಗಳು ೧೦-೧೨) ಅನುವಾದಗಳಲ್ಲಿ ಅವರ ಪಾಂಡಿತ್ಯಪ್ರಾವೀಣ್ಯಗಳನ್ನು ಕಾಣುತ್ತೇವೆ.

ಇಂತಹ ಸ್ವಯಂಪ್ರಕಾಶರ ಗ್ರಂಥಕ್ಕೆ ಇತರರ ಮುನ್ನುಡಿಯೆಂಬ ಕನ್ನಡಿಯ ಆವಶ್ಯಕತೆಯಿಲ್ಲ. ಆದರೂ ಅವರ ಬಿನ್ನಹವನ್ನು ಮನ್ನಿಸಿ ಈ ಕೆಲವು ಮಾತುಗಳನ್ನು ಬರೆದಿದ್ದೇವೆ.

ಅವರ ಈ ನೂತನ ಗ್ರಂಥವು ಮುಮುಕ್ಷುಗಳಿಗೂ ಗೀತಾಭ್ಯಾಸಿಗಳಿಗೂ ಉಪಯುಕ್ತವಾಗುವುದರಲ್ಲಿ ಯಾವ ಸಂದೇಹವೂ ಇಲ್ಲ.

ಗೀತೆಯ ಹೆಸರನ್ನು ಹೊತ್ತಿರುವ ಮೈಸೂರಿನ ಗೀತಾ ಬುಕ್ ಹೌಸಿನವರು ಇದನ್ನು ಹೊರತರುತ್ತಿರುವುದು ಅತ್ಯಂತ ಸಮಂಜಸ. ಅವರಿಗೆ ನಮ್ಮ ಅಭಿನಂದನೆಗಳು.

**ಪ್ರೀಯತಾಂ ಶ್ರೀಗೀತಾಚಾರ್ಯಃ!**

ಬೆಂಗಳೂರು — ಸ್ವಾಮಿ ಹರ್ಷಾನಂದ

ಮೇ ೮, ೧೯೯೭ — ಅಧ್ಯಕ್ಷ : ರಾಮಕೃಷ್ಣ ಮಠ

ಶ್ರೀಃ

# ಪ್ರಸ್ತಾವನೆ

ಅರ್ಜುನಂ ಪ್ರಥಮಂ ವಂದೇ ಹೇತುಂ ಗೀತಾಮೃತೋದ್ಭವೇ ।
ಅಮೃತಸ್ಯ ಚ ದೋಗ್ಧಾರಂ ವಾಸುದೇವಂ ನರಾಕೃತಿಮ್ ॥
ನಮಾಮಿ ಸರ್ವಬೋದ್ಧಾರಂ ವೇದವ್ಯಾಸಂ ಮಹಾಮುನಿಮ್ ।
ಜಗ್ರಂಥ ಭಗವದ್ವಾಣೀಂ ಯೋ ಲೋಕಹಿತಕಾಮ್ಯಯಾ ॥
ನೌಮಿ ಶ್ರೀ ಶಂಕರಾಚಾರ್ಯಂ ಭಗವತ್ಪಾದಮನ್ವಹಮ್ ।
ಸಂಪ್ರದಾಯವಿಶುದ್ಧ್ಯರ್ಥಂ ಗೀತಾರ್ಥೋ ಯೇನ ವರ್ಣಿತಃ ॥

ಮಾನವನು ತನ್ನ ಅಭ್ಯುದಯಕ್ಕಾಗಿ ಪ್ರಯತ್ನಿಸುತ್ತಿರುವುದು ಪ್ರಕೃತಿಸಿದ್ಧ. ಲೌಕಿಕಸುಖಗಳ ಭೋಗರೂಪವಾದ ಅಭ್ಯುದಯವು ಅರ್ಥಕಾಮಗಳನ್ನು ಅವಲಂಬಿಸಿರುವುದರಿಂದ ಅವುಗಳ ಪ್ರಾಪ್ತಿಗಾಗಿ ಮಾನವನು ನಾನಾ ಮಾರ್ಗಗಳನ್ನು ಅನುಸರಿಸುತ್ತಾನೆ. ಮಾರ್ಗಾನುಸರಣೆಯಲ್ಲಿ ಸಹಜವಾದ ಮೋಹಕ್ಕೆ ಒಳಗಾಗಿ ಮುಗ್ಗರಿಸುತ್ತಾನೆ. 'ಈಹಂತೇ ಕಾಮಭೋಗಾರ್ಥ ಮನ್ಯಾಯೇನಾರ್ಥಸಂಚಯಾನ್' ಎಂಬ ಗೀತೋಕ್ತಿಯಂತೆ (೧೬-೧೨) ಅನ್ಯಾಯಮಾರ್ಗಕ್ಕೆ ಇಳಿಯುವುದೇನೂ ಅಪೂರ್ವವಲ್ಲ. ಅನ್ಯಾಯ ಮಾರ್ಗದಿಂದ ಪರರಿಗೆ ಕಷ್ಟವೂ ಪರಿಣಾಮದಲ್ಲಿ ಸಮಾಜಕ್ಕೆ ದುಃಸ್ಥಿತಿಯೂ ಪ್ರಾಪ್ತವಾಗುವುದಲ್ಲದೆ, ತನ್ನ ಇಹಪರಸೌಖ್ಯಗಳಿಗೂ ಭಂಗವಾಗುತ್ತದೆ ಯೆಂಬುದು ಹೊಳೆಯುವುದಿಲ್ಲ. ಹೊಳೆದರೂ 'ಬಲಾದಿವ ನಿಯೋಜಿತಃ' ಎಂಬಂತೆ ಆತನು ತಪ್ಪುಹಾದಿಯಲ್ಲಿಯೇ ಸಾಗುತ್ತಾನೆ. ಈ ತಪ್ಪುದಾರಿ ಯನ್ನು ಬಿಡಿಸಲು ಧರ್ಮಜ್ಞಾನವು ಮಾತ್ರ ಅಂತರಂಗವನ್ನು ಸ್ವಚ್ಛಗೊಳಿಸಿ ಸಹಕಾರಿಯಾಗಬಲ್ಲದು. ಸರ್ಕಾರದ ಆಜ್ಞೆಯು ಮಾನವನ ದುಷ್ಪ್ರವೃತ್ತಿಯನ್ನು ತಡೆಯಲಾರದು. ಅವನ ಅಂತರಂಗವನ್ನು ನಿರ್ಮಲಗೊಳಿಸಲಾರದು. ಕೊಳಚೆಯ ನೀರು ಹರಿಯದಿದ್ದರೂ ಇದ್ದಲ್ಲಿಯೇ ತಾನಾಗಿ ಪರಿಸರವನ್ನು ಕೆಡಿಸಿಬಿಡುತ್ತದೆ. ಯಾವುದು ಧರ್ಮ, ಯಾವುದು ಅಧರ್ಮವೆಂದು ತಿಳಿಯುವುದು ಸುಲಭವಲ್ಲ. ಶ್ರೀರಾಮನು ವಾಲಿಯನ್ನುದ್ದೇಶಿಸಿ "ಸೂಕ್ಷ್ಮಃ ಪರಮದುರ್ಜ್ಞೇಯಃ ಸತಾಂ ಧರ್ಮಃ ಪ್ಲವಂಗಮ" ಎಂದಿರುವುದು (ಕಿಷ್ಕಿ. ೧೮-೧೫) ಈ ಕಾರಣದಿಂದಲೇ.

ಧರ್ಮದ ಸ್ವರೂಪವು ಹೀಗೆ ಸೂಕ್ಷ್ಮವೂ ಪರಮದುರ್ಜ್ಞೇಯವೂ ಆದ್ದರಿಂದಲೇ ಇದನ್ನು ವಿವರಿಸುವುದಕ್ಕಾಗಿ ವೇದೋಪನಿಷತ್ತುಗಳೇ ಮೊದಲಾದ ಆರ್ಷ ಗ್ರಂಥಗಳು ಹೊರಟಿವೆ. ಅರ್ಥಕಾಮಗಳ ಸಂಪಾದನೆ ಧರ್ಮಮಾರ್ಗದಿಂದಲೇ ಆಗಿರಬೇಕೆಂದು ಇವು ಬೋಧಿಸುತ್ತವೆ. ಧರ್ಮ ಮತ್ತು ಧರ್ಮವಿರುದ್ಧವಲ್ಲದ ಅರ್ಥಕಾಮಗಳು ಮನುಷ್ಯನ ಗುರಿಯಾಗಿರತಕ್ಕದ್ದು. ಧರ್ಮ, ಅರ್ಥ, ಕಾಮ - ಇವು ಮೂರು ಮಾನವನ ಪುರುಷಾರ್ಥಗಳಾಗಿದ್ದು ತ್ರಿವರ್ಗವೆನಿಸುತ್ತವೆ. ಈ ತ್ರಿವರ್ಗದ ವ್ಯವಸ್ಥಿತವಾದ ಪಾಲನೆ ಮಾನವಕುಲಕ್ಕೆ ಸುಖ ಶಾಂತಿಸಂಪದಗಳನ್ನು ತರಬಲ್ಲದು. ಮಾನವನ ಅಭ್ಯುದಯವೆಂದರೆ ಇದೇ.

ವಿಚಾರಶೀಲನಾದ ಮಾನವನ ಬುದ್ಧಿ ಇನ್ನೂ ಒಂದು ಹೆಜ್ಜೆ ಮುಂದಿಡುತ್ತದೆ. ಈ ಅಭ್ಯುದಯದಿಂದ ಮುಪ್ಪು ಸಾವುಗಳೇನೂ ತಪ್ಪುವುದಿಲ್ಲ. ಹುಟ್ಟಿನಿಂದ ಬಂದ ಅಂಗವೈಕಲ್ಯಾದಿ ದೋಷಗಳಿಗೂ ಸಂಸಾರದಲ್ಲಿ ಆಕಸ್ಮಿಕವಾಗಿ ಒದಗುವ ಕಷ್ಟನಷ್ಟವಿಪತ್ತುಗಳಿಗೂ ಪರಿಹಾರ ವೇನು ? ಎಲ್ಲರಿಗೂ ಅರ್ಥಕಾಮಗಳು ಯಥೇಚ್ಛವಾಗಿ ದೊರಕುವುದೂ ಇಲ್ಲ. ದೊರಕಿದರೂ ತೃಪ್ತಿಯಾಗುವುದಿಲ್ಲ. ತೃಪ್ತಿಯಾದರೂ ಸಾವಿನಲ್ಲಿ ಎಲ್ಲ ಮುಗಿದುಹೋಗುತ್ತದೆ – ಎಂಬ ಚಿಂತೆ ಕಾಡುತ್ತದೆ. ಅರ್ಥಕಾಮಗಳು ನನಗೆ ಎಂದಾದಮೇಲೆ ನಾನು ಯಾರು ? – ಎಂದು ವಿವೇಕಿಯು ವಿಚಾರಕ್ಕೆ ಒಳಗಾಗುತ್ತಾನೆ. ದೇಹವೇ ನಾನಾದರೆ ಸಾವಿನಲ್ಲಿ ಎಲ್ಲ ಮುಗಿದು ಹೋಗುತ್ತದೆ. 'ಭಸ್ಮಾಂತಂ ಶರೀರಂ' ಆದ್ದರಿಂದ ನಾನು ಯಾರು ? ಮರಣಾನಂತರ ನನ್ನ ಗತಿಯೇನು ? ಶಾಶ್ವತವಾದ ಶಾಂತಿ ಎಂಬುದುಂಟೆ ? ಇದ್ದರೆ ಅದು ಯಾವುದು ?–ಎಂಬ ಜಿಜ್ಞಾಸೆ ವಿವೇಕಿಯಾದವನಿಗೆ ಬರುವುದು ಸಹಜ. ಇದಕ್ಕೆ ಉತ್ತರವಾಗಿ ನಿಃಶ್ರೇಯಸ ಎಂಬು ದೊಂದುಂಟು-ಎಂದು ನಮ್ಮ ದರ್ಶನಗಳು ಸಾರುತ್ತವೆ. ಯಾವುದಕ್ಕಿಂತ ಹೆಚ್ಚಿನ ಶ್ರೇಯಸ್ಸು ಇಲ್ಲವೋ ಅದು ನಿಃಶ್ರೇಯಸ. ಅದೇ ಮೋಕ್ಷ, ಮುಕ್ತಿ. ಏವಂಚ ಧರ್ಮ, ಅರ್ಥ, ಕಾಮ, ಮೋಕ್ಷ – ಇವು ನಾಲ್ಕು ಪುರುಷಾರ್ಥಗಳು. ಇವು ಇಷ್ಟೇ ಎಂದು ನಿಶ್ಚಯಿಸಿ ಹೇಳಿದ ಕೀರ್ತಿ ಭಾರತೀಯ ದಾರ್ಶನಿಕರಿಗೆ ಮಾತ್ರ ಸಲ್ಲುತ್ತದೆ. ಅಭ್ಯುದಯ – ನಿಃಶ್ರೇಯಸಗಳೆರಡರ ಮಾರ್ಗವನ್ನೂ ತೋರಿಸಿ ಸಮೀಚೀನವಾಗಿ ಸಮನ್ವಯ ಮಾಡಿರುವುದೇ ಭಗವದ್ಗೀತೆಯ ವೈಶಿಷ್ಟ್ಯವಾಗಿರುತ್ತದೆ.

ಇಹವನ್ನು ಬಿಡದೆ ಪರದ ಕಡೆಗೆ ಸಾಗಬೇಕೆನ್ನುವವನಿಗೆ ಗೀತೆಯು ದಾರಿದೀಪವಾಗಿದೆ.

## ಶ್ರೀಮದ್ಭಗವದ್ಗೀತೆ

ಇದು ಭಾರತಯುದ್ಧಾರಂಭದಲ್ಲಿ ಶ್ರೀಕೃಷ್ಣನಿಗೂ ಅರ್ಜುನನಿಗೂ ನಡೆದ ಸಂವಾದರೂಪದಲ್ಲಿದ್ದು, ೭೦೦ ಶ್ಲೋಕಗಳಿಂದ ಕೂಡಿದೆ. ಗುರುವಾದ ಶ್ರೀಕೃಷ್ಣನು ಶಿಷ್ಯನಾದ ಅರ್ಜುನನಿಗೆ ತತ್ತ್ವವನ್ನು ಬೋಧಿಸುವ ಪ್ರಕಾರವನ್ನಿಲ್ಲಿ ಕಾಣಬಹುದು. ಅರ್ಜುನನ ಸಂಶಯ, ಶಂಕೆಗಳಿಗೆ ಭಗವಂತನು ಶಾಸ್ತ್ರೀಯ ವಾದ ಉತ್ತರವನ್ನು ಕೊಡುವುದಲ್ಲದೆ, ತಾನೇ ಅವನ ಇಂಗಿತವನ್ನರಿತು ಪರಮಾರ್ಥವಿಷಯಗಳನ್ನು ವಿಸ್ತರಿಸುತ್ತಾನೆ. ಈ ಸಂದರ್ಭದಲ್ಲಿ ಪುನರುಕ್ತಿ ಗಳು ಅಲ್ಲಲ್ಲಿ ಬರುವುದು ಸಹಜ. ಅರ್ಜುನನ ಮನಸ್ಸಿಗೆ ತತ್ತ್ವವು ಸರಿಯಾಗಿ ನಾಟಬೇಕೆಂಬುದು ಶ್ರೀಕೃಷ್ಣನ ಉದ್ದೇಶವಾಗಿರುತ್ತದೆ. ಇಲ್ಲಿರುವ ಶ್ಲೋಕಗಳು ಸರಳ ಭಾಷೆಯಲ್ಲಿದ್ದು ಶಬ್ದಾರ್ಥಗಳನ್ನು ತಿಳಿಯುವುದು ಕಠಿಣವೇನಲ್ಲ. ಆದರೆ ಗೀತೆಯ ತಾತ್ಪರ್ಯವನ್ನು ಗೊತ್ತುಮಾಡುವುದು ಮಾತ್ರ ಜಟಿಲ ವಾದದ್ದು. ಏಕೆಂದರೆ, ಕೆಲವು ಶ್ಲೋಕಗಳು ಸಮಸ್ಯಾರೂಪವಾಗಿರುತ್ತವೆ. ಉದಾಹರಣೆಗೆ,

**ಯಾ ನಿಶಾ ಸರ್ವಭೂತಾನಾಂ ತಸ್ಯಾಂ ಜಾಗರ್ತಿ ಸಂಯಮೀ ।**
**ಯಸ್ಯಾಂ ಜಾಗ್ರತಿ ಭೂತಾನಿ ಸಾ ನಿಶಾ ಪಶ್ಯತೋ ಮುನೇಃ ॥೨-೬೯**
**ಕರ್ಮಣ್ಯಕರ್ಮ ಯಃ ಪಶ್ಯೇತ್ ಅಕರ್ಮಣಿ ಚ ಕರ್ಮ ಯಃ ।**
**ಸ ಬುದ್ಧಿಮಾನ್ ಮನುಷ್ಯೇಷು ಸ ಯುಕ್ತಃ ಕೃತ್ಸ್ನಕರ್ಮಕೃತ್ ॥೪-೧೮**

ಅರ್ಜುನನಿಗೆ 'ಕುರು ಕರ್ಮೈವ ತಸ್ಮಾತ್ತ್ವಂ' ಎಂದು ಕರ್ಮನಿಷ್ಠೆಯನ್ನು ಬೋಧಿಸಿದ ಶ್ರೀಕೃಷ್ಣನೇ 'ಸರ್ವಾರಂಭಪರಿತ್ಯಾಗೀ' ಇತ್ಯಾದಿ ವಚನಗಳಿಂದ ಸ್ಥಿತಪ್ರಜ್ಞನ ನೈಷ್ಕರ್ಮ್ಯವನ್ನು ಪ್ರಶಂಸೆ ಮಾಡುತ್ತಾನೆ. 'ಸ್ವಧರ್ಮೇ ನಿಧನಂ ಶ್ರೇಯಃ' ಎಂದು ಹೇಳಿದವನು 'ಸರ್ವಧರ್ಮಾನ್ ಪರಿತ್ಯಜ್ಯ ಮಾಮೇಕಂ ಶರಣಂ ವ್ರಜ' ಎಂದು ಉಪದೇಶಿಸುತ್ತಾನೆ. ಅಲ್ಲದೆ ಗೀತೆಯಲ್ಲಿ ಯೋಗ, ಕರ್ಮ, ಜ್ಞಾನ, ಗುಣ, ಸಾಂಖ್ಯ, ಸಂನ್ಯಾಸ – ಮುಂತಾದ ಶಬ್ದಗಳು ಒಂದೇ ಅರ್ಥದಲ್ಲಿರದೆ ಬೇರೆ ಬೇರೆ ಸಂದರ್ಭಗಳಲ್ಲಿ ವಿಭಿನ್ನಾರ್ಥಗಳಲ್ಲಿ ಪ್ರಯುಕ್ತ ವಾಗಿವೆ. ಕರ್ಮಯೋಗ, ಧ್ಯಾನಯೋಗ, ಭಕ್ತಿಯೋಗ, ಜ್ಞಾನಯೋಗಗಳಲ್ಲಿ ಯಾವುದು ಯಾರಿಗೆ ಗ್ರಾಹ್ಯ? ಇವು ಭಿನ್ನ ಮಾರ್ಗಗಳೇ? ಇವುಗಳ

ಸಮನ್ವಯ ಹೇಗೆ ? – ಎಂಬುದು ಸುಲಭವಾಗಿ ತಿಳಿಯತಕ್ಕದ್ದಲ್ಲ. ಆದ್ದರಿಂದಲೇ ಶ್ರೀಶಂಕರಾಚಾರ್ಯರು ತಾವು ರಚಿಸಿದ ಗೀತಾಭಾಷ್ಯದ ಉಪೋದ್ಘಾತದಲ್ಲಿ "ತದಿದಂ ಗೀತಾಶಾಸ್ತ್ರಂ ಸಮಸ್ತವೇದಾರ್ಥಸಾರ ಸಂಗ್ರಹಭೂತಂ ದುರ್ವಿಜ್ಞೇಯಾರ್ಥಂ=ಸಮಸ್ತವೇದಾರ್ಥಗಳ ಸಾರವನ್ನು ಸಂಗ್ರಹಿಸಿರುವ ಈ ಗೀತಾಶಾಸ್ತ್ರದ ಅರ್ಥವನ್ನು ತಿಳಿಯುವುದು ತುಂಬ ಕಠಿಣ" ಎಂದು ಬರೆದು, 'ಇದರ ಅರ್ಥವನ್ನು ವಿಂಗಡಿಸಿ ಗೊತ್ತು ಮಾಡುವುದಕ್ಕಾಗಿ ಸಂಕ್ಷೇಪವಾಗಿ ವಿವರಣವನ್ನು ಮಾಡುತ್ತೇನೆ' ಎಂದು ಹೇಳಿ ಹಾಗೆಯೇ ವಿವರಣೆಯನ್ನೇ ಮಾಡಿದ್ದಾರೆ.

ಜಗತ್ತಿನ ಸ್ಥಿತಿಯನ್ನು ಪಾಲಿಸುವುದಕ್ಕಾಗಿ ಭಗವಂತನಾದ ವಿಷ್ಣುವು ವಸುದೇವನಿಂದ ದೇವಕಿಯ ಗರ್ಭದಲ್ಲಿ ತನ್ನ ಅಂಶದಿಂದ ಕೃಷ್ಣನಾಗಿ ಅವತರಿಸಿದನೆಂದು ಶಂಕರಾಚಾರ್ಯರು ಸ್ಪಷ್ಟವಾಗಿ ಬರೆದಿದ್ದಾರೆ. ಈಶ್ವರನ ಅವತಾರದ ವಿಷಯವಾಗಿ ಹೇಳುವಾಗ ನಮ್ಮ ಆಧುನಿಕ ಭಾರತೀಯ ವಿದ್ವಾಂಸರು 'ದೇವರು ಅವತರಿಸುತ್ತಾನೆಂದು ಭಾರತೀಯರ ನಂಬಿಕೆ' ಎಂದು ಸಂಕೋಚದಿಂದ ಬರೆಯುತ್ತಾರೆ. ಹಾಗೆ ಹಲ್ಲುಹಿಡಿದು ತುಟಿಯನ್ನು ಅಲುಗಿಸದೆ ಮಾತಾಡುವುದೇಕೆ ? ಗೀತೆಯಲ್ಲಿಯೇ ಶ್ರೀಕೃಷ್ಣನು "ಅಹಮಾದಿರ್ಹಿಭೂತಾನಾಂ......" "ಮತ್ತಃ ಸರ್ವಂ ಪ್ರವರ್ತತೇ.....", "ಕಾಲೋಽಸ್ಮಿ ಲೋಕಕ್ಷಯಕೃತ್ ಪ್ರವೃದ್ಧಃ...." "ಸಂಭವಾಮ್ಯಾತ್ಮ ಮಾಯಯಾ ......." ಎಂದು ತನ್ನ ಈಶ್ವರತ್ವವನ್ನು ಮತ್ತೆ ಮತ್ತೆ ಪ್ರಕಟಿಸಿದ್ದಾನೆ. ಮನುಷ್ಯ ಮಾತ್ರದವನು ಇಂತಹ ನುಡಿಗಳನ್ನು ಉಗ್ಗಡಿಸಬಲ್ಲನೆ ? ಜಗದ್ರಂಗದಲ್ಲಿ ಅದ್ಭುತ ಕ್ರೀಡೆಗಳನ್ನು ಸದಾ ನಡೆಸತಕ್ಕ ಸರ್ವೇಶ್ವರನು ತಾನೂ ಆಟಗಾರನಾಗಿ ಕ್ರೀಡೆಯಲ್ಲಿ ಭಾಗವಹಿಸಲಾರನೇನು ?

**ಪ್ರಕೃತ ಗ್ರಂಥ**

ಶ್ರೀಶಂಕರಾಚಾರ್ಯರು ಗೀತಾಭಾಷ್ಯದಲ್ಲಿ ತೋರಿಸಿಕೊಟ್ಟ ಮಾರ್ಗವನ್ನು ಈ ಕನ್ನಡ ಗೀತಾರ್ಥಾನುವಾದದಲ್ಲಿ ನಾನು ಆಶ್ರಯಿಸಿದ್ದೇನೆ. ಅವರು ಹೇಳಿದ ಪ್ರತಿಪದಾರ್ಥವನ್ನು ಅನುಸರಿಸಿ ಶ್ಲೋಕಗಳನ್ನು ಕನ್ನಡಕ್ಕೆ ಅನುವಾದಿಸಿದ್ದೇನೆ. ಇದು ಬರಿಯ ಭಾಷಾಂತರವಾಗದೆ, ಕನ್ನಡದ ಸಹಜ ಶೈಲಿಯಲ್ಲಿ ಶ್ಲೋಕದ ತಾತ್ಪರ್ಯವು ಬರಬೇಕೆಂಬುದು ನನ್ನ ಉದ್ದೇಶ. ಸ್ವಬುದ್ಧಿಯಿಂದ ಅಥವಾ ಅನ್ಯರ ವ್ಯಾಖ್ಯಾನಮಾರ್ಗದಿಂದ ಯಾವ ಅರ್ಥವನ್ನೂ ಬರೆದಿಲ್ಲ. ಶ್ರೀಶಾಂಕರಭಾಷ್ಯದಲ್ಲಿ ಬರುವ ವಾದವಿವಾದಗಳನ್ನೂ ಖಂಡನಮಂಡನ

ಗಳನ್ನೂ ಅಧಿಕ ವಿವರಣೆಯನ್ನೂ ಪ್ರಸ್ತಾವಿಸಿಲ್ಲ. ಮೂಲ ಶ್ಲೋಕಗಳ ಯಥಾಶ್ರುತವಾದ ಅರ್ಥವನ್ನು ಬರೆದು, ಎಲ್ಲಿ ಸ್ಪಷ್ಟೀಕರಣವು ಆವಶ್ಯಕವೋ ಎಲ್ಲಿ ವಾಚಕರಿಗೆ ಸಂಶಯ ಶಂಕೆಗಳು ಹುಟ್ಟುತ್ತವೆಯೋ ಅಲ್ಲಿ ಸ್ಪಷ್ಟೀಕರಣವನ್ನೂ ಸಮಾಧಾನವನ್ನೂ 'ವಿವರಣೆ'ಯಲ್ಲಿ ಕಾಣಿಸಿದ್ದೇನೆ. ಅಧ್ಯಾಯಗಳಿಗೆ ಪೂರ್ವಾಪರಸಂಬಂಧವನ್ನು ಬರೆದು, ಅಧ್ಯಾಯಗಳ ಕಡೆಯಲ್ಲಿ ಆಯಾ ಅಧ್ಯಾಯಗಳ ಸಾರವನ್ನು ತಿಳಿಸಲಾಗಿದೆ. ಸಂಪ್ರದಾಯಾನುಕ್ರಮದಿಂದ ಶಾಸ್ತ್ರೀಯವಾದ ಗೀತಾರ್ಥವನ್ನು ತಿಳಿದು ಸಂತೃಪ್ತರಾಗತಕ್ಕವರಿಗೆ ಈ ಗ್ರಂಥವು ಸಾಕಾಗುತ್ತದೆಯೆಂದೂ ಪ್ರೌಢವ್ಯಾಸಂಗಿಗಳಿಗೆ ಪ್ರವೇಶಿಕೆಯಾಗಿ ಉಪಕರಿಸುತ್ತದೆಯೆಂದೂ ನನ್ನ ನಿರೀಕ್ಷೆ ಇದೆ. ವಿದ್ವಾಂಸರು ಸುಹೃದ್ಭಾವದಿಂದ ಈ ಕೃತಿಯನ್ನು ಪರಿಗಣಿಸಬೇಕೆಂದು ವಿನಯದಿಂದ ವಿಜ್ಞಾಪಿಸಿಕೊಳ್ಳುತ್ತೇನೆ.

## ಭಗವದ್ಗೀತೆಯ ಉಪದೇಶ

ನಾಲ್ಕು ಬಗೆಯ ಪುರುಷಾರ್ಥಗಳಲ್ಲಿ ಅರ್ಥಕಾಮಗಳಿಗೆ ಸಾಧನವಾದ ಧರ್ಮಾನುಷ್ಠಾನಕ್ಕೆ ಪ್ರವೃತ್ತಿಮಾರ್ಗವೆಂದೂ ಮೋಕ್ಷಕ್ಕೆ ಸಾಧನವಾದ ಧರ್ಮಾನುಷ್ಠಾನಕ್ಕೆ ನಿವೃತ್ತಿಮಾರ್ಗವೆಂದೂ ಹೆಸರಿದೆ. ಈ ಎರಡು ಮಾರ್ಗಗಳಿಗೂ ಆಧಾರಸ್ತಂಭವಾಗಿರತಕ್ಕದ್ದು ಆತ್ಮ. ಈ ಸ್ತಂಭವು ದಾರಿಗರಿಗೆ ದಿಕ್ಸೂಚಿಯಾದ 'ಕೈಕಂಬ'ದಂತೆಯೂ ನಿಂತಿದೆ. ದೇಹಾತಿರಿಕ್ತವಾದ ಆತ್ಮವಿದೆಯೆಂಬ ಶ್ರದ್ಧೆಯಿದ್ದರೆ ಮಾತ್ರ ಈ ಧರ್ಮಾನುಷ್ಠಾನವು ಅರ್ಥವತ್ತಾಗುತ್ತದೆ. ಯಾಸ್ಕರ ನಿರುಕ್ತದಲ್ಲಿ "ಶ್ರದ್ಧಾ = ಶ್ರತ್ ಸತ್ಯಂ ದದಾತಿ ಯಯಾ ಸಾ' ಎಂದು ಶ್ರದ್ಧಾಶಬ್ದದ ನಿರ್ವಚನವನ್ನು ಹೇಳಿದೆ. ಸತ್ಯಾನ್ವೇಷಣೆಗೆ ಉಪಕಾರಕವಾದ ಸಾಧನವೆಂದರ್ಥ. ಶಾಸ್ತ್ರದಲ್ಲಿಯೂ ಗುರುವಿನಲ್ಲಿಯೂ ಇಟ್ಟಿರುವ ಅಚಲವಿಶ್ವಾಸವೇ ಶ್ರದ್ಧೆ.

ಅರ್ಜುನನಿಗೆ ದೇಹಾತಿರಿಕ್ತವಾದ ಆತ್ಮನಿದ್ದಾನೆಂಬ ನಂಬಿಕೆ ಇತ್ತು. ಆದ್ದರಿಂದಲೇ "ಪತಂತಿ ಪಿತರೋ ಹ್ಯೇಷಾಂ ಲುಪ್ತಪಿಂಡೋದಕಕ್ರಿಯಾಃ' 'ನರಕೇ ನಿಯತಂ ವಾಸೋ ಭವತೀತ್ಯನುಶುಶ್ರುಮ'–ಎಂದು ವಿಷಣ್ಣನಾಗಿದ್ದಾನೆ. ಆದರೆ ಆತ್ಮನು ಯಾರು ? ಅವನ ನಿಜಸ್ವರೂಪವೇನು ? ಎಂಬುದನ್ನರಿಯದೆ 'ನಾನು ನನ್ನವರಾದ ಭೀಷ್ಮದ್ರೋಣಾದಿಗಳನ್ನು ಕೊಲ್ಲುತ್ತೇನೆ. ಅವರು ಹತರಾಗುತ್ತಾರೆ' ಎಂಬ ಶೋಕವು ಅವನನ್ನಾವರಿ

ಸಿತು. ಆತ್ಮ ದೇಹ, ಇಂದ್ರಿಯಗಳನ್ನು ಕಲಬೆರಕೆ ಮಾಡಿ ತಿಳಿದುಕೊಂಡದ್ದೇ ಇದಕ್ಕೆ ಕಾರಣ. ಇದೇ ಮೋಹ; ಚಿತ್ತವಿಕಲತೆ; ಸತ್ಯವನ್ನು ಗ್ರಹಿಸಲಾರದ ಅಸಾಮರ್ಥ್ಯ. ಮೋಹದಿಂದ ಶೋಕ. ಅರ್ಜುನನು ಯುದ್ಧ ಮಾಡು ವುದಕ್ಕಾಗಿಯೇ ಬಂದು ಯುದ್ಧದಲ್ಲಿ ಪ್ರವೃತ್ತನಾಗಿದ್ದರೂ ಈ ಶೋಕ ಮೋಹಗಳಿಂದ ಅಭಿಭೂತನಾಗಿ ಯುದ್ಧಮಾಡುವುದಿಲ್ಲವೆಂದು ಸುಮ್ಮನೆ ಕುಳಿತನು. ಹರಿದು ಬರುವ ಹೊಳೆಗೆ ಅಡ್ಡಗಟ್ಟೆಯಂತೆ ಶೋಕಮೋಹಗಳು ಅವನನ್ನು ತಡೆದವು. ಈಗ ಶ್ರೀಕೃಷ್ಣನ ಕೆಲಸವು ಅರ್ಜುನನ ಶೋಕಮೋಹ ಗಳನ್ನು ಹೋಗಲಾಡಿಸುವುದು ಮಾತ್ರ. ಅಡ್ಡಗಟ್ಟೆಯನ್ನು ತೆಗೆದುಹಾಕಿದರೆ ಹೊಳೆಯು ತಾನಾಗಿ ಹರಿಯುತ್ತದೆ. ಅದನ್ನು ಯಾರೂ ತಳ್ಳಬೇಕಾಗಿಲ್ಲ. ಅಂತೆಯೇ ಶೋಕಮೋಹಗಳನ್ನು ಹೋಗಲಾಡಿಸಿದರೆ ಅರ್ಜುನನು ತಾನಾಗಿಯೇ ಯುದ್ಧದಲ್ಲಿ ಪ್ರವೃತ್ತನಾಗುತ್ತಾನೆ. ಅವನು ಮಹಾಯೋಧ. ಯುದ್ಧಕ್ಕೆ ಹಿಂಜರಿಯತಕ್ಕವನಲ್ಲ. ಹಿಂದೆ ಎಷ್ಟೋ ಸಲ ಹೋರಾಡಿದವನು. ಯುದ್ಧದಲ್ಲಿ ಹಿಂಸೆ ಪ್ರಾಣಹಾನಿಗಳಾಗುತ್ತವೆಯೆಂಬುದು ಅವನಿಗೆ ತಿಳಿದೇ ಇತ್ತು. ಹಿಂದೆ ಯುದ್ಧಗಳಲ್ಲಿ ಸ್ವತಃ ಹಿಂಸೆ ಪ್ರಾಣಹಾನಿಗಳನ್ನು ಮಾಡಿಯೂ. ಇದ್ದಾನೆ. ಆದ್ದರಿಂದ ಶ್ರೀಕೃಷ್ಣನು ಅರ್ಜುನನಿಗೆ ಯುದ್ಧ ಮಾಡು – ಎಂದು ಹೇಳಿರುವುದು ವಿಧಿಯಲ್ಲ. ಯುದ್ಧವು ಸ್ವತಃ ಪ್ರಾಪ್ತವಾಗಿತ್ತು. ಅಪ್ರಾಪ್ತ ವಾಗಿದ್ದರೆ ವಿಧಿಯಾಗುತ್ತಿತ್ತು. 'ಯುಧ್ಯಸ್ವ ವಿಗತಜ್ವರಃ, ಮಾಮನುಸ್ಮರ ಯುಧ್ಯ ಚ' ಮುಂತಾದ ಮಾತು ಅನುವಾದ ಮಾತ್ರ. ಪ್ರಾಪ್ತವಾದ ಯುದ್ಧವನ್ನೇ ನೆನಪುಮಾಡಿಕೊಡತಕ್ಕ ನುಡಿ. ಅರ್ಜುನನ ಶೋಕ ಮೋಹಗಳನ್ನು ಕಳೆದಮೇಲೆ ಭಗವಂತನು 'ಯಥೇಚ್ಛಸಿ ತಥಾ ಕುರು – ನಿನಗೆ ಇಷ್ಟಬಂದಂತೆ ಮಾಡು' ಎಂದು ಅರ್ಜುನನಿಗೆ ಹೇಳಿದ್ದಾನೆ. ಅವನಿಗೆ ವಿಚಾರಸ್ವಾತಂತ್ರ್ಯವನ್ನು ಬಿಟ್ಟುಕೊಟ್ಟಿದ್ದಾನೆ. ಮೂಲಭೂತವಾದ ಈ ವಿಷಯವನ್ನು ಮನದಟ್ಟುಮಾಡಿಕೊಂಡರೆ, ಗೀತಾಶಾಸ್ತ್ರದ ಉದ್ದೇಶವು ಮನುಷ್ಯಮಾತ್ರನಿಗೆ ಸಹಜವಾದ ಶೋಕಮೋಹಗಳ ಪರಿಹಾರಕ್ಕಾಗಿಯೇ ಹೊರತು ಕರ್ಮವನ್ನು ಮಾಡುತ್ತಿರಬೇಕೆಂದು ಪ್ರೇರಿಸುವುದಕ್ಕಾಗಿ ಅಲ್ಲ– ಎಂಬುದು ನಿಶ್ಚಿತವಾಗಿ ತಿಳಿಯುತ್ತದೆ. ಅರ್ಥಕಾಮಗಳಿಗಾಗಿ ಮನುಷ್ಯನು ಬಾಯಿಬಿಡುತ್ತಾನೆ. ಅದಕ್ಕಾಗಿ ಯಾರ ಪ್ರೇರಣೆಯೂ ಬೇಕಾಗಿಲ್ಲ. ಯಾವ ರೀತಿಯ ಪ್ರವೃತ್ತಿ ಅವನಿಗೆ ಶ್ರೇಯಸ್ಕರ; ಯಾವುದು ಶ್ರೇಯಸ್ಕರವಲ್ಲ–ಎಂಬ ವಿವೇಚನೆಯನ್ನು ಮಾತ್ರ ಶಾಸ್ತ್ರವು ತಿಳಿಸಿಕೊಡುತ್ತದೆ.

ಯೋಗಭಾಷ್ಯದಲ್ಲಿ ಈ ಮಾತು ಬರುತ್ತದೆ: 'ಚಿತ್ತನದೀ ನಾಮ ಉಭಯತೋವಾಹಿನೀ, ವಹತಿ ಕಲ್ಯಾಣಾಯ ವಹತಿ ಪಾಪಾಯ ಚ'. ಎಂದರೆ ಚಿತ್ತವೆಂಬ ನದಿಯು ಎರಡು ಮುಖವಾಗಿ ಹರಿಯುತ್ತದೆ. ಶ್ರೇಯಸ್ಸಿನ ಕಡೆಗೂ ಹರಿಯುತ್ತದೆ, ಪಾಪವೆಂಬ ಕೇಡಿನ ಕಡೆಗೂ ಹರಿಯುತ್ತದೆ (ಯೋಗಸೂತ್ರ ೧-೧೨). ಕಾರಣವೇನೆಂದರೆ, ಚಿತ್ತವು ಸತ್ತ್ವಗುಣ, ರಜೋಗುಣ, ತಮೋಗುಣಗಳೆಂಬ ಗುಣತ್ರಯದ ಸಂಮಿಶ್ರಣ ವಾಗಿದೆ. ಸತ್ತ್ವಗುಣದಿಂದ ಬುದ್ಧಿಯು ಪರಿಷ್ಕೃತವಾಗಿ ಸಾರಾಸಾರಗಳನ್ನು ವಿವೇಚಿಸುವ ಶಕ್ತಿಯನ್ನು ಪಡೆದುಕೊಳ್ಳುತ್ತದೆ. ರಜೋಗುಣದಿಂದ ಆಸೆ ಲೋಭಗಳು ಅಧಿಕವಾಗಿ ದುಃಖನಿರಾಸಗಳ ಗರ್ತಕ್ಕೆ ಮನುಷ್ಯನನ್ನು ತಳ್ಳುತ್ತವೆ. ತಮೋಗುಣದಿಂದ ಬುದ್ಧಿಯು ಮಲಿನವಾಗಿ ವಿವೇಚನಾ ಸಾಮರ್ಥ್ಯವನ್ನು ಕಾಣದೆ, ಮನುಷ್ಯನು ಅಜ್ಞಾನ, ಪ್ರಮಾದ, ಆಲಸ್ಯ, ಮದ, ಮೋಹಗಳಲ್ಲಿ ಮುಳುಗಿಹೋಗುತ್ತಾನೆ. ಈ ಗುಣಗಳಿಲ್ಲದ ಯಾವ ಪ್ರಾಣಿಯೂ ಇಲ್ಲವೆಂದು ಗೀತೆ ಹೇಳುತ್ತದೆ. ಈ ಮೂರು ಗುಣಗಳು ಎಲ್ಲ ಮನುಷ್ಯರಲ್ಲಿ ಇದ್ದರೂ, ಗುಣಗಳ ನ್ಯೂನತೆ ಅತಿರೇಕಗಳ ಕಾರಣದಿಂದ ವ್ಯಕ್ತಿಗಳು ನಾನಾ ಗುಣಸ್ವಭಾವದವರಾಗಿಬಿಡುತ್ತಾರೆ. ಕೆಲವರಲ್ಲಿ ಸತ್ತ್ವಗುಣವು ಅಧಿಕ. ಕೆಲವರಲ್ಲಿ ರಜೋಗುಣವೂ ಕೆಲವರಲ್ಲಿ ತಮೋಗುಣವೂ ಅಧಿಕ ವಾಗಿರುತ್ತವೆ. ಈ ಗುಣತ್ರಯವು ಒಬ್ಬನಲ್ಲಿ ಸದಾ ಒಂದೇ ಪ್ರಕಾರ ವಾಗಿರುತ್ತದೆಯೆಂಬ ನಿಯಮವೂ ಇಲ್ಲ. ನಿಮಿತ್ತಭೇದಗಳಿಂದ ಒಬ್ಬ ನಲ್ಲಿಯೇ ಒಮ್ಮೆ ಸತ್ತ್ವ, ಒಮ್ಮೆ ರಜಸ್ಸು, ಒಮ್ಮೆ ತಮಸ್ಸು ಏರಬಹುದು ಅಥವಾ ಇಳಿಯಬಹುದು. ಈ ಗುಣಗಳು ಒಂದನ್ನೊಂದು ತುಳಿದು ತಮ್ಮ ಪ್ರಭಾವವನ್ನು ಮೆರೆಸಬಹುದು. ಈ ಗುಣತ್ರಯದ ಸಂಮಿಶ್ರಣವನ್ನೇ ಪ್ರಕೃತಿ, ಸ್ವಭಾವ, ನಿಸರ್ಗ – ಎಂದು ಹೇಳುತ್ತಾರೆ. ಭಗವದ್ಗೀತೆ ಹೇಳುತ್ತದೆ –

**ಸದೃಶಂ ಚೇಷ್ಟತೇ ಸ್ವಸ್ಯಾಃ ಪ್ರಕೃತೇರ್ಜ್ಞಾನವಾನಪಿ ।**
**ಪ್ರಕೃತಿಂ ಯಾಂತಿ ಭೂತಾನಿ ನಿಗ್ರಹಃ ಕಿಂ ಕರಿಷ್ಯತಿ ॥ ೪-೩೩**

ನಿಗ್ರಹಃ ಕಿಂ ಕರಿಷ್ಯತಿ ? ಪ್ರಕೃತಿಗೆ ಅನುಗುಣವಾಗಿ ಇಂದ್ರಿಯಗಳ ಸೆಳೆತವು ಪ್ರಬಲವಾದಾಗ ಇಂದ್ರಿಯನಿಗ್ರಹವು ಏನು ಮಾಡಬಲ್ಲದು? ಎಂದು ಶ್ರೀಕೃಷ್ಣನೇ ಹೇಳಿದ್ದಾನೆ. ಹಾಗಿದ್ದರೆ ಇಂದ್ರಿಯನಿಗ್ರಹ ಮಾಡಬೇಕೆಂಬ ಶಾಸ್ತ್ರೋಪದೇಶವು ವ್ಯರ್ಥವಾಯಿತಲ್ಲ! - ಎಂಬ ಶಂಕೆ ಹುಟ್ಟುತ್ತದೆ. ಮನಸ್ಸನ್ನು ನಿಗ್ರಹಿಸುವುದು ಎಂದರೆ ಇಂದ್ರಿಯನಿಗ್ರಹವು ದುಷ್ಕರವೆಂದು

ಅರ್ಜುನನು ಹೇಳಿದಾಗ ಶ್ರೀಕೃಷ್ಣನು ಒಪ್ಪಿಕೊಳ್ಳುತ್ತಾನೆ. ಆದರೆ ಮತ್ತೆ ಮತ್ತೆ ಪ್ರಯತ್ನ ಮಾಡುವುದರಿಂದಲೂ ವಿಷಯಸುಖದಲ್ಲಿ ಕ್ರಮವಾಗಿ ವೈರಾಗ್ಯ ವನ್ನು ಬೆಳೆಸಿಕೊಳ್ಳುವುದರಿಂದಲೂ ಇಂದ್ರಿಯನಿಗ್ರಹವು ಸಾಧ್ಯವೆಂದು ಭಗವಂತನು ಹೇಳಿದ್ದಾನೆ –

**ಅಭ್ಯಾಸೇನ ತು ಕೌಂತೇಯ ವೈರಾಗ್ಯೇಣ ಚ ಗೃಹ್ಯತೇ ॥ ೬-೩೫**

ಪಾತಂಜಲಯೋಗಸೂತ್ರವೂ ಸಹ 'ಅಭ್ಯಾಸವೈರಾಗ್ಯಾಭ್ಯಾಂ ತನ್ನಿರೋಧಃ' (೧-೧೨) ಎಂದು ಹೇಳುತ್ತದೆ. ಪುರುಷಪ್ರಯತ್ನಕ್ಕೆ ಗೀತೆ ವಿಶೇಷವಾದ ಪ್ರಾಧಾನ್ಯವನ್ನು ಕೊಟ್ಟಿದೆ. ಮನುಷ್ಯನ ಪ್ರಯತ್ನಕ್ಕೆ ನಿಲುಕದಿರುವುದು ಯಾವುದೂ ಇಲ್ಲ. ಎಲ್ಲ ಶಾಸ್ತ್ರಗಳೂ ಪುರುಷಕಾರವನ್ನು ಪ್ರಚೋದಿಸಿ, ಯೋಗಭಾಷ್ಯದಲ್ಲಿ ಹೇಳಿದಂತೆ, ಚಿತ್ತನದಿಯನ್ನು ಕಲ್ಯಾಣದ ಕಡೆಗೆ ಹರಿಯುವಂತೆ ತಿರುಗಿಸುವುದೇ ಆಗಿದೆ. ಆ ವಿಧಾನವನ್ನು ಬಿಡಿಸಿ ಬಿಡಿಸಿ ತಿಳಿಯಾದ ನುಡಿಗಳಿಂದ ವಿವರಿಸಿರುವುದು ಭಗವದ್ಗೀತೆಯ ವೈಶಿಷ್ಟ್ಯ. ಆದರೆ ಯಾವ ಪ್ರಯತ್ನವನ್ನೂ ಮಾಡದೆ ಪ್ರಕೃತಿವಶರಾಗಿ ಇಂದ್ರಿಯಗಳ ದಾಸರಾಗಿರುವುದು ಮಾನವನ ಇತಿಹಾಸದಲ್ಲಿರುವ ದುರಂತ. ರಜೋಗುಣ ದಿಂದ ಹುಟ್ಟುವ ಕಾಮ–ಆಸೆ, ಅದಕ್ಕೆ ಅಡ್ಡಿಯಾದಾಗ ಹುಟ್ಟುವ ಕ್ರೋಧ – ಇದೇ ಮಾನವನ ಅಧಃಪತನಕ್ಕೆ ಕಾರಣ.

**ತಸ್ಮಾತ್ತ್ವಮಿಂದ್ರಿಯಾಣ್ಯಾದೌ ನಿಯಮ್ಯ ಭರತರ್ಷಭ ।**
**ಪಾಪ್ಮಾನಂ ಪ್ರಜಹಿ ಹ್ಯೇನಂ ಜ್ಞಾನವಿಜ್ಞಾನನಾಶನಮ್ ॥ ೩-೪೧**

ಅರ್ಜುನ, ಮೊದಲು ನೀನು ಇಂದ್ರಿಯಗಳನ್ನು ವಶಕ್ಕೆ ತಂದುಕೊ. ಆಮೇಲೆ ಜ್ಞಾನವಿಜ್ಞಾನಗಳನ್ನು ನಾಶಮಾಡತಕ್ಕ, ಕ್ರೋಧಜನಕವಾದ ಕಾಮವೆಂಬ ಮಹಾಪಾಪಿಯನ್ನು ಕೊಲ್ಲು! – ಇದು ಶ್ರೀಕೃಷ್ಣನ ಬೋಧೆ. ಎದುರಿಗೆ ಬಂದು ನಿಂತ ಬಹಿರಂಗಶತ್ರುವನ್ನು ಕೊಲ್ಲುವುದು ದೊಡ್ಡ ವಿಷಯವಲ್ಲ. ಅಂತರಂಗಶತ್ರುವಾದ ಕಾಮವನ್ನು ಗಲ್ಲುವುದಿದೆಯಲ್ಲ, ಇದು ಮಹತ್ತರವಾದದ್ದು.

ಎಲ್ಲ ಮಾನವರಲ್ಲಿ ಈ ಮೂರು ಗುಣಗಳಿರುವುದಾದರೂ ಯಾರಲ್ಲಿ ಸತ್ತ್ವಗುಣವು ಅಧಿಕವಾಗಿದ್ದು, ಉಳಿದವೆರಡು ಅತ್ಯಲ್ಪವಾಗಿ ಉಳಿದು ಕೊಂಡಿರುತ್ತವೆಯೋ ಅವರು ದೈವಸಂಪತ್ತಿನವರು. ಯಾರಲ್ಲಿ ಸತ್ತ್ವಗುಣವು ಅಲ್ಪವಾಗಿದ್ದು ರಜೋಗುಣ ತಮೋಗುಣಗಳ ಪ್ರಭಾವವೇ ಅಧಿಕವಾಗಿರು

ತ್ತದೆಯೋ ಅವರು ಆಸುರಸಂಪತ್ತಿನವರು – ಎಂದು ಗೀತೆಯು ಮಾನವಜಾತಿಯನ್ನು ಸ್ಥೂಲವಾಗಿ ಎರಡು ವರ್ಗಗಳನ್ನಾಗಿ ವಿಂಗಡಿಸಿದೆ. ಈ ಎರಡು ಸಂಪತ್ತುಗಳಿರತಕ್ಕವರ ಗುಣಸ್ವಭಾವಗಳನ್ನು ಹದಿನಾರನೆಯ ಅಧ್ಯಾಯದಲ್ಲಿ ವಿಸ್ತಾರವಾಗಿ ವರ್ಣಿಸಲಾಗಿದೆ. ಅಹಿಂಸಾ, ಸತ್ಯ, ಅಕ್ರೋಧ, ದಯೆ, ತ್ಯಾಗ, ಮಾರ್ದವ, ಶೌಚ – ಮೊದಲಾದ ಸಾತ್ತ್ವಿಕ ಗುಣಗಳು ದೈವೀಸಂಪತ್ತಿಗೆ ಸೇರುತ್ತವೆ. ದಂಭ, ದರ್ಪ, ಅಹಂಕಾರ, ಕ್ರೋಧ, ಮದ, ಕರ್ಕಶಸ್ವಭಾವ – ಮೊದಲಾದುವು ರಾಜಸತಾಮಸಗಳ ಗುಂಪಿಗೆ ಸೇರಿದ್ದು, ಆಸುರೀಸಂಪತ್ತಿನ ಗುಣಗಳು. ಆಸುರಸಂಪತ್ತಿನವರು ಕಾಮೋಪಭೋಗವೇ ಜೀವನದ ಪರಮಗುರಿಯೆಂದು ತಿಳಿದಿರುತ್ತಾರೆ. ನೂರಾರು ಆಶಾಪಾಶ ಗಳಿಂದ ಬದ್ಧರಾಗಿರುತ್ತಾರೆ. ಜಗತ್ತಿಗೆ ಕೇಡು ಆಗತಕ್ಕದ್ದು ಈ ಜನರಿಂದ. ದೇವರೇ ಇಲ್ಲವೆಂಬ ನಾಸ್ತಿಕರನ್ನು ಗೀತೆಯು ಆಸುರಸಂಪತ್ತಿನವರಲ್ಲಿ ಸೇರಿಸುತ್ತದೆ. ದೈವೀಸಂಪತ್ತು ಮನುಷ್ಯನನ್ನು ನಿಃಶ್ರೇಯಸದ ಕಡೆಗೆ ಒಯ್ಯುತ್ತದೆ. ಆಸುರೀಸಂಪತ್ತು ಇವನನ್ನು ಸಂಸಾರಚಕ್ರದಲ್ಲಿ ತೊಳಿಸುತ್ತಲೇ ಇರುತ್ತದೆ. 'ದೈವೀಸಂಪದ್ವಿಮೋಕ್ಷಾಯ ನಿಬಂಧಾಯಾಸುರೀ ಮತಾ' (೧೬-೫).

ಮನುಷ್ಯನನ್ನು ಆಸುರೀಸಂಪತ್ತಿನಿಂದ ದೈವೀಸಂಪತ್ತಿನ ಕಡೆಗೆ ಕರೆದೊಯ್ಯುವುದು ಗೀತೋಪದೇಶಗಳ ಪರಮಲಕ್ಷ್ಯವಾಗಿರುತ್ತದೆ. ಎಲ್ಲ ಅಧ್ಯಾಯಗಳ ಕಡೆಯಲ್ಲಿರುವ ಪುಷ್ಪಿಕೆಯಲ್ಲಿ 'ಬ್ರಹ್ಮವಿದ್ಯಾಯಾಂ ಯೋಗ ಶಾಸ್ತ್ರೇ' ಎಂಬ ಮಾತು ಬರುತ್ತದೆ. ಗೀತೆಯಲ್ಲಿ ಹೇಳಿರುವುದು ಬ್ರಹ್ಮವಿದ್ಯೆ, ಅಧ್ಯಾತ್ಮವಿದ್ಯೆ, ಸಮ್ಯಗ್ದರ್ಶನ ಎಂಬುದು ಇದರಿಂದ ಸ್ಫುಟವಾಗುತ್ತದೆ. ಭಗವದ್ಗೀತೆಯು 'ಸರ್ವೋಪನಿಷತ್ತುಗಳ ಸಾರಸಂಗ್ರಹ'ವೆಂದು ಶ್ರೀ ಶಂಕರಾಚಾರ್ಯರು ಪ್ರಶಂಸೆ ಮಾಡಿದ್ದಾರೆ. ಸಮಸ್ತ ಪ್ರಾಚೀನ ದಾರ್ಶನಿಕರೂ ಗೀತೆಯನ್ನು ಪ್ರಸ್ಥಾನತ್ರಯದಲ್ಲಿ ಪರಿಗಣಿಸಿರುವುದರಿಂದ, ಉಪನಿಷತ್ತು, ಬ್ರಹ್ಮಸೂತ್ರ, ಭಗವದ್ಗೀತೆ - ಇವುಗಳಿಗೆ ಏಕವಾಕ್ಯತೆ ಇರಲೇಬೇಕು. ಇವುಗಳು ಪ್ರತಿಪಾದಿಸುವುದರಲ್ಲಿ ತಾತ್ಪರ್ಯಭೇದವಿದೆಯೆಂದು ಆಧುನಿಕ ವಿದ್ವಾಂಸರು ಹೇಳುತ್ತಿರುವುದು ಅಸಂಗತವೆಂದು ಮತ್ತೆ ಹೇಳಬೇಕಾಗಿಲ್ಲ. ಪ್ರಸ್ಥಾನತ್ರಯದಲ್ಲಿ ಗೀತೆಯು ಸಾಧನಪ್ರಸ್ಥಾನವೆಂದು ಖ್ಯಾತವಾಗಿದೆ. ಮುಮುಕ್ಷುವಿಗೆ ಆವಶ್ಯಕವಾದ ಸಾಧನಪ್ರಪಂಚವನ್ನು ಕ್ರೋಢೀಕರಿಸಿ ತಿಳಿಸಿಕೊಟ್ಟಿರುವುದು ಗೀತೆಯ ಇನ್ನೊಂದು ವಿಶೇಷ. ಈ ಕಾರಣದಿಂದಲೇ

ಪುಷ್ಪಿಕೆಗಳಲ್ಲಿ 'ಯೋಗಶಾಸ್ತ್ರೇ' ಎಂಬ ಶಬ್ದವನ್ನು ಸೇರಿಸಿದ್ದಾರೆಂದು ನನ್ನ ಅಭಿಪ್ರಾಯವಿದೆ. ಯೋಗಶಬ್ದಕ್ಕೆ ಅನೇಕಾರ್ಥಗಳಿರುವುದರಿಂದ ಸಾಧನವೆಂಬ ಅರ್ಥವೂ ಹೊಂದುತ್ತದೆ. ಗೀತೆಯಲ್ಲಿ ಪ್ರಸ್ತುತವಾಗಿರುವ ಕರ್ಮಯೋಗ, ಧ್ಯಾನಯೋಗ, ಭಕ್ತಿಯೋಗ, ಜ್ಞಾನಯೋಗಗಳು ಬ್ರಹ್ಮವಿದ್ಯೆಗೆ ಸಾಧನಗಳೇ.

**ಕರ್ಮಯೋಗ**

ಭಗವದ್ಗೀತೆಯು ಬ್ರಹ್ಮವಿದ್ಯೆಯೂ ಮೋಕ್ಷಶಾಸ್ತ್ರವೂ ಆಗಿರುವುದರಿಂದ ಮೋಕ್ಷದೃಷ್ಟಿಯಿಂದಲೇ ಈ ಸಾಧನಗಳನ್ನು ಪರಿಶೀಲಿಸುವುದು ಯುಕ್ತ. ಕರ್ಮವೆಂದರೆ ಕ್ರಿಯೆ, ಕೆಲಸ, ಪ್ರವೃತ್ತಿ. ಹುಟ್ಟಿನಿಂದಲೇ ಮನುಷ್ಯನು ಕರ್ಮದಲ್ಲಿ ತೊಡಗುತ್ತಾನೆ. ಜೀವನಯಾತ್ರೆಗಾಗಿ ವಿಭಿನ್ನ ಕರ್ಮಗಳನ್ನು ನಡೆಸುತ್ತಾನೆ. ಇವೆಲ್ಲವೂ ಕರ್ಮಯೋಗಕ್ಕೆ ಸಂಬಂಧಿಸಿದ ಕರ್ಮಗಳೆ ? ಗೀತೆಯನ್ನು ಪರಿಶೀಲಿಸಿದರೆ ಆಯಾ ವರ್ಣದವರಿಗೆ ಶಾಸ್ತ್ರವಿಹಿತಗಳಾದ ಯಜ್ಞ, ದಾನ, ತಪಸ್ಸು, ರಾಜ್ಯಪಾಲನೆ, ಯುದ್ಧ, ಕೃಷಿ, ವಾಣಿಜ್ಯ, ಪರಿಚರ್ಯೆ ಮೊದಲಾದ ಕೆಲವು ಕರ್ಮಗಳು ಮಾತ್ರ ಸ್ವಧರ್ಮಗಳಾದ್ದರಿಂದ ಅವುಗಳ ಅನುಷ್ಠಾನವು ಕರ್ತವ್ಯವೆಂದು ವಿಧಿಸಿರುವುದು ಕಂಡುಬರುತ್ತದೆ. ಇದನ್ನು ವಿಶಾಲಾರ್ಥದಲ್ಲಿ ತೆಗೆದುಕೊಳ್ಳುವುದು ಸಮುಚಿತವೆಂದು ತೋರುತ್ತದೆ. ಇಲ್ಲದಿದ್ದರೆ ಗ್ರಂಥರಚನೆ, ಸಮಾಜಸೇವೆ, ನೌಕರಿ, ಪ್ರಜಾಪ್ರಭುತ್ವದ ಅಡಿಗಲ್ಲಾದ ರಾಜಕೀಯ ವ್ಯವಹಾರ, ಕೈಗಾರಿಕೆ – ಮುಂತಾದ ಉದ್ಯೋಗಗಳು ಕೈಬಿಟ್ಟು ಹೋಗುತ್ತವೆ. ಈ ಕಾಲದಲ್ಲಿ ಕರ್ಮಸಾಂಕರ್ಯವಾಗಿಬಿಟ್ಟಿದೆಯಾದ್ದರಿಂದ ಗೀತಾಸಂದೇಶವು ಯಾರಿಗೆ ಮುಟ್ಟುತ್ತದೆ ? ಜಿಜ್ಞಾಸುಗಳಿಗೆ ಗೀತೆಯ ಉಪಯುಕ್ತತೆ ಅತ್ಯಲ್ಪವಾದೀತು. ಆದ್ದರಿಂದ ಕರ್ಮಶಬ್ದದ ಅರ್ಥವನ್ನು ವಿಸ್ತರಿಸಿ, ಸಾಮಾನ್ಯ ಧರ್ಮಗಳನ್ನು ಅತಿಕ್ರಮಿಸದಿರುವ, ಸತ್ಯಮಾರ್ಗದ ಎಲ್ಲ ಕರ್ಮಗಳೂ ಕರ್ಮಯೋಗದ ತೆಕ್ಕೆಯೊಳಗೆ ಬರುತ್ತವೆಯೆಂದು ತಿಳಿಯುವುದು ಯುಕ್ತವಾಗಿದೆ.

ಹೀಗೆ ಜಗದ್ವ್ಯವಹಾರದಲ್ಲಿ ತೊಡಗಿದವರು ಫಲಾಭಿಲಾಷೆಯಿಂದಲೇ ಪ್ರವೃತ್ತರಾಗಿರುತ್ತಾರೆ. ಎಷ್ಟು ಎಚ್ಚರಿಕೆಯಿಂದಿದ್ದರೂ ಕಾಮಕ್ರೋಧಗಳು ಒಮ್ಮೊಮ್ಮೆ ತಪ್ಪುದಾರಿಗೆ ತಳ್ಳಿಬಿಡುತ್ತವೆ. ಧರ್ಮಸ್ವರೂಪವನ್ನರಿಯುವುದೂ ಕಠಿಣವಾದದ್ದು. ಹೀಗಾಗಿ ಪಾಪಪುಣ್ಯಗಳು ಗಂಟುಬೀಳುವುದು ತಪ್ಪಿದ್ದಲ್ಲ. ಪ್ರಾರಬ್ಧಕರ್ಮಗಳ ಮೂಟೆಯೊಂದನ್ನು ಹೊತ್ತುಕೊಂಡೇ ಮನುಷ್ಯನು

ಜನ್ಮತಳೆದಿರುತ್ತಾನೆ. ಹೀಗಾಗಿ ಕರ್ಮದ ಮೂಟೆ ಹಿಗ್ಗುತ್ತಲೇ ಇರುತ್ತದೆ. ಕರ್ಮಫಲಗಳಾದ ಸುಖದುಃಖಗಳನ್ನು ಭೋಗಿಸುವುದಕ್ಕಾಗಿ ಮತ್ತೆ ಜನನ, ಮತ್ತೆ ಕರ್ಮಸಂಚಯ. ಈ ಜನನಮರಣಗಳ ಚಕ್ರವು ಸುತ್ತುತ್ತಲೇ ಇರುವುದರಿಂದ ಇದರಲ್ಲಿ ಸಿಕ್ಕಿಹಾಕಿಕೊಂಡ ಪ್ರಾಣಿಯ ಬಿಡುಗಡೆ ಎಂದಿಗಾದೀತು ? ಈ ಸಂಸಾರಚಕ್ರದ ಹಿಡಿತದಿಂದ ಸಡಿಲಿಸಿಕೊಂಡು, ಕರ್ಮಗಳ ಮೂಟೆಯು ಹಿಗ್ಗದಿರುವಂತೆ ನೋಡಿಕೊಳ್ಳಲು, ಮೊದಲು ಗೀತಾಶಾಸ್ತ್ರವು ಒಂದು ಉಪಾಯವನ್ನು ತಿಳಿಸಿಕೊಡುತ್ತದೆ. ಅದೇ ಕರ್ಮಯೋಗ.

ಸ್ವಾರ್ಥಕ್ಕಾಗಿ ಮನುಷ್ಯನು ಫಲಾಭಿಲಾಷೆಯಿಂದ ಕರ್ಮವನ್ನು ಮಾಡುತ್ತಾನೆ. ಫಲಾಭಿಲಾಷೆಯೆಂಬ ಕಾಮವು ಪಾಪಪುಣ್ಯಗಳಿಗೆ ಕಾರಣವಾಗಿ ಈತನನ್ನು ಸಂಸಾರಚಕ್ರದಲ್ಲಿ ಬಂಧಿಸುತ್ತದೆ. ಕಾಮವೇ ಬಂಧಕ, ಕರ್ಮವು ಸ್ವತಃ ಬಂಧಕವಲ್ಲ. ಆದ್ದರಿಂದ ಕರ್ಮದಲ್ಲಿ ಫಲಾಸಕ್ತಿಯನ್ನು ತ್ಯಜಿಸುವುದೇ ಉಪಾಯವೆಂದು ಗೀತೆ ತಿಳಿಸಿಕೊಡುತ್ತದೆ. ಆಗ ಕರ್ಮವು, ವಿಷದ ಹಲ್ಲನ್ನು ಮುರಿದ ಹಾವಿನಂತಾಗಿ ಯಾವ ತೊಂದರೆಯನ್ನೂ ಕೊಡುವುದಿಲ್ಲ. ಸರ್ಪವು ಭಯಂಕರವಾದರೂ ಹಾವಾಡಿಗನು ಅದನ್ನು ಕೊರಳಿಗೆ ಹಾರದಂತೆ ಸುತ್ತಿಕೊಳ್ಳುತ್ತಾನೆ. ಅವನಿಗೆ ಯಾವ ಭಯವೂ ಇಲ್ಲ. ಏಕೆಂದರೆ, ಅದರ ವಿಷದ ಹಲ್ಲನ್ನು ಅವನು ಕಿತ್ತುಹಾಕಿರುತ್ತಾನೆ. ಫಲಾಸಕ್ತಿಯಿಲ್ಲದೆ ಕರ್ಮವನ್ನು ನಡೆಸುವುದು ಸಾಧ್ಯವೇ ಇಲ್ಲವೆಂದು ಕೆಲವರು ವಾದಿಸುವುದುಂಟು. ಅಂಥವರು ತಾಯಿ ಮಗುವಿನ ಶುಶ್ರೂಷೆಯನ್ನೇಕೆ ಮಾಡುತ್ತಾಳೆ ? ಎಂಬುದನ್ನು ನೋಡಬೇಕು. ತಾಯಿಗೆ ಯಾವ ಸ್ವಾರ್ಥವೂ ಇಲ್ಲ. ಮಗುವಿಗಾಗುವ ಸಂತೋಷವೇ ಫಲವೆಂದು ಹೇಳುವುದಾದರೆ, ಕರ್ಮಕ್ಕೆ ಈಶ್ವರಪ್ರೀತಿಯೇ ಫಲವೆಂದಾಗಲಿ. ಬಾಧೆಯೇನೂ ಇಲ್ಲ. ಈಶ್ವರನು ಪ್ರೀತನಾಗಿ ತನಗೊಂದು ಫಲವನ್ನು ನೀಡಲಿ – ಎಂದು ಬಯಸಿದರೆ ಅದು ನಿಷ್ಕಾಮಕರ್ಮವಾಗುವುದಿಲ್ಲ. ಇದು ನನ್ನ ಕೆಲಸ – ಎಂಬ ಮಮಕಾರದ ಸಂಗವನ್ನು ತ್ಯಜಿಸಿ, ಇದು ಭಗವಂತನ ಕೆಲಸ ಎಂಬ ಬುದ್ಧಿ ದೃಢವಾಗಿರಬೇಕು. ಇಂತಹ ನಿಷ್ಕಾಮಕರ್ಮವನ್ನು ಅನಾಸಕ್ತಿಯೋಗದಿಂದ ಆಚರಿಸತಕ್ಕ ಕರ್ತನಿಗೆ ಪಾಪಪುಣ್ಯಗಳ ಲೇಪವಿಲ್ಲವೆಂಬುದು ಗೀತೆಯ ಸಿದ್ಧಾಂತವಾಗಿದೆ. ಪುಣ್ಯವೂ ಸಹ ಫಲಭೋಗಕ್ಕಾಗಿ ಜನ್ಮಾಂತರವನ್ನುಂಟು ಮಾಡುವುದರಿಂದ ಬಂಧಕವೆಂದು ವೇದಾಂತವು ನಿರ್ಣಯಿಸಿದೆ. ಈ

ರೀತಿಯಲ್ಲಿ ವರ್ತಮಾನ ಮತ್ತು ಆಗಾಮಿಕರ್ಮಗಳ ಸಂಗ್ರಹವಾಗುವು ದಿಲ್ಲವಾದ್ದರಿಂದ ಕರ್ಮಯೋಗಿಯ ಕರ್ಮದ ಮೂಟೆ ಹಿಗ್ಗುವುದಿಲ್ಲ. ಪ್ರಾಚೀನಕರ್ಮಗಳ ಸಂಗ್ರಹವೊಂದು ಉಳಿದುಕೊಂಡಿರುತ್ತದೆ. ಆತ್ಮಜ್ಞಾನ ವಾಗುವವರೆಗೂ ಇದರ ಫಲವನ್ನನುಭವಿಸುವುದು ತಪ್ಪುವುದಿಲ್ಲ. ಕರ್ಮ ಯೋಗದಿಂದ ಚಿತ್ತಶುದ್ಧಿಯೆಂಬ ಒಂದು ಪ್ರಯೋಜನವು ಈಶ್ವರಾನುಗ್ರಹ ದಿಂದ ದೊರಕುತ್ತದೆ.

ಮನುಷ್ಯನು ನಾನಾಜನ್ಮಗಳಲ್ಲಿ ಮಾಡಿದ ಕರ್ಮಗಳಿಂದಾದ ಸಂಸ್ಕಾರ ವೆಂಬ ಕೊಳೆ ಚಿತ್ತಕ್ಕೆ ಅಂಟಿಕೊಂಡಿರುತ್ತದೆ. ಈ ಸಂಸ್ಕಾರದಿಂದ ಕಾಮ ಕ್ರೋಧಾದಿಗಳು ಉದ್ಭವಿಸಿ ಫಲಾರ್ಥವಾಗಿ ಮನುಷ್ಯನನ್ನು ಮತ್ತೆ ಕರ್ಮ ಪಥದಲ್ಲಿ ದೂಡುತ್ತವೆ. ಚಿತ್ತಶುದ್ಧಿಯಾದಂತೆ ಕ್ರಮವಾಗಿ ನಿತ್ಯಾನಿತ್ಯ ವಸ್ತುವಿವೇಕ, ವೈರಾಗ್ಯಾದಿಗಳು ಉಂಟಾಗಿ ದೈವೀಸಂಪತ್ತು ವರ್ಧಿಸುತ್ತ ಹೋಗುತ್ತದೆ. ಮುಖ್ಯವಾಗಿ ಚಿತ್ತಚಾಂಚಲ್ಯವು ದೂರವಾಗುವುದರಿಂದ, ಮುಂದಿನ ಧ್ಯಾನಯೋಗಕ್ಕೆ ಏರುವ ಅರ್ಹತೆ ಬರುತ್ತದೆ. ಈಶ್ವರಪ್ರೀತಿ, ಚಿತ್ತಶುದ್ಧಿಗಳೆರಡೂ ನಿಷ್ಕಾಮಕರ್ಮಯೋಗದ ಫಲಗಳೆಂದಿಟ್ಟುಕೊಂಡರೂ ಅವು ಭಗವತ್ಸಾಂನಿಧ್ಯದ ಕಡೆಗೆ ಸಾಧಕನನ್ನು ಒಯ್ಯುವುದರಿಂದ ಕಾಮಗಳೆನ್ನಿಸಿಕೊಳ್ಳುವುದಿಲ್ಲ. ಕರ್ಮಯೋಗಿಗೆ ಪರಮಾತ್ಮನಲ್ಲಿ ಭಕ್ತಿಯು ಅತ್ಯಾವಶ್ಯಕ. ಭಕ್ತಿಯಿಲ್ಲದೆ ಈಶ್ವರಾರ್ಪಣಬುದ್ಧಿಯೇ ಜನಿಸುವುದಿಲ್ಲ.

ಈ ಕರ್ಮಯೋಗದಲ್ಲಿ ತೊಡಗಿದ್ದರೂ ಪೂರ್ವಕರ್ಮವಶದಿಂದ ಸಾಧಕನಲ್ಲಿ ಆಗಾಗ ಫಲಾಸಕ್ತಿಯು ಎದ್ದುಕೊಳ್ಳಬಹುದು. ಏಕೆಂದರೆ, ಅವನು ಗೃಹಸ್ಥನಾಗಿದ್ದು ಲೋಕವ್ಯವಹಾರದಲ್ಲಿ ತೊಡಗಿರುತ್ತಾನೆ. ಕುಟುಂಬಭರಣದ ಕರ್ತವ್ಯವೂ ಅವನಲ್ಲಿರುತ್ತದೆ. ಆದ್ದರಿಂದ ಆಕರ್ಷಣೆಗಳಿಗೆ ಬಲಿಯಾಗು ವುದು ಸಹಜ. ಆದರೂ ಪ್ರಯತ್ನದಿಂದ ಆಕರ್ಷಣೆಯನ್ನು ನಿಗ್ರಹಿಸುತ್ತ, ಕಾಮನೆಗಳನ್ನು ನಿಗ್ರಹಿಸುವ ಶಕ್ತಿಯನ್ನು ಕೊಡೆಂದು ಭಗವಂತನಿಗೆ ಶರಣಾಗುವುದು ಉತ್ತಮಸಾಧಕನ ಲಕ್ಷಣವಾಗಿರುತ್ತದೆ. ಇದಿಷ್ಟು ಗೀತೆಯಲ್ಲಿ ಹೇಳಿದ ಕರ್ಮಯೋಗದ ಸಾರಾಂಶವಾಗಿದೆ. ರಾಷ್ಟ್ರಕ್ಕಾಗಿ, ಸಮಾಜಕ್ಕಾಗಿ, ಕುಟುಂಬಕ್ಕಾಗಿ, ಕಡೆಗೆ ತನ್ನ ದೇಹಪೋಷಣೆಗಾಗಿ ಸಹ ತಾನು ಮಾಡುತ್ತಿರುವ ಕರ್ಮವೆಲ್ಲವೂ ಈಶ್ವರಾಜ್ಞೆ, ಈಶ್ವರಪ್ರೀತಿಗಾಗಿ, ನನ್ನದೇನೂ ಇಲ್ಲ – ಎಂಬ ನಿಶ್ಚಯವು ದೃಢವಾಗಿ ಬೇರೂರಿತೆಂದರೆ ನಿಷ್ಕಾಮಕರ್ಮಯೋಗವು ಸಿದ್ಧಿಸಿತೆಂದು ತಿಳಿಯಬೇಕು.

## ಧ್ಯಾನಯೋಗ

ನಿಷ್ಕಾಮಕರ್ಮದಿಂದ ಚಿತ್ತಶುದ್ಧಿಯಾಗುತ್ತದೆಯೆಂಬುದು ದಿಟವಾದರೂ ಕರ್ಮವು ಸ್ವಯಂಪೂರ್ಣವಾದ ಸಾಧನವಲ್ಲ. ಧ್ಯಾನಯೋಗವೂ ಬೇಕು. ನಾನಾ ಜನ್ಮಗಳಲ್ಲಿ ಮಾಡಿದ ಕುಕರ್ಮಗಳ ಸಂಸ್ಕಾರದಿಂದ ಜಡ್ಡುಗಟ್ಟಿದ ಚಿತ್ತದ ಕೊಳೆ ಸುಲಭವಾಗಿ ಹೋಗುವುದಿಲ್ಲ. ಕಿಲುಬುಗಟ್ಟಿದ ತಾಮ್ರದ ಪಾತ್ರೆಗೆ ಉಪ್ಪು ಹುಳಿ ಹಚ್ಚಿ, ಮಣ್ಣು ಬೂದಿಗಳಿಂದ ಉಜ್ಜಿದಾಗ ಕಿಲುಬು ಸಡಿಲುತ್ತದೆ. ಅನಂತರ ಅದನ್ನು ನಿರ್ಮಲವಾದ ಜಲದಿಂದ ತೊಳೆಯ ಬೇಕಾಗುತ್ತದೆ. ನಿರ್ಮಲಜಲದ ಕಾರ್ಯವನ್ನು ಇಲ್ಲಿ ಧ್ಯಾನಯೋಗವು ಮಾಡುತ್ತದೆ. ಧ್ಯಾನವು ಜಲವಿದ್ದಂತೆ. ನಿತ್ಯಶುದ್ಧನಾದ ಭಗವಂತನ ಸಂಪರ್ಕದಿಂದ ಚಿತ್ತವು ನಿರ್ಮಲವಾಗುತ್ತದೆ. ಇಲ್ಲಿ ವಿವಕ್ಷಿತವಾಗಿರುವುದು ಭಕ್ತಿಪೂರ್ವಕವಾದ ಭಗವಂತನ ಧ್ಯಾನ. ಕರ್ಮಯೋಗದಿಂದ ಚಿತ್ತದ ಕಶ್ಮಲವು ಸಡಿಲಿದಮೇಲೆ ಧ್ಯಾನಯೋಗವೆಂಬ ನಿರ್ಮಲಜಲದಲ್ಲಿ ಚಿತ್ತವನ್ನು ಮುಳುಗಿಸಿದರೆ ಅದರ ಕಶ್ಮಲವು ಹೋಗುತ್ತದೆ. ಹಿಂದಿನ ಮಲಿನ ಸಂಸ್ಕಾರಗಳ ನಿವೃತ್ತಿಯೇ ಶುದ್ಧಿ.

ಧ್ಯಾನ, ಉಪಾಸನೆ – ಇವೆರಡೂ ಒಂದೇ ಅರ್ಥದ ಶಬ್ದಗಳು. ಭಗವಂತನನ್ನು ಏಕಾಗ್ರಚಿತ್ತದಿಂದ ಚಿಂತಿಸುವುದು ಧ್ಯಾನ. ಸಗುಣನೂ ಸಾಕಾರನೂ ಆದ ಈಶ್ವರನ ಧ್ಯಾನವು ವ್ಯಕ್ತೋಪಾಸನೆ. ನಿರ್ಗುಣನೂ ನಿರಾಕಾರನೂ ಆದ ಆತ್ಮನ ಧ್ಯಾನವು ಅವ್ಯಕ್ತೋಪಾಸನೆ. ಸಾಧಕನು ಮೊದಲು ವ್ಯಕ್ತೋಪಾಸನೆಯಲ್ಲಿ ತೊಡಗಿ, ಅಭ್ಯಾಸಮಾಡಿದಮೇಲೆ ಅವ್ಯಕ್ತೋಪಾಸನೆ ಸಾಧ್ಯವಾಗುವುದು. ದೇವತಾರ್ಚನೆಯು ಎಂದರೆ – ಮೂರ್ತಿಪೂಜೆಯು ಧ್ಯಾನಯೋಗವನ್ನೇರುವುದಕ್ಕೆ ಒಂದು ಸೋಪಾನ. ವಿಶ್ವರೂಪಾಧ್ಯಾಯದಲ್ಲಿ ಭಗವಂತನ ನಾನಾವಿಭೂತಿಗಳನ್ನು ತಿಳಿಸಲಾಗಿದೆ. ಇಷ್ಟವಾದ ಯಾವುದೇ ಒಂದು ವಿಭೂತಿಯ ಧ್ಯಾನವು ವ್ಯಕ್ತೋಪಾಸನೆಯಾಗುತ್ತದೆ. ನಿರಂತರವಾಗಿ ಧ್ಯಾನದಲ್ಲಿ ತೊಡಗಿದಾಗ ನಿತ್ಯಕರ್ಮಗಳು ಬಿಟ್ಟುಹೋದರೂ ದೋಷ ವಿಲ್ಲವೆಂದು ತಿಳಿಯಬೇಕು. ಕರ್ಮಯೋಗಿಯು ವ್ಯಕ್ತೋಪಾಸನೆಯನ್ನು ಯಥಾಶಕ್ತಿಯಾಗಿ ಮಾಡುತ್ತಿರುವುದು ಶ್ರೇಯಸ್ಕರ. ಪ್ರಣವೋಪಾಸನೆಯು ನಿರ್ಗುಣೋಪಾಸನೆಯಲ್ಲಿ ಸೇರುತ್ತದೆ. ಈ ಅರ್ಹತೆ ಬಂದವನು ಸತತವೂ ಬ್ರಹ್ಮಚಿಂತನದಲ್ಲಿ ತೊಡಗಿರುವುದರಿಂದ ಕರ್ಮಿಗಳಿಗೆ ಇದು ಸಾಧ್ಯ ವಾಗತಕ್ಕದ್ದಲ್ಲ.

## ಭಕ್ತಿಯೋಗ

ಕರ್ಮಯೋಗ ಧ್ಯಾನಯೋಗಗಳು ಭಕ್ತಿಯೋಗಕ್ಕೆ ದ್ವಾರಗಳು. ಕರ್ಮವು ಭಗವದಾರಾಧನಾರ್ಥವಾಗಿ ನಡೆಯತಕ್ಕದ್ದು, ಧ್ಯಾನವು ನೇರವಾಗಿ ಭಗವಂತನನ್ನೇ ಉದ್ದೇಶಿಸಿದ್ದು. ಕರ್ಮಯೋಗದಿಂದ ವಿಶೇಷವಾಗಿ ಚಿತ್ತದ ತಮೋಗುಣವೂ ಧ್ಯಾನಯೋಗದಿಂದ ರಜೋಗುಣವೂ ನಾಶವಾಗಿ ಸತ್ತ್ವಗುಣವು ಚಿತ್ತದಲ್ಲಿ ಉಳಿದುಕೊಂಡಿರುತ್ತದೆ. ಆಗ ಭಕ್ತಿಯು ಪ್ರಾಧಾನ್ಯ ವನ್ನು ಪಡೆದುಕೊಳ್ಳುತ್ತದೆ.

**ಮನ್ಮನಾ ಭವ ಮದ್ಭಕ್ತೋ ಮದ್ಯಾಜೀ ಮಾಂ ನಮಸ್ಕುರು ।**
**ಮಾಮೇವೈಷ್ಯಸಿ ಯುಕ್ತ್ವೈವಮಾತ್ಮಾನಂ ಮತ್ಪರಾಯಣಃ ॥ ೯-೩೪**

ಇತ್ಯಾದಿ ಶ್ಲೋಕಗಳಿಂದ ಶ್ರೀಕೃಷ್ಣನು ಭಕ್ತಿಯನ್ನು ವಿಶೇಷವಾಗಿ ಹೊಗಳಿದ್ದಾನೆ. ಪರಮಾತ್ಮಪ್ರಾಪ್ತಿಸಾಧನಗಳಲ್ಲಿ ಭಕ್ತಿಯೇ ಪ್ರಧಾನವಾದ ಸಾಧನವೆಂದು ಗೀತೆಯು ಸಾರುತ್ತದೆ. ಭಗವಂತನಲ್ಲಿ ನಿರತಿಶಯವಾದ ಪ್ರೇಮವೇ ಭಕ್ತಿ. ಈ ಭಕ್ತಿಮಾರ್ಗದಲ್ಲಿ ನಿರತರಾದವರಿಗೆ ಭಗವದನುಗ್ರಹ ದಿಂದ ಸಮ್ಯಗ್ಜ್ಞಾನವು ಪ್ರಾಪ್ತವಾಗುತ್ತದೆಯೆಂದು ಗೀತೆಯಲ್ಲಿ ಹೇಳಿದೆ.

**ತೇಷಾಂ ಸತತಯುಕ್ತಾನಾಂ ಭಜತಾಂ ಪ್ರೀತಿಪೂರ್ವಕಮ್ ।**
**ದದಾಮಿ ಬುದ್ಧಿಯೋಗಂ ತಂ ಯೇನ ಮಾಮುಪಯಾಂತಿ ತೇ ॥**
**೧೦-೧೦**

ಎಂತಹ ದುಷ್ಟನಾಗಿದ್ದರೂ ಹಿಂದಿನ ಪುಣ್ಯಬಲದಿಂದ ಈಶ್ವರನಲ್ಲಿ ಭಕ್ತಿಯುಂಟಾದರೆ, ಭಕ್ತಿಮಾಹಾತ್ಮ್ಯದಿಂದಲೇ ಅವರಿಗೆ ಧರ್ಮಬುದ್ಧಿ ಯುಂಟಾಗುವುದೆಂದೂ ಮುಂದೆ ಅವರು ಮೋಕ್ಷವನ್ನು ಪಡೆಯಲು ಅರ್ಹ ರಾಗುತ್ತಾರೆಂದೂ ಅವರಿಗೆ ತಾನೇ ಕೈಹಿಡಿದು ದಾರಿ ತೋರಿಸುವುದಾಗಿಯೂ ಶ್ರೀಕೃಷ್ಣನು ಸ್ಪಷ್ಟವಾಗಿ ತಿಳಿಸಿದ್ದಾನೆ (೯–೩೦, ೩೧). ಪರಾಭಕ್ತಿಯೇ ಜ್ಞಾನ. ಜ್ಞಾನಿಯು ಭಕ್ತರಲ್ಲಿ ಶ್ರೇಷ್ಠನೆಂದು ಗೀತೆ ಹೇಳುತ್ತದೆ. ಕರ್ಮಯೋಗ ಧ್ಯಾನ ಯೋಗಗಳಿಂದ ಚಿತ್ತಶುದ್ಧಿಯಾದಮೇಲೆ ಭಕ್ತಿಯೋಗದಿಂದ ಆತ್ಮಜ್ಞಾನವು ಪ್ರಾಪ್ತವಾಗುತ್ತದೆಯೆಂದು ಗೀತೆಯ ಸಿದ್ಧಾಂತ.

## ಜ್ಞಾನಯೋಗ

ಬ್ರಹ್ಮಾಂಡದಲ್ಲಿರುವ ಜಡವಸ್ತುಗಳೆಲ್ಲವೂ ಪರಮಾತ್ಮನ ಅಪರಾಪ್ರಕೃತಿ.

ಚೈತನ್ಯಯುಕ್ತವಾದ ಜೀವರಾಶಿಯೆಲ್ಲವೂ ಆತನ ಪರಾಪ್ರಕೃತಿ. ಬ್ರಹ್ಮಾಂಡದ ಒಂದಂಶವಾದ ಪಿಂಡಾಂಡವೆಂಬ ಈ ಶರೀರದಲ್ಲಿ ಈ ಪ್ರಕೃತಿದ್ವಯವು ಇದ್ದೇ ಇದೆ. ಈ ಶರೀರವು ಕ್ಷೇತ್ರವೆಂದೂ ಇದನ್ನು ತಿಳಿಯುವ ಜೀವನು ಕ್ಷೇತ್ರಜ್ಞನೆಂದೂ ಗೀತೆಯು ಹೇಳುತ್ತದೆ. ಈ ಕ್ಷೇತ್ರಕ್ಷೇತ್ರಜ್ಞರ ತಾತ್ತ್ವಿಕಜ್ಞಾನವೇ ಸಮ್ಯಗ್ಜ್ಞಾನ. ಇದನ್ನು ಪಡೆದವನು ಜ್ಞಾನಿ. ಬ್ರಹ್ಮಾಂಡವೆಲ್ಲವನ್ನೂ ಅರಿತುಕೊಂಡಿರುವವನು ಸರ್ವಜ್ಞ. ಆದ್ದರಿಂದ 'ಕ್ಷೇತ್ರಕ್ಷೇತ್ರಜ್ಞಯೋರ್ಜ್ಞಾನಂ ಯತ್ತಜ್ಜ್ಞಾನಂ ಮತಂ ಮಮ' ಎಂದು ಶ್ರೀಕೃಷ್ಣನು ಉಪದೇಶಿಸಿದ್ದಾನೆ (೧೩-೨). ಪ್ರಕೃತಿಯೆಂದರೆ ಪರಮಾತ್ಮನ ಮಾಯಾಶಕ್ತಿ. ಅದು ಅತಿರಿಕ್ತ ವಸ್ತುವಲ್ಲ. ಏವಂಚ ಅದ್ವಿತೀಯನಾದ ಪರಮಾತ್ಮನೇ ಸರ್ವ. ಸರ್ವಜ್ಞನೆಂದರೆ ಬ್ರಹ್ಮಜ್ಞನೆಂದರ್ಥ. ಯೋಗಶಬ್ದವನ್ನೂ ಗೀತೆಯಲ್ಲಿ ಅನೇಕಾರ್ಥಗಳಲ್ಲಿ ಬಳಸಲಾಗಿದೆ. ಪ್ರಕೃತದಲ್ಲಿ ಯೋಗವೆಂದರೆ ಸಮ್ಯಗ್ದರ್ಶನಕ್ಕೆ ಸಾಧನ. ಜ್ಞಾನವೆಂಬ ಯೋಗ ಜ್ಞಾನಯೋಗ.

ಎರಡನೆಯ ಅಧ್ಯಾಯದಲ್ಲಿ ಹೇಳಿದ ಸ್ಥಿತಪ್ರಜ್ಞನ ಲಕ್ಷಣಗಳೆಲ್ಲವೂ ಸಾಧಕನಾದ ಮುಮುಕ್ಷುವಿಗೆ ಸಾಧನಗಳು. ಅಂತೆಯೇ 'ಅಮಾನಿತ್ವಮದಂಭಿತ್ವಮಹಿಂಸಾಕ್ಷಾಂತಿರಾರ್ಜವಮ್' ಮೊದಲಾದವೂ (೧೩-೭) ಸಮ್ಯಗ್ದರ್ಶನಕ್ಕೆ ಸಾಧನಗಳು. ಇದನ್ನು ವಿವೇಚಿಸಿದರೆ ಅಮಾನಿತ್ವ ಮೊದಲಾದವು ವಿವಿಧಾಕೃತಿಯ ಜ್ಞಾನಗಳೇ ಎಂದು ಪರ್ಯವಸಾನವಾಗುತ್ತದೆ. ಆದರೆ ಇವು ವೃತ್ತಿಜ್ಞಾನಗಳು. ಅಂತಃಕರಣದ ವ್ಯಾಪಾರಗಳು. ಸಮ್ಯಗ್ದರ್ಶನ, ಸಮ್ಯಗ್ಜ್ಞಾನ, ಬ್ರಹ್ಮಾವಗತಿ, ಆತ್ಮಜ್ಞಾನ, ಆತ್ಮಾನುಭೂತಿ —ಎಂಬುದು ವೃತ್ತಿಜ್ಞಾನವಲ್ಲ. ಅದು ಆತ್ಮಸ್ವರೂಪವೇ. 'ಸತ್ಯಂ ಜ್ಞಾನಮನಂತಂ ಬ್ರಹ್ಮ'.

ಕರ್ಮಯೋಗ, ಧ್ಯಾನಯೋಗ, ಭಕ್ತಿಯೋಗ, ಜ್ಞಾನಯೋಗಗಳು ಆತ್ಮಜ್ಞಾನಕ್ಕೆ ಸೋಪಾನಕ್ರಮದಿಂದ ಸಾಧನಗಳಾಗುತ್ತವೆ. ಭಕ್ತಿಯು ಮಾತ್ರ ಎಲ್ಲ ಯೋಗಗಳಲ್ಲಿಯೂ ಅನುಸ್ಯೂತವಾಗಿ ಇದ್ದೇ ಇರಬೇಕು. ಅದಿಲ್ಲದಿದ್ದರೆ ಇದಾವುದೂ ಯೋಗವೆನಿಸುವುದಿಲ್ಲ ಎಂಬುದನ್ನು ಗೀತೆಯು ಪ್ರತಿಪಾದಿಸುತ್ತಲೇ ಬಂದಿದೆ. ಈ ಸಾಧನಗಳನ್ನು ಶ್ರದ್ಧೆಯಿಂದ ಅನುಷ್ಠಾನಮಾಡಿದಾಗ ಕ್ಷೇತ್ರ, ಕ್ಷೇತ್ರಜ್ಞ, ಪರಮಾತ್ಮ – ಎಂಬಿವು ಬೇರೆ ಬೇರೆಯಾದವುಗಳಲ್ಲ, ಪರಮಾತ್ಮನೆಂಬ ಒಂದೇ ತತ್ತ್ವ – ಎಂಬ ಅಭೇದ ಜ್ಞಾನವುಂಟಾಗುತ್ತದೆ. ಈ ನಿಶ್ಚಯವೇ ಜ್ಞಾನನಿಷ್ಠೆ.

**ಪರಮಾತ್ಮ**

ಲೋಕದಲ್ಲಿ ಜನರು ಪರಮಾತ್ಮ, ಭಗವಂತ, ದೇವರು – ಎಂದು ಭಕ್ತಿಯಿಂದ ನಡೆದುಕೊಳ್ಳುತ್ತಾರಾದರೂ ಆತನ ನಿಜಸ್ವರೂಪವೇನೆಂಬು ದನ್ನು ವಿಚಾರ ಮಾಡಿಯೇ ಇರುವುದಿಲ್ಲ. ತಮ್ಮನ್ನು ವಿಚಾರವಾದಿಗಳೆಂದು ಕರೆದುಕೊಳ್ಳತಕ್ಕ ಇನ್ನೂ ಕೆಲವರು ಭಗವದ್ಗೀತೆಯನ್ನು ಅಧ್ಯಯನ ಮಾಡಿ ಪೂರ್ವಗ್ರಹವಿಲ್ಲದೆ ವಿಚಾರಮಾಡಿದ್ದರೆ, ದೇವರಿಲ್ಲವೆಂಬ ನಾಸ್ತಿಕವಾದ ವಾಗಲಿ, ಮೂರ್ತಿಪೂಜೆಯು ಮೌಢ್ಯವೆಂಬ ಮರುಳುವಾದವಾಗಲಿ ಹುಟ್ಟುತ್ತಲೇ ಇರಲಿಲ್ಲ. ಯಾವ ವಿಚಾರವಾದಿಯೂ 'ನಾನು' ಎಂಬ ವಸ್ತುವನ್ನು ನಿರಾಕರಿಸಲಾರ. ಯಾವನು ನಿರಾಕರಿಸುತ್ತಾನೋ ಅವನಾದರೂ 'ನಾನು' ಎಂದುಕೊಳ್ಳುತ್ತ ಇರಲೇಬೇಕಷ್ಟೆ! ಆ ನಿರಾಕರ್ತನೇ ಆತ್ಮನೆಂದೂ ಆತ್ಮನ ಮೂಲಾನ್ವೇಷಣೆಯನ್ನು ಮಾಡುತ್ತ ಹೋದಾಗ ತಿಳಿದುಬರುವ ಸಾರವಾದ ತತ್ತ್ವವೇ ಪರಮಾತ್ಮನೆಂದೂ ವೇದಾಂತದ ಸಿದ್ಧಾಂತವಾಗಿದೆ. ಇದನ್ನೇ ಭಗವದ್ಗೀತೆಯು ಮನವರಿಕೆಮಾಡಿಕೊಟ್ಟಿದೆ. ಪರಮಾತ್ಮನಲ್ಲಿರುವ ಅದ್ಭುತವಾದ ಮಾಯಾಶಕ್ತಿಯಿಂದ ತೋರುವ ನಾಮರೂಪಗಳನ್ನು ಉಪಾಧಿಯೆನ್ನುತ್ತಾರೆ. ಇಂತಹ ನಾಮರೂಪಗಳಿಂದ ಕೂಡಿದ ಸೋಪಾಧಿಕ ವಾದ ಮತ್ತು ನಾಮರೂಪಗಳಿಲ್ಲದೆ ನಿರುಪಾಧಿಕವಾದ ಪರಮಾತ್ಮನ ಎರಡು ಸ್ವರೂಪಗಳನ್ನೂ ಭಗವದ್ಗೀತೆಯು ವಿವರಿಸಿ, ನಿರುಪಾಧಿಕಸ್ವರೂಪವೇ ಪರತತ್ತ್ವವೆಂದು ತಿಳಿಸಿಕೊಟ್ಟಿದೆ. ಶ್ರೀಕೃಷ್ಣಾದ್ಯವತಾರಗಳೆಲ್ಲವೂ ಸೋಪಾಧಿಕ ಗಳು –

**ಅವಜಾನಂತಿ ಮಾಂ ಮೂಢಾ ಮಾನುಷೀಂ ತನುಮಾಶ್ರಿತಮ್ ।**
**ಪರಂ ಭಾವಮಜಾನಂತೋ ಮಮ ಭೂತಮಹೇಶ್ವರಮ್ ॥ ೯-೧೧**

ಮತ್ತು "ಧರ್ಮಸಂಸ್ಥಾಪನೆಗಾಗಿ ನಾನು ಅವತರಿಸುತ್ತೇನೆ, ನನಗೆ ಕರ್ತವ್ಯವೇನೂ ಇಲ್ಲದಿದ್ದರೂ ಕರ್ಮವನ್ನು ಮಾಡುತ್ತೇನೆ, ನನ್ನನ್ನು ಯಾವ ಕರ್ಮಗಳೂ ಬಂಧಿಸಲಾರವು, ಪಾಪಿಗಳನ್ನು ನಾನು ಆಸುರಯೋನಿಗೆ ತಳ್ಳುತ್ತೇನೆ, ಭಕ್ತರನ್ನು ನಾನು ಪ್ರೀತಿಸುತ್ತೇನೆ, ಸೃಷ್ಟಿಸ್ಥಿತಿಲಯಗಳಿಗೆ ನಾನೇ ಕರ್ತ, ಯಜ್ಞದ ಭೋಕ್ತನೂ ನಾನೇ" ಎಂದ ಗೀತೋಕ್ತಿಗಳು ಸಗುಣನೂ ಸೋಪಾಧಿಕನೂ ಆದ ಪರಮಾತ್ಮನ ವಚನಗಳು. ನಿರುಪಾಧಿಕನಾದ ಪರಮಾತ್ಮನ ನಿಜಸ್ವರೂಪವನ್ನು ವರ್ಣಿಸುವಾಗ ಉಪನಿಷತ್ತುಗಳೂ

ಗೀತೆಯೂ ಬ್ರಹ್ಮ ಎಂಬ ನಪುಂಸಕಲಿಂಗದ ಶಬ್ದವನ್ನು ಬಳಸುತ್ತವೆ. ಆತ್ಮಶಬ್ದವೂ ವಿಶೇಷವಾಗಿದೆ. ಪುರುಷ ಎಂಬ ಶಬ್ದದ ಬಳಕೆ ವಿರಳ. ಗೀತೆ ಹೇಳುತ್ತದೆ – "ಬ್ರಹ್ಮನು ಅಕ್ಷರ, ಅನಿರ್ದೇಶ್ಯ, ಸರ್ವತ್ರಗ, ಅಚಿಂತ್ಯ, ಕೂಟಸ್ಥ, ಅಚಲ (೧೨-೩), ಅನಾದಿಮತ್, ಪರಂಬ್ರಹ್ಮ ನ ಸತ್, ನ ಅಸತ್, ಸರ್ವೇಂದ್ರಿಯಗುಣಾಭಾಸ, ಸರ್ವೇಂದ್ರಿಯವಿವರ್ಜಿತ" (೧೩-೧೪). ಉಪನಿಷತ್ತುಗಳಲ್ಲಂತೂ "ಅದ್ರೇಶ್ಯಂ, ಅಗೋತ್ರಂ, ಅವರ್ಣಂ, ಅಚಕ್ಷುಃ, ಶ್ರೋತ್ರಂ, ಅಪಾಣಿಪಾದಂ, ನಿತ್ಯಂ, ವಿಭುಂ, ಸರ್ವಗತಂ, ಸುಸೂಕ್ಷ್ಮಂ, ಅವ್ಯಯಂ (ಮುಂಡಕೋಪನಿಷತ್ತು ೧-೧) – ಎಂದು ನಿರ್ಗುಣವೂ ರೂಪರಹಿತವೂ ಆದ ನಿರೂಪಾಧಿಕಸ್ವರೂಪವನ್ನು ವಿಶೇಷವಾಗಿ ತಿಳಿಸಲಾಗಿದೆ. ಆತ್ಮನು ಗಂಡಸೂ ಅಲ್ಲ, ಹೆಂಗಸೂ ಅಲ್ಲ, ನಪುಂಸಕನೂ ಅಲ್ಲ –

**ನೈವ ಸ್ತ್ರೀ ನ ಪುಮಾನೇಷಃ ನ ಚೈವಾಯಂ ನಪುಂಸಕಃ ।**
**ಯದ್ಯತ್ ಶರೀರಮಾದತ್ತೇ ತೇನ ತೇನ ಸ ಯುಜ್ಯತೇ ॥**

**ಶ್ವೇತ. ೫–೧೦**

ಸೋಪಾಧಿಕವಾದುದು ಮೂರ್ತ, ನಿರುಪಾಧಿಕವಾದದ್ದು ಅಮೂರ್ತ: ಇದನ್ನೇ ಬೃಹದಾರಣ್ಯಕದಲ್ಲಿ 'ದ್ವೇ ವಾವ ಬ್ರಹ್ಮಣೋ ರೂಪೇ ಮೂರ್ತಂ ಚೈವಾಮೂರ್ತಂ ಚ' (೨-೩-೧) ಎಂದು ತಿಳಿಸಿದೆ.

ಶ್ರೀಕೃಷ್ಣನು ಹತ್ತನೆಯ ಅಧ್ಯಾಯದಲ್ಲಿ ಮುಖ್ಯವಾದ ತನ್ನ ಕೆಲವು ವಿಭೂತಿರೂಪಗಳನ್ನು ತಿಳಿಸಿದ್ದಾನೆ. ಮೇರುಪರ್ವತ, ಸಮುದ್ರ, ಉಚ್ಚೈಃಶ್ರವಸ್ಸೆಂಬ ಕುದುರೆ, ಐರಾವತವೆಂಬ ಆನೆ, ಸಿಂಹ, ಗರುಡ, ಅಶ್ವತ್ಥವೃಕ್ಷ – ಮೊದಲಾದವು ನಾನೇ ಎಂದಿದ್ದಾನೆ. ಮೂರ್ತರೂಪಗಳೇ ಇಲ್ಲದ ಕಾಲ, ಸ್ಮೃತಿ, ಕ್ಷಮೆ, ತೇಜಸ್ಸು, ದ್ಯೂತಕ್ರೀಡೆ, ಜಯ – ಮೊದಲಾದವೂ ಸಹ ನಾನೇ ಎಂದಿದ್ದಾನೆ. ನನ್ನನ್ನು ಬಿಟ್ಟು ಇನ್ನೊಂದು ಪದಾರ್ಥವೇ ವಿಶ್ವದಲ್ಲಿಲ್ಲವೆಂದು ತಿಳಿಸುವುದೇ ಇದರ ತಾತ್ಪರ್ಯ. ಈ ತತ್ತ್ವವನ್ನನುಸರಿಸಿ ಸರ್ವತ್ರ ಈಶ್ವರನಿದ್ದಾನೆಂಬ ನಿಶ್ಚಯವನ್ನು ದೃಢಪಡಿಸಿ, 'ಸರ್ವಂ ಖಲ್ವಿದಂ ಬ್ರಹ್ಮ' ಎಂದು ತಿಳಿಸಿಕೊಡುವುದು ಗೀತಾಶಾಸ್ತ್ರದ ಉದ್ದೇಶ.

**ಮಾಯಾ**

ಈ ಶಬ್ದವನ್ನು ಗೀತಾಶ್ಲೋಕಗಳಲ್ಲಿ ಅನೇಕ ಸಲ ಬಳಸಿದ್ದಾರೆ.

೧. ಅಜೋಽಪಿ ಸನ್ನವ್ಯಯಾತ್ಮಾ ಭೂತಾನಾಮೀಶ್ವರೋಽಪಿ ಸನ್ ।
ಪ್ರಕೃತಿಂ ಸ್ವಾಮಧಿಷ್ಠಾಯ ಸಂಭವಾಮ್ಯಾತ್ಮಮಾಯಯಾ ॥ ೪-೭

೨. ದೈವೀ ಹ್ಯೇಷಾ ಗುಣಮಯೀ ಮಮ ಮಾಯಾ ದುರತ್ಯಯಾ ।
ಮಾಮೇವ ಯೇ ಪ್ರಪದ್ಯಂತೇ ಮಾಯಾಮೇತಾಂ ತರಂತಿ ತೇ ॥
೭-೧೪

೩. ಮಾಯಯಾಪಹೃತಜ್ಞಾನಾ ಆಸುರಂ ಭಾವಮಾಶ್ರಿತಾಃ ॥ ೭-೧೫

ಮಾಯೆಯೆಂದರೆ ಭಗವಂತನ ಅಚಿಂತ್ಯವಾದ ಒಂದಾನೊಂದು ಶಕ್ತಿ. ಶ್ರೀಶಾಂಕರಭಾಷ್ಯದ ಉಪೋದ್ಘಾತದಲ್ಲಿ "ಸ ಚ ಭಗವಾನ್.... ತ್ರಿಗುಣಾತ್ಮಿಕಾಂ ಸ್ವಾಂ ಮಾಯಾಂ ಮೂಲಪ್ರಕೃತಿಂ ವಶೀಕೃತ್ಯ ಅಜೋಽವ್ಯಯೋ ಭೂತಾನಾಮೀಶ್ವರೋ ನಿತ್ಯಶುದ್ಧಬುದ್ಧಮುಕ್ತ ಸ್ವಭಾವೋಽಪಿ ಸನ್ ಸ್ವಮಾಯಯಾ ದೇಹವಾನಿವ ಜಾತ ಇವ ಚ ಲೋಕಾನುಗ್ರಹಂ ಕುರ್ವನ್ ಲಕ್ಷ್ಯತೇ" ಎಂದಿದೆ. ಇದರಿಂದ ಮಾಯೆಯು ತ್ರಿಗುಣಾತ್ಮಕವೆಂದೂ ಅದಕ್ಕೆ ಮೂಲಪ್ರಕೃತಿಯೆಂಬ ಇನ್ನೊಂದು ಹೆಸರಿದೆಯೆಂದೂ ಗೊತ್ತಾಗುತ್ತದೆ. ಮೂಲಪ್ರಕೃತಿಯೆಂದರೆ ಕಾಪಿಲಸಾಂಖ್ಯರು ಹೇಳುವ ಪ್ರಧಾನವೆಂಬುದಲ್ಲ. 'ಪ್ರಕೃತಿಂ ಸ್ವಾಮಧಿಷ್ಠಾಯ=ಮಮ ವೈಷ್ಣವೀಂ ಮಾಯಾಂ ತ್ರಿಗುಣಾತ್ಮಿಕಾಂ' ಎಂದೂ ಆಚಾರ್ಯರು ಬರೆದಿದ್ದಾರೆ. ಮಾಯಾ, ಮೂಲಪ್ರಕೃತಿ, ಪ್ರಕೃತಿ - ಎಂಬಿವು ಒಂದೇ ಅರ್ಥದ ಶಬ್ದಗಳು. ಅಷ್ಟಧಾಪ್ರಕೃತಿಗಳನ್ನೂ ನಾಮರೂಪಗಳನ್ನೂ ಮಾಯೆಯೆಂದು ವ್ಯಾಖ್ಯಾನಕಾರರು ಅಲ್ಲಲ್ಲಿ ಹೇಳಿರುವುದುಂಟು. ಅವು ಮಾಯೆಯಿಂದ ತೋರತಕ್ಕವಾದ್ದರಿಂದ ಮಾಯೆಯೆಂದು ಅಭಿಪ್ರಾಯ. ನಾಮರೂಪಾತ್ಮಕವಾದ ಜಗತ್ತೆಲ್ಲವೂ ಮಾಯೆಯಿಂದ ತೋರತಕ್ಕದ್ದು. ಜಗತ್ತು ಮಾಯಿಕ, ಅದೇ ಮಾಯಾಶಕ್ತಿಯಲ್ಲ. ಅದು ಈಶ್ವರನಿಗೆ ಅಧೀನವಾಗಿದ್ದು ಈಶ್ವರನಿಗೆ ಸಂಬಂಧಿಸಿದಾಗ ಮಾತ್ರ ಈ ಶಬ್ದವನ್ನು ಬಳಸುವುದು ಕಂಡುಬರುತ್ತದೆ.

**ಅಜ್ಞಾನ, ಅವಿದ್ಯೆ, ಅಧ್ಯಾಸ**

ಇವು ಮೂರೂ ಒಂದೇ ಅರ್ಥದ ಶಬ್ದಗಳಾಗಿ ಕಂಡುಬರುತ್ತದೆ. ಗೀತೆಯಲ್ಲಿ ಅಜ್ಞಾನ ಶಬ್ದವನ್ನೂ ಬಳಸಿದ್ದಾರೆ. ಅವಿದ್ಯಾ, ಅಧ್ಯಾಸ – ಎಂಬ ಶಬ್ದಗಳನ್ನು ಬಳಸಿಲ್ಲ. ಮಾಯಯಾಪಹೃತಜ್ಞಾನಾಃ = 'ಮಾಯೆಯಿಂದ

ಪ್ರಾಣಿಗಳ ವಿವೇಕಜ್ಞಾನವು ನಷ್ಟವಾಗುತ್ತದೆ'ಯೆಂದು ಈ ಮಾತಿನಿಂದ ಗೊತ್ತಾಗುತ್ತದೆ. ಜ್ಞಾನಕ್ಕೆ ವಿಪರೀತವಾದದ್ದು ಅಜ್ಞಾನ. ತಪ್ಪುತಿಳಿವಳಿಕೆ, ಸಂದೇಹ, ತಿಳಿಯದಿರುವುದು, ಕಲಬೆರಕೆಯ ಜ್ಞಾನ, ಸತ್ಯವಲ್ಲದ ವಿರುದ್ಧಜ್ಞಾನ – ಇದೆಲ್ಲವೂ ಅಜ್ಞಾನದಲ್ಲಿ ಸೇರುತ್ತದೆ. ತಸ್ಮಾದಜ್ಞಾನ ಸಂಭೂತಂ (೪-೪೨) ಅಜ್ಞಾನೇನಾವೃತಂ ಜ್ಞಾನಂ (೫-೧೫) ತೇಷಾಮೇ ವಾನುಕಂಪಾರ್ಥಮಹಮಜ್ಞಾನಜಂ–ತಮಃ (೧೦-೧೧) - ಇತ್ಯಾದಿ ಸ್ಥಳಗಳಲ್ಲಿ ಅಜ್ಞಾನಶಬ್ದದ ಬಳಕೆ ಇದೆ. ಭ್ರಮೆಯೂ ಅಜ್ಞಾನದಲ್ಲಿ ಸೇರುತ್ತದೆ. ಮನುಷ್ಯರೇ ಮೊದಲಾದ ಜೀವಿಗಳಿಗೆ ಸಂಬಂಧಿಸಿದಾಗ ಮಾತ್ರ ಅಜ್ಞಾನ ಶಬ್ದವನ್ನು ಬಳಸುತ್ತಾರೆ. ಅವಿದ್ಯೆ, ಅಧ್ಯಾಸಗಳೂ ಸಹ ಜೀವಿಗಳಿಗೆ ಸಂಬಂಧಿಸಿದವು.

ಐಂದ್ರಜಾಲಿಕನು ತನ್ನ ಇಂದ್ರಜಾಲಶಕ್ತಿಯಿಂದ ವಸ್ತುತಃ ಇಲ್ಲದ ಮಾವಿನ ಹಣ್ಣುಗಳನ್ನು ಜನರಿಗೆ ತೋರಿಸುತ್ತಾನೆ. ಆ ಶಕ್ತಿ ಅವನಿಗೆ ವಶವಾದದ್ದು. ಅದು ಅವನ ಅಜ್ಞಾನವಲ್ಲ. ನೋಡತಕ್ಕವರು ಮಾವಿನಹಣ್ಣುಗಳೆಂದು ತಿಳಿದುಕೊಂಡಿರುವುದು ಅಜ್ಞಾನ. ಇದು ಇಂದ್ರಜಾಲಶಕ್ತಿಗೆ ಅಧೀನವಾಗಿ ಬಂದದ್ದು.

**ಮಿಥ್ಯಾ**

'ಬ್ರಹ್ಮ ಸತ್ಯಂ ಜಗನ್ಮಿಥ್ಯಾ' ಎಂದು ವೇದಾಂತಿಗಳು ಹೇಳುವುದುಂಟು. ಜಗತ್ತು ಮಿಥ್ಯೆಯೆಂದರೇನು ? ಮನೆ, ಮಠ, ಮನುಷ್ಯ, ಮೃಗ – ಇವೆಲ್ಲವೂ ಸುಳ್ಳು ಎಂದರೆ ಒಪ್ಪಬಹುದೆ ? ಇವು ಸುಳ್ಳಾದರೆ ಲೋಕವ್ಯವಹಾರ ಹೇಗೆ ನಡೆಯುತ್ತದೆ ? ನಮ್ಮ ಇಂದ್ರಿಯಗಳೇ ಸುಳ್ಳನ್ನು ತಿಳಿಸುತ್ತವೆಂದಾದರೆ ನಾವು ಯಾರನ್ನು ನಂಬಬೇಕು ? ಎಂದು ಅನೇಕರು ಪ್ರಶ್ನೆ ಮಾಡುವುದುಂಟು. ಮಿಥ್ಯಾಶಬ್ದದ ಅರ್ಥವನ್ನು ತಿಳಿದುಕೊಳ್ಳದ್ದರಿಂದ ಈ ಗೊಂದಲ.

'ಮಿಥಃ' ಎಂಬ ಶಬ್ದದಿಂದ ಮಿಥ್ಯಾಶಬ್ದವು ಹುಟ್ಟಿದೆ. ಮಿಥಃ - ಎಂದರೆ ಅನ್ಯೋನ್ಯವೆಂದರ್ಥ. ಅದನ್ನು ಇದೆಂದೂ ಇದನ್ನು ಅದೆಂದೂ ತಿಳಿದುಕೊಳ್ಳುವುದು ಮಿಥ್ಯಾಜ್ಞಾನ. ಹಗ್ಗವನ್ನು ಹಾವೆಂದು ಭ್ರಮಿಸಿದಾಗ ಹಗ್ಗದಲ್ಲಿ ಕಾಣಿಸುವ ಹಾವು ಮಿಥ್ಯಾ. ಚಿನ್ನವನ್ನು ಹಿತ್ತಾಳೆಯೆಂದು ತಿಳಿದಾಗ ಹಿತ್ತಾಳೆ ಮಿಥ್ಯಾ. ವಸ್ತುವನ್ನು ವಿಶ್ಲೇಷಿಸಿ ನೋಡಿದಾಗ ಇದರ ಅರಿವಾಗುತ್ತದೆ. ಒಂದು ವಸ್ತ್ರವನ್ನು ನೋಡಿ ಇದು ಬಟ್ಟೆ ಎನ್ನುತ್ತೇವೆ. ಅದರಲ್ಲಿರುವ ನೂಲುಗಳೆಲ್ಲವನ್ನೂ ಬಿಡಿಸಿ ತೆಗೆದಿಟ್ಟಾಗ ನೂಲಿನ ಪಿಂಡಿಯನ್ನು ಬಟ್ಟೆ

ಎನ್ನುವುದಿಲ್ಲ. ಬಟ್ಟೆ ಮಿಥ್ಯೆಯಾಯಿತು. ನೂಲುಗಳೆಲ್ಲವನ್ನೂ ಹಿಂಜಿದರೆ ಹತ್ತಿಯಾಗುತ್ತದೆ. ಆಗ ನೂಲು ಮಿಥ್ಯೆ. ಹೀಗೆ ಮೂಲವನ್ನು ವಿವೇಚಿಸುತ್ತ ಹೋದಾಗ ಹತ್ತಿಯ ಕಾಯಿಯನ್ನೂ, ಹತ್ತಿಯ ಗಿಡವನ್ನೂ ವಿಶ್ಲೇಷಿಸಿ ಕಡೆಗೆ ಮಣ್ಣಿನವರೆಗೆ ಹೋಗಿ ನಿಲ್ಲುತ್ತೇವೆ. ವಿಜ್ಞಾನಿಗಳು ಇನ್ನೂ ಮೂಲವನ್ನು ಅರಸಿ, ಸರ್ವವೂ 'ಎನರ್ಜಿ (Energy)' ಎಂಬ ಸಿದ್ಧಾಂತಕ್ಕೆ ಬಂದಿದ್ದಾರಂತೆ. ವೇದಾಂತಿಗಳು 'ಸರ್ವಂ ಖಲ್ವಿದಂ ಬ್ರಹ್ಮ' ಇತ್ಯಾದಿ ವೇದವಚನಗಳ ಆಧಾರದಿಂದ ಜಗತ್ತಿನ ಮೂಲವು ಬ್ರಹ್ಮವೆಂಬ ಸಿದ್ಧಾಂತಕ್ಕೆ ಬಂದಿದ್ದಾರೆ. ತಾತ್ಪರ್ಯವೇನೆಂದರೆ, ಜಗತ್ತು ಮಿಥ್ಯೆಯೆಂದರೆ ಲೋಕರೂಢಿಯಲ್ಲಿರುವ ಸುಳ್ಳು ಎಂದರ್ಥವಲ್ಲ. ಜಗತ್ತು ನಾನಾರೂಪದಲ್ಲಿ ಕಾಣುತ್ತಿರುವುದು ನಿಜವೇ. ಇದನ್ನು ವ್ಯಾವಹಾರಿಕ ಸತ್ಯವೆನ್ನುತ್ತಾರೆ. ಇದನ್ನಿಟ್ಟುಕೊಂಡೇ ಲೋಕವ್ಯವಹಾರವು ಕ್ರಮಬದ್ಧವಾಗಿ ನಡೆಯುತ್ತದೆ. ಜ್ಞಾನಿಯಾದರೋ ನಾಮರೂಪಾತ್ಮಕವಾದ ಈ ಜಗತ್ತಿನ ಪರಮಮೂಲವಾದದ್ದು ಬ್ರಹ್ಮವೆಂದೂ ಅದೇ ಪರಮಸತ್ಯವೆಂದೂ ತಿಳಿದಿರುತ್ತಾನೆ. ಬಟ್ಟೆಯ ಮೂಲವು ಹತ್ತಿಯೆಂದು ತಿಳಿದಿದ್ದರೂ ಬಟ್ಟೆಯನ್ನು ಬಟ್ಟೆಯೆಂದೇ ನಾವು ವ್ಯವಹರಿಸುವಂತೆ, ಜ್ಞಾನಿಯೂ ನಾಮರೂಪಾತ್ಮಕವಾದ ಜಗತ್ತನ್ನು ಯಥಾರ್ಥವೆಂಬ ರೀತಿಯಲ್ಲಿಯೇ ವ್ಯವಹರಿಸುತ್ತಾನೆ. ಪರಮಸತ್ಯವು ಬ್ರಹ್ಮವೆಂಬ ಅರಿವು ಅವನಿಗಿರುತ್ತದೆ. ಮಿಥ್ಯೆಯೆಂದರೆ ಹುಸಿತೋರಿಕೆ ಎಂದರ್ಥ.

ಬ್ರಹ್ಮಜ್ಞಾನವಾಗುವವರೆಗೂ ಎಲ್ಲ ವಿಧಿನಿಷೇಧಗಳೂ ಮನುಷ್ಯನಿಗೆ ಅನ್ವಯಿಸುತ್ತವೆ. ಜಗತ್ತು ಸತ್ಯವೆಂಬ ಭಾವನೆಯಿಂದಲೇ ಅವನು ವ್ಯವಹರಿಸತಕ್ಕದ್ದು ಎಂದು ವೇದಾಂತವು ಬೋಧಿಸುತ್ತದೆ.

**ಸಂನ್ಯಾಸ**

ಗೀತೆಯಲ್ಲಿ ಸಂನ್ಯಾಸವನ್ನೂ ಕರ್ಮಯೋಗವನ್ನೂ ಪ್ರಶಂಸೆ ಮಾಡಿದ್ದಾರೆ. ಕೆಲವೆಡೆಯಲ್ಲಿ ಸಂನ್ಯಾಸಕ್ಕಿಂತ ಕರ್ಮಯೋಗವು ಅಧಿಕವೆಂದು ಹೇಳಿದ್ದರೂ, ಸಂನ್ಯಾಸದಿಂದ ಪರಮಸಿದ್ಧಿಯಾಗುತ್ತದೆಯೆಂದು ಹೇಳಿದ್ದೂ ಉಂಟು. ಇವುಗಳ ಸಾಮಂಜಸ್ಯವು ಹೇಗೆಂಬುದನ್ನು ತಿಳಿದುಕೊಳ್ಳಬೇಕು. ಸಂನ್ಯಾಸ ಶಬ್ದಕ್ಕೆ ತ್ಯಾಗವೆಂದು ಅರ್ಥ. 'ತ್ಯಾಗೇನೈಕೇ ಅಮೃತತ್ವಮಾನಶುಃ' ಎಂಬ ಉಪನಿಷದ್ವಾಣಿಯಂತೆ ತ್ಯಾಗವು ಮೋಕ್ಷಕ್ಕೆ ಆವಶ್ಯಕವೆಂಬುದು ಸತ್ಯ. ಯಾವುದರ ತ್ಯಾಗ? – ಎಂಬುದನ್ನು ಬಿಡಿಸಿದಾಗ ಈ ಸಾಮಂಜಸ್ಯವು ಸ್ಫುಟವಾಗುತ್ತದೆ.

ಸಂನ್ಯಾಸವು ವಿವಿದಿಷಾಸಂನ್ಯಾಸ, ವಿದ್ವತ್‌ಸಂನ್ಯಾಸ ಎಂದು ಎರಡು ವಿಧ. ವಿವಿದಿಷಾ ಎಂದರೆ ಆತ್ಮಜ್ಞಾನವನ್ನು ಪಡೆಯುವ ಇಚ್ಛೆ. ನಾಲ್ಕು ಆಶ್ರಮಗಳಲ್ಲಿ ಒಂದಾದ ಆಶ್ರಮಸಂನ್ಯಾಸವು ವಿವಿದಿಷಾಸಂನ್ಯಾಸ. ಜ್ಞಾನನಿಷ್ಠೆಗೆ ಬೇಕಾದ ಚಿತ್ತಶುದ್ಧಿಗಾಗಿ ಧ್ಯಾನಯೋಗದಲ್ಲಿ ನಿರತನಾಗುವುದಕ್ಕೂ ಅಮಾನಿತ್ವ, ಅದಂಭಿತ್ವ ಮುಂತಾದ ಜ್ಞಾನಸಾಧನಗಳನ್ನು ತನ್ನಲ್ಲಿ ಅಳವಡಿಸಿಕೊಳ್ಳುವುದಕ್ಕೂ ಈ ಆಶ್ರಮವು ಅತ್ಯಂತ ಉಪಯುಕ್ತವಾಗುತ್ತದೆ. ಈ ಆಶ್ರಮಸಂನ್ಯಾಸಿಗೂ ಕೆಲವು ಕರ್ಮಗಳನ್ನು ಶಾಸ್ತ್ರವು ವಿಧಿಸಿದೆ. ಈ ಆಶ್ರಮಸಂನ್ಯಾಸಕ್ಕಿಂತ ಕರ್ಮಫಲವನ್ನು ತ್ಯಾಗ ಮಾಡಿದ ಕರ್ಮಯೋಗಿಯು ಮಾಡುವ ಕರ್ಮಯೋಗವು ಶ್ರೇಷ್ಠವೆಂದು ಗೀತೆಯು ಸ್ತುತಿಸಿದೆ (೬-೧). ಕರ್ಮತ್ಯಾಗಕ್ಕಿಂತ ಕರ್ಮಫಲತ್ಯಾಗವೇ ಉತ್ತಮವಾದದ್ದು. ತಮೋಗುಣದಿಂದಾದ ಅಜ್ಞಾನದಿಂದಲೋ ಆಲಸ್ಯದಿಂದಲೋ ಕರ್ಮವನ್ನು ತ್ಯಜಿಸಿದರೆ ಯಾವ ಪ್ರಯೋಜನವೂ ಆಗದೆ ಪಾಪವೇ ಗಂಟುಬೀಳುತ್ತದೆ. ಫಲತ್ಯಾಗವನ್ನು ಸ್ತುತಿಸುವುದು ಮುಖ್ಯ ತಾತ್ಪರ್ಯ, ವಿವಿದಿಷಾಸಂನ್ಯಾಸವನ್ನು ನಿಂದಿಸುವುದಲ್ಲ.

ಒಬ್ಬನು ಆಶ್ರಮಸಂನ್ಯಾಸವನ್ನು ಸ್ವೀಕರಿಸದಿದ್ದರೂ ತನ್ನ ತೀವ್ರ ಪ್ರಯತ್ನಗಳಿಂದ ಜ್ಞಾನಸಾಧನಗಳನ್ನು ಅಳವಡಿಸಿಕೊಂಡು ಸಮ್ಯಗ್ ಜ್ಞಾನವನ್ನು ಪಡೆಯಬಹುದು. ಜನ್ಮಾಂತರಗಳಲ್ಲಿ ಮಾಡಿದ ಪುಣ್ಯಬಲದಿಂದ ಅವನಿಗೆ ಜ್ಞಾನೋದಯವಾಗಬಹುದು. ಈ ಜ್ಞಾನನಿಷ್ಠನಿಗೆ ವಿದ್ವತ್ ಸಂನ್ಯಾಸವು ಸ್ವಯಂಪ್ರಾಪ್ತವಾಗುತ್ತದೆ. ಕರ್ಮಗಳೆಲ್ಲವೂ ಅವಿದ್ಯಾವಸ್ಥೆಯಲ್ಲಿ ನಡೆಯತಕ್ಕವುಗಳಾದ್ದರಿಂದ, ವಿದ್ವತ್ ಸಂನ್ಯಾಸಿಯು ಕರ್ಮದಲ್ಲಿ ತೊಡಗುವುದೇ ಇಲ್ಲ. ಕರ್ಮಗಳನ್ನು ಅವನು ಬಿಡುತ್ತಾನೆನ್ನುವುದಕ್ಕಿಂತ, ಕರ್ಮಗಳೇ ಅವನನ್ನು ಬಿಟ್ಟು ಹೋಗುತ್ತವೆಯೆನ್ನುವುದು ಒಪ್ಪತಕ್ಕ ಮಾತು. ಈ ವಿದ್ವತ್ ಸಂನ್ಯಾಸಿಗೆ ಯಾವ ವಿಧಿನಿಷೇಧಗಳೂ ಇಲ್ಲ. 'ನಿಸ್ತ್ರೈಗುಣ್ಯೇ ಪಥಿ ವಿಚರತಾಂ ಕೋ ವಿಧಿಃ ಕೋ ನಿಷೇಧಃ'. ಸ್ವೇಚ್ಛೆಯಿಂದ ಈತನು ಕಾಷಾಯವಸ್ತ್ರಾದಿಗಳನ್ನು ಧರಿಸಬಹುದು, ಧರಿಸದೆಯೂ ಇರಬಹುದು. ಲೋಕಸಂಗ್ರಹದ ದೃಷ್ಟಿಯಿಂದ ಸಂನ್ಯಾಸಸ್ವೀಕಾರವಿಧಿಗಳನ್ನು ತನ್ನಲ್ಲಿ ಆವಾಹಿಸಿಕೊಂಡು, ವಿಧಿಪೂರ್ವಕವಾಗಿ ಸಂನ್ಯಾಸವನ್ನು ಸ್ವೀಕರಿಸಬಹುದು. ಹಾಗೆ ಮಾಡದೆ ಅವಧೂತನಾಗಿ ತನ್ನ ಪಾಡಿಗೆ ಇದ್ದರೂ ಇರಬಹುದು. ಈತನು ಜ್ಞಾನಸಂನ್ಯಸ್ತಕರ್ಮ. ಇವನಿಗೆ ಕರ್ಮವೂ ಇಲ್ಲ, ಕರ್ಮಫಲವೂ

ಇಲ್ಲ. ಸಿದ್ಧಪುರುಷನಾದ ಈ ವಿದ್ವತ್ಸಂನ್ಯಾಸಿಯು ಸಾಧಕನಾಗಿರುವ ಕರ್ಮಯೋಗಿಗಿಂತ ಶ್ರೇಷ್ಠನೆನ್ನುವುದು ಸಮಂಜಸವೇ.

ಜ್ಞಾನಿಯು ಲೋಕಸಂಗ್ರಹಕ್ಕಾಗಿ ಕರ್ಮವನ್ನು ಮಾಡಬಹುದು. ಅವನು ಶಿಷ್ಯರಿಗೆ ಬೋಧೆಯನ್ನು ಮಾಡದಿದ್ದರೆ ಸಂಪ್ರದಾಯವೇ ಉಚ್ಛಿನ್ನವಾದೀತು. 'ಜ್ಞಾನಿನಾಚರಿತುಂ ಶಕ್ಯಂ ಸಮ್ಯಗ್ರಾಜ್ಯಾದಿಲೌಕಿಕಂ' ಎಂದು ಪಂಚದಶಿಯಲ್ಲಿ ಶ್ರೀವಿದ್ಯಾರಣ್ಯಸ್ವಾಮಿಗಳು ಸ್ಪಷ್ಟವಾಗಿ ತಿಳಿಸಿದ್ದಾರೆ. ಆದರೆ 'ಲೋಕಸಂಗ್ರಹಕ್ಕಾಗಿ ಕರ್ಮವನ್ನು ಮಾಡುತ್ತಲೇ ಇರಬೇಕು' ಎಂಬ ಹೇಳಿಕೆ ಸರಿಯಲ್ಲ. ಜ್ಞಾನಿಗೆ ಯಾವ ವಿಧಿಯೂ ತಟ್ಟುವುದೇ ಇಲ್ಲ. ಭಿಕ್ಷಾಟನೆ ಮೊದಲಾದದ್ದು ಸಹ ಅವನ ದೃಷ್ಟಿಯಲ್ಲಿ ಕರ್ಮವಲ್ಲ. 'ಗುಣಾ ಗುಣೇಷು ವರ್ತಂತ ಇತಿ ಮತ್ವಾ ನ ಸಜ್ಜತೇ'. ಲೋಕಸಂಗ್ರಹಕ್ಕಾಗಿ ಕರ್ಮವನ್ನು ಮಾಡುವುದು ದ್ವೈತಜ್ಞಾನವಿಲ್ಲದೆ ಆಗುವುದಿಲ್ಲವಾದ್ದರಿಂದ, ಜ್ಞಾನಿಯು ಆ ಸಂದರ್ಭದಲ್ಲಿ ಸ್ವೇಚ್ಛೆಯಿಂದ ಒಂದು ಹೆಜ್ಜೆ ಕೆಳಗಿಳಿಯುತ್ತಾನೆಯೆಂಬುದನ್ನು ಒಪ್ಪಬೇಕಾಗುತ್ತದೆ. ಆತ್ಮಜ್ಞಾನಿಗೆ ಕರ್ಮವು ಐಚ್ಛಿಕ.

### ಮೋಕ್ಷ

ಪರಮಪುರುಷಾರ್ಥವಾದ ಮೋಕ್ಷವನ್ನು ಗೀತೆಯು ಹೇಗೆ ವಿವರಿಸಿದೆಯೆಂಬುದನ್ನು ನೋಡೋಣ–

**ಸತ್ತ್ವಂರಜಸ್ತಮ ಇತಿ ಗುಣಾಃ ಪ್ರಕೃತಿಸಂಭವಾಃ ।**
**ನಿಬಧ್ನಂತಿ ಮಹಾಬಾಹೋ ದೇಹೇ ದೇಹಿನಮವ್ಯಯಮ್ ॥**

**೧೪-೫**

**ದೈವೀ ಹ್ಯೇಷಾ ಗುಣಮಯೀ ಮಮ ಮಾಯಾ ದುರತ್ಯಯಾ ॥**

**೭-೧೪**

ಇವೇ ಮೊದಲಾದ ವಚನಗಳನ್ನು ಪರಿಶೀಲಿಸಿದರೆ ಇಷ್ಟು ಗೊತ್ತಾಗುತ್ತವೆ – ಭಗವನ್ಮಾಯೆಯೇ ಪ್ರಕೃತಿ – ಈ ಪ್ರಕೃತಿಯಿಂದ ಸಂಭವಿಸಿದವು ಗುಣಗಳು. ಇವು ಯಾವುದೇ ದ್ರವ್ಯದಲ್ಲಿರುವ ಗುಣಗಳಲ್ಲ. ಮಾಯೆಯ ವಿವಿಧ ರೂಪಗಳೇ ಇವು. ಇವುಗಳಿಂದಾಗುವ ಸುಖ ದುಃಖ ಮೋಹಗಳು ಕ್ಷೇತ್ರಜ್ಞನಾದ ಆತ್ಮನನ್ನು ಬಂಧಿಸುತ್ತವೆ. ಆತ್ಮನು ನಿಃಸಂಗನಾದ್ದರಿಂದ ಇವು ಬಂಧಿಸುವಂತೆ ಕಾಣುತ್ತವೆಯೆಂದರ್ಥ. ಮಾಯಾರೂಪವಾದ ಈ ಜಗತ್ತೇ ಗುಣವೆನ್ನಬಹುದು. ಇಂದ್ರಿಯ, ವಿಷಯ, ದೇಹ – ಎಲ್ಲವೂ ಗುಣ

ಗಳಲ್ಲಿಯೋ ಸೇರತಕ್ಕದ್ದು. ಅಂತಃಕರಣ, ಇಂದ್ರಿಯ, ದೇಹ, ಆತ್ಮ–ಇವುಗಳ ಕಲಬೆರಕೆಯ ಅಜ್ಞಾನದಿಂದ ಸುಖ–ದುಃಖ ಮೋಹಾದಿಗಳು 'ಚಿತ್ತದಲ್ಲಿ ಹುಟ್ಟಿವೆ. ಈ ಕಲಬೆರಕೆಯ ಕಾರಣದಿಂದ ಜೀವನು ತಾನು ದುಃಖಿಯೆಂದು ತಿಳಿದುಕೊಂಡು ನರಳುತ್ತಾನೆ. ಈ ದುಃಖಪರಂಪರೆಯಿಂದ ಬಿಡುಗಡೆಯಾಗುವುದು ಮೋಕ್ಷ. ಈ ಗುಣಕಾರ್ಯಗಳಿಂದ ತಾನು ಸಂಪೂರ್ಣವಾಗಿ ಅತಿರಿಕ್ತನೆಂದು ತಿಳಿದುಕೊಳ್ಳುವುದೇ ಬಿಡುಗಡೆ. ಅಜ್ಞಾನದಿಂದ ಬಿಡುಗಡೆಯೇ ಮೋಕ್ಷವೆಂದು ಮುಖ್ಯ ತಾತ್ಪರ್ಯ. ಅಜ್ಞಾನವು ಜ್ಞಾನದಿಂದ ಹೋಗಬೇಕೇ ಹೊರತು ಇನ್ನು ಯಾವುದರಿಂದಲೂ ಹೋಗದೆಂಬುದು ಸ್ಫುಟವಾಗಿದೆ. ಕರ್ಮಯೋಗಾದಿಗಳೆಲ್ಲವೂ ಈ ಜ್ಞಾನಕ್ಕೆ ಸಾಧನಗಳು. ಜ್ಞಾನವೆಂದರೆ ಗ್ರಂಥವನ್ನೋದಿ ಬರತಕ್ಕ ಪರೋಕ್ಷಜ್ಞಾನವಲ್ಲ. ಅನುಭವ ಪರ್ಯಂತವಾದ ಅಪರೋಕ್ಷಜ್ಞಾನವೇ ನಿಜವಾದ ಜ್ಞಾನ. ಅದೇ ಸಮ್ಯಗ್ದರ್ಶನ.

ಭಗವದ್ಗೀತೆಯಲ್ಲಿ ಜೀವಾತ್ಮನೆಂಬ ಪ್ರತ್ಯೇಕವಾದ ಸ್ವತಂತ್ರ ಪದಾರ್ಥವನ್ನು ಹೇಳಿಯೇ ಇಲ್ಲ. ಜೀವಾತ್ಮನು ಭಗವಂತನ ಪರಾಪ್ರಕೃತಿಯೆಂದೂ ಭಗವಂತನ ಅಂಶವೆಂದೂ ಹೇಳಿದೆ. ಅಖಂಡನೂ ಅವಯವರಹಿತನೂ ನಿರ್ವಿಕಾರನೂ ಆದ ಪರಮಾತ್ಮನಿಗೆ ಅಂಶವಲ್ಲಿಂದ ಬರುತ್ತದೆ ? ಅಂಶದಂತೆ ತೋರತಕ್ಕದ್ದು ಅಂಶ. 'ಪರಮಾತ್ಮೇತಿ ಚಾಪ್ಯುಕ್ತೋ ದೇಹೇಽಸ್ಮಿನ್ ಪುರುಷಃ ಪರಃ' – ಏವಂ ಚ ಜೀವಾತ್ಮನು 'ತನಗೆ ದೇಹೇಂದ್ರಿಯಗಳ ಸಂಬಂಧವಿಲ್ಲದ ಅದ್ವಿತೀಯಾತ್ಮನೇ ನಾನು' ಎಂದು ನಿಶ್ಚಯಿಸಿಕೊಂಡಮೇಲೆ, ಸ್ವಸ್ವರೂಪಾವಸ್ಥಾನವೇ ಮೋಕ್ಷವೆಂದು ಸಿದ್ಧವಾಗುತ್ತದೆ. ಮುಕ್ತನಾದವನು ಎಲ್ಲಿಗೆ ಹೋಗಬೇಕಾದ್ದೂ ಇಲ್ಲ, ಹೋಗುವುದೂ ಇಲ್ಲ. ಗಡಿಗೆಯನ್ನು ಒಡೆದಾಗ ಗಡಿಗೆಯಲ್ಲಿರುವ ಆಕಾಶವು ಎಲ್ಲಿಗೆ ಹೋಗುತ್ತದೆ? ಅದು ಮಹಾಕಾಶದಲ್ಲಿ ಸೇರಿಹೋಯಿತೆನ್ನುವುದೂ ಸಹ ಔಪಚಾರಿಕ.

ಮೋಕ್ಷವನ್ನು ಭಗವದ್ಗೀತೆಯು ಬ್ರಹ್ಮನಿರ್ವಾಣ, ಅಮೃತತ್ವ, ಶಾಂತಿ, ಸಂಸಿದ್ಧಿ, ಪರಮಸಿದ್ಧಿ – ಇತ್ಯಾದಿ ಶಬ್ದಗಳಿಂದ ಹೇಳಿದೆ. 'ಯಃ ಸದಾ ಮುಕ್ತ ಏವ ಸಃ, ಮೋಕ್ಷಯಿಷ್ಯಾಮಿ ಮಾ ಶುಚಃ' – ಎಂಬಲ್ಲಿ ಮುಕ್ತಿ, ಮೋಕ್ಷ ಶಬ್ದಗಳನ್ನು ಸೂಚಿಸಿದೆ. ಕ್ರಮಮುಕ್ತಿ, ಜೀವನ್ಮುಕ್ತಿ, ವಿದೇಹಮುಕ್ತಿ – ಎಂಬ ಮೂರು ಪ್ರಕಾರಗಳನ್ನು ಗೀತೆ ಸೂಚಿಸಿದೆ. ಕೆಲವು ಪುಣ್ಯಶಾಲಿಗಳು ಚತುರ್ಮುಖಬ್ರಹ್ಮನ ಲೋಕಕ್ಕೆ ಹೋಗಿ, ಅಲ್ಲಿ ಸಮ್ಯಗ್ಜ್ಞಾನವಾದಮೇಲೆ

ಮುಕ್ತರಾಗುವುದು ಕ್ರಮಮುಕ್ತಿ. ಈ ದೇಹವಿರುವಾಗಲೇ ಅನುಭವ ಪರ್ಯಂತವಾದ ಜ್ಞಾನವನ್ನು ಪಡೆದವರಿಗಾಗುವುದು ಜೀವನ್ಮುಕ್ತಿ. ಪ್ರಾರಬ್ಧ ಶೇಷವಿರುವವರೆಗೆ ದೇಹವಿದ್ದು ದೇಹಪಾತವಾದಮೇಲೆ ಆಗುವುದು ವಿದೇಹ ಮುಕ್ತಿ.

**ಗೀತೆಯಲ್ಲಿ ಬಂದಿರುವ ಸಾಂಖ್ಯಯೋಗದರ್ಶನಗಳು**

ಸಾಂಖ್ಯವೆಂದರೆ ಭಗವದ್ಗೀತೆಯಲ್ಲಿ ಕಾಪಿಲಸಾಂಖ್ಯವಲ್ಲ, ಯೋಗವೆಂದರೆ ಪಾತಂಜಲಯೋಗವಲ್ಲ – ಎಂಬ ಸಂಗತಿಯನ್ನು ಅಲ್ಲಲ್ಲಿ ತಿಳಿಸಲಾಗಿದೆ. ಆದರೂ ಆ ಎರಡು ಶಾಸ್ತ್ರಗಳಲ್ಲಿ ಹೇಳಿದ ಎಷ್ಟೋ ಅಂಶಗಳು ವೇದಾಂತ ಸಂಮತಗಳಾದ್ದರಿಂದ ಗೀತೆಗೆ ಗ್ರಾಹ್ಯಗಳೇ ಆಗಿವೆ.

ಸಾಂಖ್ಯಶಾಸ್ತ್ರದಲ್ಲಿ ಆತ್ಮನು ಅಸಂಗನೆಂದೂ, ಅಕ್ರಿಯನೆಂದೂ ಗುಣಕರ್ಮ ಜಗತ್ತುಗಳೆಲ್ಲವೂ ಪ್ರಕೃತಿಯ ಕಾರ್ಯಗಳೆಂದೂ ಹೇಳಿದೆ. ಪ್ರಕೃತಿಪುರುಷ ಸಂಯೋಗವೇ ಸೃಷ್ಟಿಹೇತುವೆಂದೂ ಪ್ರಕೃತಿಯ ಸಂಬಂಧದಿಂದ ತಾನು ದೂರನೆಂದು ತಿಳಿದುಕೊಳ್ಳುವುದೇ ಮೋಕ್ಷವೆಂದೂ ಹೇಳಿದೆ. ಇವೆಲ್ಲವೂ ಗೀತೆಗೆ ಸಂಮತವೇ. ಆತ್ಮರು ಅನೇಕರೆಂಬ ಸಾಂಖ್ಯರ ಹೇಳಿಕೆ ವೇದಾಂತಕ್ಕೆ ವಿರುದ್ಧವಾದದ್ದು. ಸ್ವಸ್ವರೂಪಾವಸ್ಥಾನವೇ ಸಾಂಖ್ಯರ ಮತದಲ್ಲಿಯೂ ಮೋಕ್ಷವೆನಿಸುತ್ತದೆ. ಆದರೆ ಪುರುಷನಿಗೆ ಆನಂದಾನುಭವವೇನೂ ಮೋಕ್ಷ ಸ್ಥಿತಿಯಲ್ಲಿರುವುದಿಲ್ಲ. ವೇದಾಂತಿಗಳ ಮತದಲ್ಲಿ ಆತ್ಮನು ನಿತ್ಯಾನಂದ ಸ್ವರೂಪನೇ ಆಗಿದ್ದಾನೆ. ಪ್ರಕೃತಿಯು ಪ್ರತ್ಯೇಕ ತತ್ತ್ವವೆಂಬುದೂ ವೇದಾಂತಕ್ಕೆ ಸಂಮತವಲ್ಲ.

ಯೋಗಶಾಸ್ತ್ರದಲ್ಲಿ ಈಶ್ವರನನ್ನು ಒಪ್ಪಿದ್ದಾರೆ. ಸಾಂಖ್ಯರು ಒಪ್ಪಿಲ್ಲ. ಈಶ್ವರನನ್ನು ಒಪ್ಪಿರುವ ಸಾಂಖ್ಯಮತದ ಒಂದು ಭೇದವೂ ಇದೆ. ಅದನ್ನು ಸೇಶ್ವರಸಾಂಖ್ಯವೆನ್ನುತ್ತಾರೆ. ಯೋಗದಲ್ಲಿ ಪದಾರ್ಥವಿವೇಚನೆಯು ವಿಭಿನ್ನ ವಾದರೂ ಸಾಂಖ್ಯರ ವಿಚಾರಗಳ ಸಮಾವೇಶವಿದೆ. ಯೋಗಿಗಳು ಸಾಂಖ್ಯ ರಂತೆ ದ್ವೈತಿಗಳು. ಯೋಗದಿಂದ ಲಭಿಸುವ ನಾನಾ ಸಿದ್ಧಿಗಳನ್ನು ಗೀತೆಯು ಉಪೇಕ್ಷಿಸಿದೆ. ಯೋಗಾಂಗವಾದ ಸಮಾಧಿಯು ಗೀತೆಯ ಧ್ಯಾನಯೋಗವೇ. ಹಠಯೋಗದ ಯಾವ ಅಂಶವನ್ನೂ ಗೀತೆಯು ಹೇಳಿಲ್ಲ.

**ಭಗವದ್ಗೀತೆಯ ಹೆಚ್ಚುಗಾರಿಕೆ**

ಭಾರತೀಯ ದರ್ಶನಗಳಲ್ಲಿ ವೇದಾಂತದರ್ಶನವು ಪ್ರಧಾನವೆಂಬುದು

ಸರ್ವಸಂಮತ. ವೇದಾಂತದಲ್ಲಿಯೂ ಮುಖ್ಯವಾದ ಪ್ರಸ್ಥಾನತ್ರಯದಲ್ಲಿ ಭಗವದ್ಗೀತೆಯು ಸಾಧನಪ್ರಸ್ಥಾನವೆನಿಸಿ ಜನಪ್ರಿಯವಾಗಿದೆ. ಉಪನಿಷತ್ತು, ಬ್ರಹ್ಮಸೂತ್ರಗಳೆಂಬ ಉಳಿದ ಎರಡು ಪ್ರಸ್ಥಾನಗಳ ಸಾರವನ್ನು ಸಂಗ್ರಹಿಸಿ, ಗಮ್ಯವಾದ ಮೋಕ್ಷಕ್ಕೆ ಸಾಧನಗಳೇನೆಂಬುದನ್ನು ಲಲಿತವಾದ ಭಾಷೆಯಲ್ಲಿ ವಿವರಿಸಿರುವುದೇ ಇದರ ವೈಶಿಷ್ಟ್ಯ. ಗೀತಾಮಾಹಾತ್ಮ್ಯದ ಒಂದು ಶ್ಲೋಕ ಹೀಗಿದೆ–

**ಸರ್ವೋಪನಿದೋ ಗಾವೋ ದೋಗ್ಧಾ ಗೋಪಾಲನಂದನಃ ।**
**ಪಾರ್ಥೋ ವತ್ಸಃ ಸುಧೀರ್ಭೋಕ್ತಾ ದುಗ್ಧಂ ಗೀತಾಮೃತಂ ಮಹತ್ ॥**

"ಸಕಲ ಉಪನಿಷತ್ತುಗಳೂ ಹಸುಗಳು. ಇವುಗಳ ಹಾಲುಕರೆದವನು ಗೋಪಾಲನಂದನನಾದ ಶ್ರೀಕೃಷ್ಣ. ಅರ್ಜುನನು ಕರು. ವಿವೇಕಿಯು ಈ ಹಾಲನ್ನು ಕುಡಿಯತಕ್ಕವನು. ಗೀತಾಮೃತವೆಂಬ ಈ ಹಾಲು ಪರಮ ಶ್ರೇಷ್ಠವಾದದ್ದು."

ಗೀತೆಯ ಎಲ್ಲ ಅಧ್ಯಾಯಗಳ ಕಡೆಯಲ್ಲಿರುವ ಪುಷ್ಪಿಕೆಗಳಲ್ಲಿ 'ಬ್ರಹ್ಮವಿದ್ಯಾಯಾಂ ಯೋಗಶಾಸ್ತ್ರೇ' ಎಂಬ ಮಾತು ಬರುತ್ತದೆ. ಇದರಲ್ಲಿ ಹೇಳಿರುವುದು ಬ್ರಹ್ಮವಿದ್ಯೆ. ಇದು ಅಧ್ಯಾತ್ಮಶಾಸ್ತ್ರ. ಯೋಗಶಾಸ್ತ್ರೇ ಎಂಬಲ್ಲಿ ಯೋಗವೆಂದರೆ ಸಾಧನ. ಬ್ರಹ್ಮವಿದ್ಯೆಯ ಸಾಧನಗಳನ್ನು ತಿಳಿಸಿಕೊಡುವ ಶಾಸ್ತ್ರವಿದು.

ಭೂಮಂಡಲದ ಸಾರ್ವತ್ರಿಕವಾದ ಶಾಶ್ವತಗ್ರಂಥಗಳಲ್ಲಿ ಗೀತೆಗೆ ಅಗ್ರಸ್ಥಾನ ಸಲ್ಲುತ್ತದೆ. ಎಲ್ಲ ಕಾಲದ ಎಲ್ಲ ಮಟ್ಟದ ಬುದ್ಧಿಯವರಿಗೂ ಹೊಂದುವಂತೆ ಧರ್ಮದ ಸಾರವನ್ನು ತಿಳಿಸಿ, ಪ್ರತಿಯೊಬ್ಬ ಮಾನವನನ್ನೂ ಮೇಲೆತ್ತಿ ಶ್ರೇಯೋಮಾರ್ಗದಲ್ಲಿ ಸಾಗಿಸುವುದು ಗೀತೆಯ ಪರಮೋದ್ದೇಶವಾಗಿದೆ. ಇದನ್ನೋದಿದಾಗ ಎಂತಹ ಸಂಕಟಸ್ಥಿತಿಯಲ್ಲಿ ತೊಳಲತಕ್ಕವನಿಗೂ ಶಾಂತಿಸಮಾಧಾನಗಳು ದೊರೆಯುತ್ತವೆ. ಯಾವ ದರ್ಶನಗಳಲ್ಲಾಗಲಿ ಮತಗ್ರಂಥಗಳಲ್ಲಾಗಲಿ ದೊರೆಯದಿರುವ ಈ ದಿವ್ಯೋಪದೇಶಗಳಿಗೆ ವಶರಾಗದವರಿಲ್ಲ. ಘಜನಿ ಮಹಮ್ಮದನ ಜೊತೆಗೆ ಭಾರತಕ್ಕೆ ಬಂದಿದ್ದ ಆಲ್ಬರೂನಿಯು ಗೀತಾಸಂದೇಶವನ್ನು ಕೇಳಿ ಆಕೃಷ್ಟನಾಗಿ, ಮೂಲವನ್ನೇ ಓದಬೇಕೆಂದು ಸಂಸ್ಕೃತವನ್ನು ಕಲಿತು ಗೀತೆಯನ್ನು ಅಭ್ಯಾಸ ಮಾಡಿದನೆಂದು ಇತಿಹಾಸವು ಹೇಳಿದೆ. ಅಕ್ಬರನ ಕಾಲದಲ್ಲಿದ್ದ ಫೈಜಿಯು ಇದನ್ನು ಮುಕ್ತಕಂಠದಿಂದ ಹೊಗಳಿದ್ದಾನೆ. ಭಗವದ್ಗೀತೆಯನ್ನು ಅಭ್ಯಾಸಮಾಡಿ,

ಇದೊಂದು ಲೋಕೋತ್ತರವಾದ ಉತ್ತಮ ಗ್ರಂಥವೆಂದು ಪ್ರಶಂಸೆ ಮಾಡಿದ ಕೆಲವು ಪಾಶ್ಚಾತ್ಯ ವಿದ್ವಾಂಸರ ಹೆಸರುಗಳನ್ನಿಲ್ಲಿ ಉದಾಹರಿಸಬಹುದು–

೧. ನೋಬೆಲ್ ಪ್ರಶಸ್ತಿವಿಜೇತನಾದ ರಷ್ಯದ ವಿದ್ವಾಂಸ ಸೊರೊಕಿನ್.
೨. ಪ್ರಸಿದ್ಧ ದಾರ್ಶನಿಕನಾದ ವಿಲ್‌ಡೂರಂಟ್.
೩. ಜರ್ಮನ್ ತತ್ತ್ವಶಾಸ್ತ್ರಜ್ಞ ಶೋಫನ್ ಹೇರ್.
೪. ಇಂಗ್ಲೆಂಡಿನ ಆಲ್‌ಡೌಸ್ ಹಕ್ಸ್‌ಲೇ.
೫. ಅಮೇರಿಕದ ತತ್ತ್ವಶಾಸ್ತ್ರಜ್ಞ ಥೋರೊ.

ಇಟಲಿಯ ಡಿಕ್ಟೇಟರನಾಗಿದ್ದ ಮುಸೋಲಿನಿ ಗೀತೆಯ ಹನ್ನೆರಡನೆಯ ಅಧ್ಯಾಯವಾದ ಭಕ್ತಿಯೋಗವನ್ನು ಪ್ರತಿದಿನ ತಪ್ಪದೆ ಪಾರಾಯಣ ಮಾಡುತ್ತಿದ್ದನಂತೆ !

ಭಗವದ್ಗೀತೆಯು ಎಲ್ಲ ಪ್ರಸಿದ್ಧ ಭಾಷೆಗಳಲ್ಲಿಯೂ ಭಾಷಾಂತರಗೊಂಡು ಅಸಂಖ್ಯಾತ ಮುದ್ರಣಗಳನ್ನು ಕಂಡಿದೆ. ಈ ವಿಶ್ವಮಾನ್ಯತೆ ಅದಕ್ಕೆ ಬಂದದ್ದು ವಿದ್ವಾಂಸರೂ ವಿಜ್ಞಾನಿಗಳೂ ದಾರ್ಶನಿಕರೂ ಹೊಗಳಿದ್ದರಿಂದ ಅಲ್ಲ. ಅವರು ಹೊಗಳುವಂತೆ ಮಾಡಿಕೊಂಡಿರುವ ತನ್ನ ಸರ್ವಗ್ರಾಹ್ಯತೆಯಿಂದ ಬಂದದ್ದು. ಗೀತೆಯು ಯಾವುದೇ ಜಾತಿ, ಮತ, ಪಂಥಗಳಿಗೆ ಕಟ್ಟುಬಿದ್ದಿಲ್ಲ. ಯಾವುದೇ ಒಂದು ಹೊಸ ಮತವನ್ನು ಇದು ಸ್ಥಾಪಿಸಲು ಹೊರಡಲಿಲ್ಲ. ಯಾವುದೇ ಒಂದು ಮತವನ್ನು ಇದು ನಿಂದಿಸಿಯೂ ಇಲ್ಲ. ಈ ಗ್ರಂಥವು ಪ್ರತಿಪಾದಿಸುವ ನೀತಿ ಧರ್ಮದರ್ಶನಗಳು ಸಕಲ ಮಾನವಕುಲಕ್ಕೆ ಮಾರ್ಗದರ್ಶನ ಮಾಡಿ ಮನಃಶಾಂತಿಯನ್ನು ತಂದುಕೊಡುವ ಉದಾತ್ತಧ್ಯೇಯದಿಂದ ಹೊರಟಿವೆ. ಹಿಂಸಾಕೃತ್ಯಗಳಿಂದ ಜಗತ್ತಿಗೆ ಕೇಡನ್ನು ಮಾಡತಕ್ಕ ಆಸುರಸಂಪತ್ತಿನವರನ್ನು ರಾಕ್ಷಸರೆಂದು ಪರಿಗಣಿಸಿದೆ.

ಈಶ್ವರನು ನಿರಾಕಾರನೂ ಹೌದು, ಸಾಕಾರನೂ ಹೌದು, ಜಗದಾಕಾರನೂ ಹೌದು. ನಿಮ್ಮ ಭಾವನೆಯು ಯಾವುದಿದೆಯೋ ಅದನ್ನು ಗಟ್ಟಿ ಮಾಡಿಕೊಂಡು ಮುಂದುವರಿಯಿರಿ – ಎನ್ನುತ್ತದೆ ಗೀತೆ. ಜಗದೀಶ್ವರನು ಒಬ್ಬನೇ, ಇಬ್ಬರಿಲ್ಲ. ಅವನನ್ನು ಯಾವ ಹೆಸರಿನಿಂದಾದರೂ ಕರೆಯಿರಿ, ಯಾವ ಬಗೆಯ ಕಲ್ಪನೆಯಿಂದಾದರೂ ಭಜಿಸಿರಿ. ಭಕ್ತಿಯು ಮಾತ್ರ ದೃಢವಾಗಿರಲಿ. ಪತ್ರಂ, ಪುಷ್ಪಂ, ಫಲಂ, ತೋಯಂ – ಯಾವುದನ್ನು ಭಕ್ತಿಯಿಂದ ಅರ್ಪಿಸಿದರೂ ಅವನು ತೃಪ್ತನಾಗುತ್ತಾನೆ. ನಿಮ್ಮ ಹೃದಯಶುದ್ಧಿಯನ್ನು ಅವನು ನೋಡುತ್ತಾನೆಯೋ ಹೊರತು, ನೀವು

ಅರ್ಪಿಸುವ ವಸ್ತುವಿನ ಮಹತ್ತ್ವವನ್ನಲ್ಲ. ಆಡಂಬರದ ಪೂಜೆ, ಅಲಂಕಾರ, ಕೂಗು, ಅಬ್ಬರಗಳೇನೂ ಬೇಕಿಲ್ಲ. ಅವನ ಅರ್ಚನೆಗೆ ಮಠ, ಮಶೀದಿ, ಚರ್ಚುಗಳ ಆವಶ್ಯಕತೆಯೂ ಇಲ್ಲ. ಪೂಜೆಗೆ ಗೊತ್ತಾದ ಕಾಲವನ್ನೂ ಗೀತೆ ಹೇಳಿಲ್ಲ. ಕಾಲಕ್ಕೆ ಅತೀತನಾದವನಿಗೆ ಕಾಲಗಣನೆ ಯಾವುದುಂಟು ? ಭಕ್ತನು ಧರಿಸಬೇಕೆಂದು ಯಾವ ಮತೀಯ ಚಿಹ್ನೆಯನ್ನೂ ಗೀತೆ ಬೋಧಿಸಿಲ್ಲ. ಮನುಷ್ಯನು ಹೀಗೆಯೇ ಅನುಷ್ಠಾನವನ್ನು ಮಾಡಬೇಕೆಂಬ ನಿಯಮವನ್ನೂ ಅದು ಹೇರಿಲ್ಲ. ಭಗವಂತನ ಉಪದೇಶ ಹೀಗಿದೆ – "ಅರ್ಜುನ, ನಿನ್ನ ಮನಸ್ಸನ್ನೂ, ಬುದ್ಧಿಯನ್ನೂ ಸರ್ವದಾ ನನ್ನಲ್ಲಿಟ್ಟು ನನ್ನನ್ನು ಸ್ಮರಿಸುತ್ತಿರು. ಅದೂ ಆಗದಿದ್ದರೆ ಅದಕ್ಕಾಗಿ ಪ್ರಯತ್ನ ಮಾಡು. ಅದೂ ಸಾಧ್ಯವಾಗದಿದ್ದರೆ, ನೀನು ಮಾಡುವ ಕೆಲಸವೆಲ್ಲವೂ ನನಗೋಸ್ಕರ ಎಂದು ದೃಢವಾಗಿ ತಿಳಿದುಕೊಂಡಿರು. ಅದೂ ಆಗದಿದ್ದರೆ ಕರ್ಮಫಲದಲ್ಲಿ ಆಸಕ್ತಿಯನ್ನಿಡದೆ ನನಗೆ ಶರಣಾಗಿ ನಿನ್ನ ಕರ್ತವ್ಯವನ್ನು ಮಾಡುತ್ತ ಹೋಗು" (೧೬-ಲರಿಂದ ೧೧). ಅರ್ಜುನ, ಇದೆಲ್ಲವೂ ನಿನಗೆ ಸಾಧ್ಯವಿಲ್ಲವೆಂದಾದರೆ, ಹೀಗೆ ಮಾಡು–

> ಸರ್ವಧರ್ಮಾನ್ ಪರಿತ್ಯಜ್ಯ ಮಾಮೇಕಂ ಶರಣಂ ವ್ರಜ ।
> ಅಹಂ ತ್ವಾ ಸರ್ವಪಾಪೇಭ್ಯೋ ಮೋಕ್ಷಯಿಷ್ಯಾಮಿ ಮಾ ಶುಚಃ ॥
> ೧೮-೬೬

"ನೀನು ಯಾವ ಆಚರಣೆಯನ್ನೂ ವಿಶೇಷವಾಗಿ ಇಟ್ಟುಕೊಳ್ಳಬೇಕಾಗಿಲ್ಲ. ನಿನ್ನ ಯೋಗಕ್ಷೇಮಗಳೆಲ್ಲವೂ ನನ್ನದೆಂದು ನನಗೆ ವಹಿಸಿಬಿಡು. ನನಗೆ ಶರಣಾಗಿಬಿಡು. ನಿನ್ನ ಹಿತವನ್ನು ನೋಡಿಕೊಳ್ಳುವ ಜವಾಬ್ದಾರಿ ನನಗಿರಲಿ. ಯಾವ ಚಿಂತೆಯನ್ನೂ ಮಾಡಬೇಡ." ಭಗವಂತನ ಈ ಕಾರುಣ್ಯವನ್ನು ಈ ಔದಾರ್ಯವನ್ನು ಜಗತ್ತಿನಲ್ಲಿ ಯಾವ ಗ್ರಂಥದಲ್ಲಿ ಕಾಣಲಾದೀತು ?

ದೈವಭಕ್ತಿಯೇ ಗೀತೋಪದೇಶದ ಜೀವಾಳವಾಗಿದೆ. ಸಂಶಯಕ್ಕೆ ಈಡಾಗದ ನಿಶ್ಚಲವಾದ ಈಶ್ವರಭಕ್ತಿಯೊಂದೇ ಮಾನವನಿಗೆ ತಾರಕವಾಗ ಬಲ್ಲದೆಂದು ಗೀತೆ ಬೋಧಿಸುತ್ತದೆ. 'ಕೌಂತೇಯ ಪ್ರತಿಜಾನೀಹಿ ನ ಮೇ ಭಕ್ತಃ ಪ್ರಣಶ್ಯತಿ' ಎಂದು ಭಗವಂತನೇ ಅಭಯವನ್ನಿತ್ತಿರುವಾಗ ನಾವು ಚಿಂತೆಪಡಬೇಕಾದ್ದೇನಿದೆ ? 'ನ ಹಿ ಕಲ್ಯಾಣಕೃತ್ ಕಶ್ಚಿತ್ ದುರ್ಗತಿಂ ತಾತ ಗಚ್ಛತಿ' ಎಂದು ಮತ್ತೆ ಮತ್ತೆ ಹೇಳಿದ್ದಾನಲ್ಲವೆ ? ಗೀತೆಯಲ್ಲಿ ಪ್ರತಿಪಾದಿ ಸಿರುವ ಕ್ಲಿಷ್ಟವಾದ ಪರಮಾರ್ಥತತ್ತ್ವವನ್ನು ಯಾರು ಅರಿಯಲಾರರೋ ಅವರಿಗೆ ಭಕ್ತಿಮಾರ್ಗವೇ ರಾಜಮಾರ್ಗ. ಪರಮಾರ್ಥಸತ್ಯವೇನೆಂಬುದನ್ನು

ನಾವು ಯಾರೂ ಕಂಡಿಲ್ಲ. ಅದಕ್ಕಾಗಿ ಗುದ್ದಾಟವೇಕೆ? ಅವನನ್ನು ನಂಬಿದರೆ ಆತನೇ ಕೈಹಿಡಿದು ಕರೆದುಕೊಂಡು ಹೋಗಿ ಸತ್ಯವು ಯಾವುದೆಂಬುದನ್ನು ತೋರಿಸಿಕೊಡುತ್ತಾನೆ.

ನಿಷ್ಕಾಮಕರ್ಮ, ಲೋಕಸಂಗ್ರಹ – ಎಂಬುದು ಭಗವದ್ಗೀತೆಗೇ ಮೀಸಲಾದ ಬಹು ದೊಡ್ಡ ಮಾತು. ಒಬ್ಬ ವ್ಯಕ್ತಿಯ, ಕುಟುಂಬದ, ಸಮಾಜದ, ಸಮಸ್ತ ರಾಷ್ಟ್ರದ ಹಿತವೆಲ್ಲವೂ ಇದರಲ್ಲಿ ಅಡಗಿದೆ. ಪ್ರತಿಷ್ಠಿತರಾದ ರಾಷ್ಟ್ರನಾಯಕರಲ್ಲಿ ಕೆಲವರಾದರೂ ನಿಷ್ಕಾಮಕರ್ಮಕ್ಕೆ ಮಾನ್ಯತೆಯನ್ನು ಸಲ್ಲಿಸಿ ಜೀವನದಲ್ಲಿ ಅಳವಡಿಸಿಕೊಂಡಿದ್ದರೆ ಭ್ರಷ್ಟಾಚಾರವೇ ನಿರ್ನಾಮವಾಗಿ ತೊಡೆದುಹೋದೀತು. ಶ್ರೇಯೋಽಭಿಲಾಷಿಯು ತನ್ನ ಧರ್ಮವನ್ನು ಶ್ರದ್ಧೆಯಿಂದ ಪಾಲಿಸಬೇಕು. ಅನ್ಯಧರ್ಮಕ್ಕೆ ಹೋಗಲೂ ಕೂಡದು. ಅನ್ಯಧರ್ಮವನ್ನು ನಿಂದಿಸಲೂ ಕೂಡದು.

**ಸ್ವೇ ಸ್ವೇ ಕರ್ಮಣ್ಯಭಿರತಃ ಸಂಸಿದ್ಧಿಂ ಲಭತೇ ನರಃ ॥ ೧೮-೪೫**
**ಸ್ವಧರ್ಮೇ ನಿಧನಂ ಶ್ರೇಯಃ ಪರಧರ್ಮೋ ಭಯಾವಹಃ ॥ ೩-೩೫**

ಇದು ಭಗವದ್ಗೀತೆಯ ಬೋಧೆ. ಈ ಉದಾತ್ತತತ್ತ್ವವನ್ನು ಜಗತ್ತಿನಲ್ಲಿ ಬೇರೆ ಯಾವ ಧರ್ಮಗ್ರಂಥವೂ ಬೋಧಿಸಿಲ್ಲ.

**ಬೋಧನಕ್ರಮದಲ್ಲೊಂದು ವಿಶೇಷ**

ಕಾವ್ಯೋಚಿತವಾದ ರಮಣೀಯಶೈಲಿಯಲ್ಲಿ ವಿಷಯವನ್ನು ಪ್ರತಿಪಾದಿಸುವುದು ಭಗವದ್ಗೀತೆಯಲ್ಲಿರುವ ಇನ್ನೊಂದು ವಿಶೇಷ. ಪ್ರಥಮಾಧ್ಯಾಯದಲ್ಲಿಯೇ ಅರ್ಜುನನ ವಿಷಾದಯೋಗವು ಎಷ್ಟು ಸುಂದರವಾಗಿ ವರ್ಣಿತವಾಗಿದೆಯೆಂಬುದನ್ನು ನೋಡಬಹುದು. ವಿಶ್ವರೂಪದರ್ಶನ ಪ್ರಕರಣವು ಅದ್ಭುತ ರೌದ್ರಗಳಿಗೂ ಭಯಾನಕ ರಸಕ್ಕೂ ಉದಾಹರಣೆಯಾಗಿದೆ. "ಅಶೋಚ್ಯಾನನ್ವಶೋಚಸ್ತ್ವಂ ಪ್ರಜ್ಞಾವಾದಾಂಶ್ಚ ಭಾಷಸೇ, ಕ್ಷುದ್ರಂ ಹೃದಯದೌರ್ಬಲ್ಯಂ ತ್ಯಕ್ತ್ವೋತ್ತಿಷ್ಠ ಪರಂತಪ, ಸಾಂಖ್ಯಯೋಗೌ ಪೃಥಗ್ ಬಾಲಾಃ ಪ್ರವದಂತಿ ನ ಪಂಡಿತಾಃ, ವಾಸಾಂಸಿ ಜೀರ್ಣಾನಿ ಯಥಾ ವಿಹಾಯ ನವಾನಿ ಗೃಹ್ಣಾತಿ ನರೋಽಪರಾಣಿ, ಧೂಮೇನಾವ್ರಿಯತೇ ವಹ್ನಿಃ........., ಪಶ್ಯ ಮೇ ಯೋಗಮೈಶ್ವರಂ, ಇದಮದ್ಯ ಮಯಾ ಲಬ್ಧಮಿಮಂ ಪ್ರಾಪ್ಸ್ಯೇ ಮನೋರಥಂ, ಆಢ್ಯೋಽಭಿಜನವಾನಸ್ಮಿ ಕೋಽನ್ಯೋಽಸ್ತಿ ಸದೃಶೋ ಮಯಾ" ಇತ್ಯಾದಿ ವಾಕ್ಯಗಳು ಸೊಗಸಿನಲ್ಲಿ ಯಾವ ಕಾವ್ಯವಾಕ್ಯಗಳಿ

ಗಿಂತಲೂ ಕಡಿಮೆಯುವಲ್ಲ. ಈ ವಾಕ್ಯಶೈಲಿ ಓದುಗರನ್ನು ಆಕರ್ಷಿಸಿಬಿಡುತ್ತದೆ.

ವೇದಾಂತಗ್ರಂಥಗಳಲ್ಲಿ ಆಚಾರ್ಯನು ತತ್ತ್ವವನ್ನು ಬೋಧಿಸುವಾಗ ಪರಮಾರ್ಥವನ್ನು ಅದು, ಅವನು, ಈಶ್ವರ, ಪರಮಾತ್ಮ – ಎಂದು ಪ್ರಥಮಪುರುಷದಲ್ಲಿ ಪರೋಕ್ಷವಾಗಿ ನಿರ್ದೇಶಿಸುವುದು ಕಂಡುಬರುತ್ತದೆ. ಗೀತೆಯಲ್ಲಿ ನಾನು, ನನ್ನನ್ನು – ಎಂದು ಉತ್ತಮಪುರುಷದಲ್ಲಿ ಪರಮಾರ್ಥವನ್ನು ಶ್ರೀಕೃಷ್ಣನು ನಿರ್ದೇಶಿಸುತ್ತಾನೆ. “ಅಹಂ ಸರ್ವಸ್ಯ ಪ್ರಭವಃ, ಮಾಂ ಹಿ ಪಾರ್ಥ ವ್ಯಪಾಶ್ರಿತ್ಯ, ಮಯಾ ತತಮಿದಂ ಸರ್ವಂ, ಯೋ ಮೇ ಭಕ್ತ್ಯಾ ಪ್ರಯಚ್ಛತಿ, ಮತ್ತಃ ಸರ್ವಂ ಪ್ರವರ್ತತೇ, ಮಮ ಯೋನಿರ್ಮಹದ್ ಬ್ರಹ್ಮ, ಮಯಿ ಸರ್ವಮಿದಂ ಪ್ರೋತಂ” ಎಂದು ಹೇಳುತ್ತಾನೆ. ‘ಈಶ್ವರಃ ಸರ್ವಭೂತಾನಾಂ ಹೃದ್ದೇಶೇಽರ್ಜುನ ತಿಷ್ಠತಿ, ತಮೇವ ಶರಣಂ ಗಚ್ಛ’ ಎಂದು ಪರೋಕ್ಷನಿರ್ದೇಶವಿರುವುದು ಬಹಳ ವಿರಳ. ಹೀಗೆ ‘ನಾನು, ನನ್ನನ್ನು’ ಎಂದೇ ಪದೇಪದೇ ಹೇಳುವುದಕ್ಕೆ ನಿಮಿತ್ತವೇನಿರಬಹುದು? ಶ್ರೀಕೃಷ್ಣನು ಸ್ವತಃ ಪರಮೇಶ್ವರನೇ ಆದ್ದರಿಂದ ಈ ರೀತಿ ನಿರ್ದೇಶಿಸುವುದು ಸಹಜವೇ ಆದರೂ ಇನ್ನೊಂದು ವಿಶೇಷವನ್ನಿಲ್ಲಿ ಗುರುತಿಸಬಹುದು. ಗುರುವಾದವನು ಆತ್ಮತತ್ತ್ವವನ್ನು ‘ಅದು ಹಾಗಿದೆ, ಆತ್ಮನು ಈ ಸ್ವಭಾವದವನು’ ಎಂದು ಪರೋಕ್ಷವಾಗಿ ನಿರ್ದೇಶಿಸುತ್ತಿದ್ದರೆ ಶಿಷ್ಯನಿಗೆ ಸಂದೇಹವು ಮೊಳೆಯುಬಹುದು. “ಇವರೂ ನನ್ನಂತೆಯೇ ಇನ್ನೊಬ್ಬರಿಂದ ಪಾಠ ಹೇಳಿಸಿಕೊಂಡವರು. ಅವರು ಹೇಳಿದ್ದನ್ನು ನನಗೆ ಹೇಳುತ್ತಿದ್ದಾರೆ! ಇವರಿಗೆ ಆತ್ಮಸಾಕ್ಷಾತ್ಕಾರವಾಗಿದೆಯೆ? ಗೂಢವಾದ ಆತ್ಮತತ್ತ್ವವು ಶಾಸ್ತ್ರ ಪಾಂಡಿತ್ಯದಿಂದ ಗೊತ್ತಾಗುತ್ತದೆಯೇ?” ಎಂದು ಶಿಷ್ಯನು ಶಂಕಿಸಬಹುದು. ಶ್ರೀಕೃಷ್ಣನು ಆಶ್ರಯಿಸಿದ ಉಪದೇಶಮಾರ್ಗದಲ್ಲಿ ಈ ಸಂದೇಹಕ್ಕೆ ಅವಕಾಶವೇ ಇಲ್ಲ. ಪರಮಾರ್ಥತತ್ತ್ವವೇ ನಾನು ಎಂದು ಪ್ರತ್ಯಕ್ಷವಾಗಿ ಹೇಳುತ್ತಿರುವಾಗ ಆ ಶಂಕೆ ಏಳುವುದೇ ಇಲ್ಲ. ‘ಅಪರಂ ಭವತೋ ಜನ್ಮ’ ಎಂದು ರಾಗವೆಳೆದ ಅರ್ಜುನನಿಗೆ ಸಂದೇಹದ ಅಂಶವೇನಾದರೂ ಇದ್ದರೆ ವಿಶ್ವರೂಪದರ್ಶನವನ್ನು ಮಾಡಿಸಿ, ಅದನ್ನೂ ಭಗವಂತನು ನಿರ್ಮೂಲ ಮಾಡಿದ್ದಾನೆ. ಸಾಕ್ಷಾತ್ ಭಗವಂತನೇ ಬೋಧಿಸಿದ್ದರಿಂದ ಗೀತೆಯು ಅತ್ಯಂತ ಪ್ರಾಮಾಣಿಕವೆಂದು ತಿಳಿಸುವುದೇ ಈ ಬಗೆಯ ನಿರ್ದೇಶನಕ್ಕೆ ಉದ್ದಿಷ್ಟವಾಗಿದೆ. ‘ಗೀತಾ ಸುಗೀತಾ ಕರ್ತವ್ಯಾ ಕಿಮನ್ಯೈಃ ಶಾಸ್ತ್ರವಿಸ್ತರೈಃ। ಯಾ ಸ್ವಯಂ ಪದ್ಮನಾಭಸ್ಯ ಮುಖಪದ್ಮಾದ್ವಿನಿಃಸೃತಾ’ ಎಂಬ ಶ್ಲೋಕದ

ತಾತ್ಪರ್ಯವೇ ಇದು.

**ಕೃತಜ್ಞತಾ ಸಮರ್ಪಣೆ**

ಈ ಗ್ರಂಥರಚನೆಗೆ ಕಾರಣರೂ ಉಪಕಾರಿಗಳೂ ಆದ ಮಹನೀಯರನ್ನು ಕೃತಜ್ಞತೆಯಿಂದ ಸ್ಮರಿಸಿಕೊಳ್ಳುವುದು ನನ್ನ ಕರ್ತವ್ಯವಾಗಿದೆ. ಶ್ರೀಮದ್ಭಗವದ್ಗೀತೆಗೆ ಸರಳವಾದ ಒಂದು ಕನ್ನಡ ಅನುವಾದವನ್ನು ಮಾಡಬೇಕೆಂಬ ಸಂಕಲ್ಪ ನನಗೆ ಬಹಳ ದಿನಗಳಿಂದ ಇತ್ತು. ಶ್ರೀ ಗುರುಸಾಂನಿಧ್ಯದಲ್ಲಿ ಪ್ರಸ್ಥಾನತ್ರಯಭಾಷ್ಯಗಳನ್ನು ನಾನು ಅಧ್ಯಯನ ಮಾಡಿದ್ದುಂಟು. ನಾನು ಗಳಿಸಿದ ವೇದಾಂತಜ್ಞಾನವು ತುಂಬಿ ಹರಿಯುವ ಗಂಗಾನದಿಯಿಂದ ಒಂದು ಬೊಗಸೆ ಗಂಗಾಜಲವನ್ನು ತೆಗೆದುಕೊಂಡಂತೆ. ಈ ಜಲವೇ ಗೀತಾನುವಾದದ ಸಂಕಲ್ಪಕ್ಕೆ ಬೀಜವಾಗಿರಬೇಕು. ಇದನ್ನು ಚಿಗುರಿಸಿ ಬೆಳೆಸಿದವರು ನನ್ನ ಒಬ್ಬ ಹಿತಚಿಂತಕರು. ಅವರಿಂದ ನನಗೆ ದೊರೆತ ಸಹಾಯ ಪ್ರೋತ್ಸಾಹಗಳು ಅಮೂಲ್ಯವಾದವು. ಒಂದು ಸಾಲಿನ ಬರವಣಿಗೆಯಿಂದ ಏನು ಹೇಳಿದಂತೆಯೂ ಆಗುವುದಿಲ್ಲ. ಭಗವಂತನ ಅನುಗ್ರಹವು ಅವರ ಮೇಲೆ ಸದಾ ಇರಲಿ.

ಈ ಅನುವಾದಕಾರ್ಯಕ್ಕೆ ಹೊಳೆನರಸೀಪುರದ ಶ್ರೀ ಸಚ್ಚಿದಾನಂದೇಂದ್ರ ಸರಸ್ವತೀಸ್ವಾಮಿಗಳು ರಚಿಸಿರುವ ಅನೇಕ ವೇದಾಂತಗ್ರಂಥಗಳಿಂದ ನನಗೆ ಮಹೋಪಕಾರವಾಗಿದೆ. ಆ ಮಹಾತ್ಮರಿಗೆ ಈ ಸಂದರ್ಭದಲ್ಲಿ ಭಕ್ತಿಪೂರ್ವಕವಾಗಿ ಸಾಷ್ಟಾಂಗನಮಸ್ಕಾರಗಳನ್ನರ್ಪಿಸುತ್ತೇನೆ.

ಬೆಂಗಳೂರಿನ ಶ್ರೀರಾಮಕೃಷ್ಣಮಠದ ಅಧ್ಯಕ್ಷರಾದ ಪೂಜ್ಯ ಶ್ರೀ ಹರ್ಷಾನಂದ ಸ್ವಾಮೀಜಿಯವರು ನನ್ನ ಪ್ರಾರ್ಥನೆಯನ್ನು ಮನ್ನಿಸಿ, ಅರ್ಥವತ್ತಾದ ಒಂದು ಮುನ್ನುಡಿಯನ್ನು ಬರೆದು ಹರಸಿದ್ದಾರೆ. ಅವರಿಗೆ ನನ್ನ ಸಾಷ್ಟಾಂಗ ಪ್ರಣಾಮಗಳು ಸಲ್ಲುತ್ತವೆ.

ಈ ಪುಸ್ತಕದ ಹಸ್ತಪ್ರತಿಯನ್ನು ಸಮಗ್ರವಾಗಿ ಓದಿ ಇದನ್ನು ಉತ್ತಮಪಡಿಸಲು ಯೋಗ್ಯವಾದ ಸಲಹೆ ಸೂಚನೆಗಳನ್ನಿತ್ತವರು ನನ್ನ ಕಿರಿಯ ಮಿತ್ರರಾದ ಶ್ರೀ ಡಿ. ಆರ್. ವೆಂಕಟರಮಣನ್ ಅವರು. ನನಗೆ ಯಾವಾಗಲೂ ಸಹಾಯಹಸ್ತವನ್ನಿತ್ತು ಉಪಕರಿಸುತ್ತ ಬಂದಿರುವ ಅವರು ನನಗೆ ಸದಾ ಸ್ಮರಣೀಯರು.

ಮೈಸೂರಿನಲ್ಲಿ ಗೀತಾ ಬುಕ್ ಹೌಸ್ ಎಂದು ಸುಪ್ರಸಿದ್ಧವಾದ ಗ್ರಂಥ ಪ್ರಕಾಶನ ಸಂಸ್ಥೆಯನ್ನು ನಡೆಸಿಕೊಂಡು ಬರುತ್ತಿರುವ ಶ್ರೀ ಎಂ.

ಸತ್ಯನಾರಾಯಣರಾವ್ ಸಹೋದರರು ಈ ಗ್ರಂಥದ ಪ್ರಕಾಶನಕಾರ್ಯವನ್ನು ಸಂತೋಷದಿಂದ ಅಂಗೀಕರಿಸಿ ಉತ್ತೇಜನವನ್ನಿತ್ತಿದ್ದಾರೆ. ಪ್ರಾಮಾಣಿಕರೂ ಸಜ್ಜನರೂ ಶ್ರದ್ಧಾಭಕ್ತಿಸಂಪನ್ನರೂ ಆದ ಪ್ರಕಾಶಕರು ದೊರಕಿರುವು ದೊಂದು ನನ್ನ ಸುಯೋಗವೇ ಸರಿ. ಶ್ರೀ ಎಂ. ಸತ್ಯನಾರಾಯಣರಾವ್ ಸಹೋದರರಿಗೂ ಅವರ ಕುಟುಂಬವರ್ಗದವರಿಗೂ ಭಗವಾನ್ ಶ್ರೀಕೃಷ್ಣನು ಸಮಸ್ತ ಶ್ರೇಯಸ್ಸುಗಳನ್ನೂ ಅನುಗ್ರಹಿಸಲೆಂದು ಪ್ರಾರ್ಥಿಸಿಕೊಳ್ಳುತ್ತೇನೆ.

ಈ ಪುಸ್ತಕವನ್ನು ಅಂದವಾಗಿಯೂ, ಶುದ್ಧವಾಗಿಯೂ, ಶ್ರದ್ಧೆಯಿಂದ ಮುದ್ರಿಸಿಕೊಟ್ಟಿರುವ ಜೆ.ಎಸ್ಎಸ್. ಪ್ರಿಂಟಿಂಗ್ ಪ್ರೆಸ್ ಅವರಿಗೆ ನನ್ನ ಕೃತಜ್ಞತೆಗಳು ಸಲ್ಲುತ್ತವೆ.

**ವೇದವೇದ್ಯಂ ವೇದವಿದಂ ವೇದಾಂತಾರ್ಥಪ್ರಕಾಶಕಮ್ ।**
**ವಿಶ್ವವಂದ್ಯಂ ವಿಭುಂ ವಿಶ್ವಂ ಕೃಷ್ಣಂ ವಂದೇ ಜಗದ್ಗುರುಮ್ ॥**

**ಎನ್. ರಂಗನಾಥಶರ್ಮಾ**

ವೈಶಾಖ ಶುದ್ಧ ಪಂಚಮೀ
ಈಶ್ವರ ಸಂವತ್ಸರ
ಮೇ ೧೧, ೧೯೯೭

**ಸಮರ್ಪಣೆ**

ನನ್ನ ಪೂಜ್ಯ ತಂದೆತಾಯಿಗಳಾದ
ಶ್ರೀ ನಡಹಳ್ಳಿ ತಿಮ್ಮಪ್ಪ - ಜಾನಕಮ್ಮನವರ
ಪುಣ್ಯಸ್ಮರಣೆಗಾಗಿ
ಸಮರ್ಪಿತ

— ಎನ್. ರಂಗನಾಥಶರ್ಮಾ

ಓಂ

# ಧ್ಯಾನಶ್ಲೋಕಗಳು

ಪಾರ್ಥಾಯ ಪ್ರತಿಬೋಧಿತಾಂ ಭಗವತಾ ನಾರಾಯಣೇನ ಸ್ವಯಮ್
ವ್ಯಾಸೇನ ಗ್ರಥಿತಾಂ ಪುರಾಣಮುನಿನಾ ಮಧ್ಯೇ ಮಹಾಭಾರತಮ್ ।
ಅದ್ವೈತಾಮೃತವರ್ಷಿಣೀಂ ಭಗವತೀಮಷ್ಟಾದಶಾಧ್ಯಾಯಿನೀಮ್
ಅಂಬ ತ್ವಾಮನುಸಂದಧಾಮಿ ಭಗವದ್ಗೀತೇ ಭವದ್ವೇಷಿಣೀಮ್ ॥ ೧

ನಮೋಽಸ್ತು ತೇ ವ್ಯಾಸವಿಶಾಲಬುದ್ಧೇ ಫುಲ್ಲಾರವಿಂದಾಯತಪತ್ರನೇತ್ರ ।
ಯೇನ ತ್ವಯಾ ಭಾರತತೈಲಪೂರ್ಣಃ ಪ್ರಜ್ವಾಲಿತೋ
ಜ್ಞಾನಮಯಃ ಪ್ರದೀಪಃ ॥ ೨

ಪ್ರಪನ್ನಪಾರಿಜಾತಾಯ ತೋತ್ರವೇತ್ರೈಕಪಾಣಯೇ ।
ಜ್ಞಾನಮುದ್ರಾಯ ಕೃಷ್ಣಾಯ ಗೀತಾಮೃತದುಹೇ ನಮಃ ॥ ೩

ವಸುದೇವಸುತಂ ದೇವಂ ಕಂಸಚಾಣೂರಮರ್ದನಮ್ ।
ದೇವಕೀಪರಮಾನಂದಂ ಕೃಷ್ಣಂ ವಂದೇ ಜಗದ್ಗುರುಮ್ ॥ ೪

ಸರ್ವೋಪನಿಷದೋ ಗಾವಃ ದೋಗ್ಧಾ ಗೋಪಾಲನಂದನಃ ।
ಪಾರ್ಥೋ ವತ್ಸಸ್ಸುಧೀರ್ಭೋಕ್ತಾ ದುಗ್ಧಂ ಗೀತಾಽಮೃತಂ ಮಹತ್ ॥ ೫

ಭೀಷ್ಮದ್ರೋಣತಟಾ ಜಯದ್ರಥಜಲಾ ಗಾಂಧಾರನೀಲೋತ್ಪಲಾ
ಶಲ್ಯಗ್ರಾಹವತೀ ಕೃಪೇಣ ವಹನೀ ಕರ್ಣೇನ ವೇಲಾಕುಲಾ ।
ಅಶ್ವತ್ಥಾಮವಿಕರ್ಣಘೋರಮಕರಾ ದುರ್ಯೋಧನಾವರ್ತಿನೀ
ಸೋತ್ತೀರ್ಣಾ ಖಲು ಪಾಂಡವೈಃ ರಣನದೀ ಕೈವರ್ತಕಃ ಕೇಶವಃ ॥ ೬

ಪಾರಾಶರ್ಯವಚಸ್ಸರೋಜಮಮಲಂ ಗೀತಾರ್ಥಗಂಧೋತ್ಕಟಮ್
ನಾನಾಖ್ಯಾನಕಕೇಸರಂ ಹರಿಕಥಾ ಸಂಬೋಧನಾಬೋಧಿತಮ್ ।
ಲೋಕೇ ಸಜ್ಜನಷಟ್ಪದೈರಹರಹಃ ಪೇಪೀಯಮಾನಂ ಮುದಾ
ಭೂಯಾದ್ಭಾರತಪಂಕಜಂ ಕಲಿಮಲಪ್ರಧ್ವಂಸಿ ನಃ ಶ್ರೇಯಸೇ ॥ ೭

* * * *

ಶ್ರೀಃ

ಮೂಕಂ ಕರೋತಿ ವಾಚಾಲಂ ಪಂಗುಂ ಲಂಘಯತೇ ಗಿರಿಮ್ ।
ಯತ್ಕೃಪಾ ತಮಹಂ ವಂದೇ ಪರಮಾನಂದಮಾಧವಮ್ ॥
ವಸುದೇವಸುತಂ ದೇವಂ ಕಂಸಚಾಣೂರಮರ್ದನಮ್ ।
ದೇವಕೀಪರಮಾನಂದಂ ಕೃಷ್ಣಂ ವಂದೇ ಜಗದ್ಗುರುಮ್ ॥

# ಗೀತಾರ್ಥಪ್ರಕಾಶ

## ಅಧ್ಯಾಯ ೧

## ಅರ್ಜುನವಿಷಾದಯೋಗ

**ಧೃತರಾಷ್ಟ್ರ ಉವಾಚ –**

**ಧರ್ಮಕ್ಷೇತ್ರೇ ಕುರುಕ್ಷೇತ್ರೇ ಸಮವೇತಾ ಯುಯುತ್ಸವಃ ।**
**ಮಾಮಕಾಃ ಪಾಂಡವಾಶ್ಚೈವ ಕಿಮಕುರ್ವತ ಸಂಜಯ ॥** ೧

**ಧೃತರಾಷ್ಟ್ರನು ಹೇಳಿದನು –** ಧರ್ಮಕ್ಷೇತ್ರವೆನಿಸಿದ ಕುರುಕ್ಷೇತ್ರದಲ್ಲಿ ನನ್ನವರೂ ಮತ್ತು ಪಾಂಡವರೂ ಸಹ ಯುದ್ಧ ಮಾಡುವ ಇಚ್ಛೆಯಿಂದ ಸೇರಿದರಷ್ಟೆ. ಆಮೇಲೆ ಅವರು ಏನು ಮಾಡಿದರು, ಸಂಜಯ ?

**ಸಂಜಯ ಉವಾಚ –**

**ದೃಷ್ಟ್ವಾ ತು ಪಾಂಡವಾನೀಕಂ ವ್ಯೂಢಂ ದುರ್ಯೋಧನಸ್ತದಾ ।**
**ಆಚಾರ್ಯಮುಪಸಂಗಮ್ಯ ರಾಜಾ ವಚನಮಬ್ರವೀತ್ ॥** ೨

**ಸಂಜಯನು ಹೀಗೆಂದನು –** ಆಗ ರಾಜನಾದ ದುರ್ಯೋಧನನು ವ್ಯೂಹಗಟ್ಟಿ ಸಜ್ಜಾಗಿ ನಿಂತಿದ್ದ ಪಾಂಡವರ ಸೇನೆಯುನ್ನು ನೋಡಿ, ದ್ರೋಣಾಚಾರ್ಯರ ಬಳಿಗೆ ಹೋಗಿ ಈ ಮಾತನ್ನು ನುಡಿದನು.

**ಪಶ್ಯೈತಾಂ ಪಾಂಡುಪುತ್ರಾಣಾಮಾಚಾರ್ಯ ಮಹತೀಂ ಚಮೂಮ್ ।**
**ವ್ಯೂಢಾಂ ದ್ರುಪದಪುತ್ರೇಣ ತವ ಶಿಷ್ಯೇಣ ಧೀಮತಾ ॥ ೩**

ಆಚಾರ್ಯರೆ, ನಿಮ್ಮ ಧೀಮಂತ ಶಿಷ್ಯನಾದ ದ್ರುಪದಪುತ್ರನು (ಧೃಷ್ಟದ್ಯುಮ್ನನು) ವ್ಯೂಹಗಟ್ಟಿ ನಿಲ್ಲಿಸಿರುವ ಈ ಮಹಾಸೈನ್ಯವನ್ನು ನೋಡೋಣವಾಗಲಿ.

**ಅತ್ರ ಶೂರಾ ಮಹೇಷ್ವಾಸಾ ಭೀಮಾರ್ಜುನಸಮಾ ಯುಧಿ ।**
**ಯುಯುಧಾನೋ ವಿರಾಟಶ್ಚ ದ್ರುಪದಶ್ಚ ಮಹಾರಥಃ ॥ ೪**

ಇದರಲ್ಲಿ ಮಹಾಧನುರ್ಧಾರಿಗಳೂ ಯುದ್ಧದಲ್ಲಿ ಭೀಮಾರ್ಜುನರಿಗೆ ಸಮಾನರೂ ಆದ ಶೂರರಿದ್ದಾರೆ. ಅವರು ಯಾರೆಂದರೆ: ಯುಯುಧಾನ, ವಿರಾಟರಾಜ, ಮಹಾರಥನಾದ ದ್ರುಪದ.

**ಧೃಷ್ಟಕೇತುಶ್ಚೇಕಿತಾನಃ ಕಾಶೀರಾಜಶ್ಚ ವೀರ್ಯವಾನ್ ।**
**ಪುರುಜಿತ್ ಕುಂತಿಭೋಜಶ್ಚ ಶೈಬ್ಯಶ್ಚ ನರಪುಂಗವಃ ॥ ೫**

ಮತ್ತು ಧೃಷ್ಟಕೇತು, ಚೇಕಿತಾನ, ವೀರನಾದ ಕಾಶೀರಾಜ, ಪುರುಜಿತ್, ಕುಂತಿಭೋಜ ಮತ್ತು ನರಶ್ರೇಷ್ಠನಾದ ಶೈಬ್ಯರಾಜ.

**ಯುಧಾಮನ್ಯುಶ್ಚ ವಿಕ್ರಾಂತ ಉತ್ತಮೌಜಾಶ್ಚ ವೀರ್ಯವಾನ್ ।**
**ಸೌಭದ್ರೋ ದ್ರೌಪದೇಯಾಶ್ಚ ಸರ್ವ ಏವ ಮಹಾರಥಾಃ ॥ ೬**

ಅಲ್ಲದೆ ಪರಾಕ್ರಮಿಯಾದ ಯುಧಾಮನ್ಯು, ವೀರನಾದ ಉತ್ತಮೌಜ – ಎಂಬವರಿದ್ದಾರೆ. ಸುಭದ್ರಾಪುತ್ರನಾದ ಅಭಿಮನ್ಯುವೂ ದ್ರೌಪದಿಯ ಪುತ್ರರೂ ಇದ್ದಾರೆ. ಇವರೆಲ್ಲರೂ ಮಹಾರಥರೇ ಸರಿ.

**ಟಿಪ್ಪಣಿ :** ಯುಯುಧಾನನೆಂದರೆ ಸಾತ್ಯಕಿ. ಧೃಷ್ಟಕೇತುವು ಶಿಶುಪಾಲನ ಮಗ. ಚೇಕಿತಾನನು ವೀರನಾದ ಒಬ್ಬ ಯಾದವ. ಕಾಶಿಯ ರಾಜ ಕಾಶೀರಾಜ – ಇವನ ಹೆಸರು ತಿಳಿಯದು. ಪುರುಜಿತ್, ಕುಂತಿಭೋಜ – ಇವರಿಬ್ಬರು ಅಣ್ಣತಮ್ಮಂದಿರು. ಇವರ ತಂದೆಯ ಹೆಸರೂ ಕುಂತಿಭೋಜ ಎಂದೇ. ಅವನು ಕುಂತಿಯ ಸಾಕುತಂದೆ. ಆದ್ದರಿಂದ ಈ ಅಣ್ಣತಮ್ಮಂದಿರು ಪಾಂಡವರಿಗೆ ಸೋದರಮಾವಂದಿರಾಗುತ್ತಾರೆ. ಶಿಬಿ ದೇಶದ ರಾಜ ಶೈಬ್ಯ. ಇವನ ಹೆಸರು ಗೋವಾಸನ. ಯುಧಾಮನ್ಯು ಮತ್ತು ಉತ್ತಮೌಜರು ಪಾಂಚಾಲದೇಶದ ಯೋಧರು. ಪ್ರತಿವಿಂಧ್ಯ, ಸುತಸೋಮ, ಶ್ರುತಕೀರ್ತಿ, ಶತಾನೀಕ, ಶ್ರುತಸೇನ

– ಎಂಬ ಐವರು ಯುಧಿಷ್ಠಿರಾದಿಗಳಿಂದ ಕ್ರಮವಾಗಿ ದ್ರೌಪದಿಯಲ್ಲಿ ಜನಿಸಿದ ಐವರು ಮಕ್ಕಳು. ಧನುರ್ಧಾರಿಗಳಾದ ಹತ್ತುಸಾವಿರ ಜನರೊಡನೆ ಏಕಾಕಿಯಾಗಿ ಯುದ್ಧಮಾಡಬಲ್ಲ ಯೋಧನಿಗೆ ಮಹಾರಥನೆಂಬ ಬಿರುದು.

**ಏಕೋ ದಶಸಹಸ್ರಾಣಿ ಯೋಧಯೇದ್ಯಸ್ತು ಧನ್ವಿನಾಂ ।**
**ಶಸ್ತ್ರಶಾಸ್ತ್ರಪ್ರವೀಣಶ್ಚ ಸ ವೈ ಪ್ರೋಕ್ತೋ ಮಹಾರಥಃ ॥**
**ಅಮಿತಾನ್ ಯೋಧಯೇದ್ಯಸ್ತು ಸಂಪ್ರೋಕ್ತೋಽತಿರಥಸ್ತು ಸಃ ।**
**ರಥಸ್ತ್ವೇಕೇನ ಯೋದ್ಧಾ ಸ್ಯಾತ್ತನ್ನೂನೋಽರ್ಧರಥಃ ಸ್ಮೃತಃ ॥**

ಎಂದು ಲಕ್ಷಣವಿದೆ.

ಮಹಾರಥನಿಗಿಂತ ಅತಿರಥನು ಕಡಿಮೆ ದರ್ಜೆಯವನು. 'ಅಮಿತಾನ್ ಯೋಧಯೇದ್ಯಸ್ತು' ಎನ್ನುವುದಕ್ಕೆ 'ಏಕಕಾಲದಲ್ಲಿ ಬಹಳ ಜನರೊಡನೆ ಯುದ್ಧ ಮಾಡಬಲ್ಲವನು' ಎಂದರ್ಥ.

**ಅಸ್ಮಾಕಂ ತು ವಿಶಿಷ್ಟಾ ಯೇ ತಾನ್ನಿಬೋಧ ದ್ವಿಜೋತ್ತಮ ।**
**ನಾಯಕಾ ಮಮ ಸೈನ್ಯಸ್ಯ ಸಂಜ್ಞಾರ್ಥಂ ತಾನ್ ಬ್ರವೀಮಿ ತೇ ॥ ೭**

ದ್ವಿಜೋತ್ತಮರೆ, ಇನ್ನು ನಮ್ಮ ಪಕ್ಷದಲ್ಲಿ ಹೆಸರಾಂತವರಾಗಿ ನನ್ನ ಸೈನ್ಯದಲ್ಲಿರುವ ನಾಯಕರು ಯಾರೆಂಬುದನ್ನು ನಿಮ್ಮ ಸ್ಮರಣೆಗಾಗಿ ಹೇಳುತ್ತೇನೆ. ಚಿತ್ತೈಸಬೇಕು.

**ಭವಾನ್ ಭೀಷ್ಮಶ್ಚ ಕರ್ಣಶ್ಚ ಕೃಪಶ್ಚ ಸಮಿತಿಂಜಯಃ ।**
**ಅಶ್ವತ್ಥಾಮಾ ವಿಕರ್ಣಶ್ಚ ಸೌಮದತ್ತಿಸ್ತಥೈವ ಚ ॥ ೮**

ತಾವು, ಭೀಷ್ಮರು, ಕರ್ಣ, ಕೃಪಾಚಾರ್ಯರು, ಸಮಿತಿಂಜಯ, ಅಶ್ವತ್ಥಾಮಾಚಾರ್ಯರು, ವಿಕರ್ಣ, ಸೋಮದತ್ತನ ಪುತ್ರನಾದ ಭೂರಿಶ್ರವ – ಇವರು.

**ಟಿಪ್ಪಣಿ :** ಸಮಿತಿಂಜಯ ಎಂಬವನು ಒಬ್ಬ ವೀರನಾದ ಯಾದವನೆಂದು ಸಭಾಪರ್ವದಲ್ಲಿದೆ (ಸಭಾ. ೧೪–೫೮). ಈ ಶಬ್ದಕ್ಕೆ ಸಂಗ್ರಾಮವನ್ನು ಗೆಲ್ಲ ತಕ್ಕವನೆಂಬ ಯೌಗಿಕಾರ್ಥವನ್ನಿಟ್ಟುಕೊಂಡು ಕೃಪಾಚಾರ್ಯನಿಗೆ ವಿಶೇಷಣವೆಂದು ಕೆಲವರು ಹೇಳಿದ್ದಾರೆ. ವಿಕರ್ಣನು ದುರ್ಯೋಧನನ ತಮ್ಮಂದಿರಲ್ಲೊಬ್ಬನು.

**ಅನ್ಯೇ ಚ ಬಹವಃ ಶೂರಾ ಮದರ್ಥೇ ತ್ಯಕ್ತಜೀವಿತಾಃ ।**
**ನಾನಾಶಸ್ತ್ರಪ್ರಹರಣಾಃ ಸರ್ವೇ ಯುದ್ಧವಿಶಾರದಾಃ ॥ ೯**

ಇವರಲ್ಲದೆ ನನಗಾಗಿ ಜೀವದ ಹಂಗುದೊರೆದು ಹೋರಾಡತಕ್ಕ ಶೂರರು ಬಹುಸಂಖ್ಯೆಯಲ್ಲಿದ್ದಾರೆ. ಸರ್ವರೂ ವಿವಿಧಾಯುಧಗಳನ್ನು ಧರಿಸಿ ಯುದ್ಧ ಮಾಡತಕ್ಕವರು. ಎಲ್ಲರೂ ರಣಪಂಡಿತರು.

**ಅಪರ್ಯಾಪ್ತಂ ತದಸ್ಮಾಕಂ ಬಲಂ ಭೀಷ್ಮಾಭಿರಕ್ಷಿತಮ್ ।**
**ಪರ್ಯಾಪ್ತಂ ತ್ವಿದಮೇತೇಷಾಂ ಬಲಂ ಭೀಮಾಭಿರಕ್ಷಿತಮ್ ॥ ೧೦**

ಆದ್ದರಿಂದ ಭೀಷ್ಮಾಭಿರಕ್ಷಿತವಾದ ನಮ್ಮ ಬಲವು ಅಪರಿಮಿತವಾಗಿದೆ. ಭೀಮನಿಂದ ರಕ್ಷಿತವಾದ ಆ ಜನರ ಬಲವಾದರೋ ಪರಿಮಿತವಾದದ್ದು.

**ಟಿಪ್ಪಣಿ :** ದುರ್ಯೋಧನನ ಕಡೆಯಲ್ಲಿ ಹನ್ನೊಂದು ಅಕ್ಷೌಹಿಣೀ ಸೇನೆ ಇತ್ತು. ಪಾಂಡವರ ಕಡೆ ಏಳು ಅಕ್ಷೌಹಿಣೀ ಸೇನೆ ಮಾತ್ರವಿತ್ತು. ಪರ್ಯಾಪ್ತ = ಪರಿಮಿತ, ಅಪರ್ಯಾಪ್ತ = ಅಪರಿಮಿತ ಎಂದರ್ಥ. ಹಾಗಲ್ಲದೆ ಪರ್ಯಾಪ್ತವೆಂದರೆ 'ಸಾಕಷ್ಟು – ಸಮರ್ಥ' ಎಂದೂ ಅಪರ್ಯಾಪ್ತವೆಂದರೆ 'ಸಾಕಾಗದಷ್ಟು – ಅಸಮರ್ಥ' ಎಂದೂ ಅರ್ಥವಾಗುತ್ತದೆ. ಈ ಎರಡನೆಯ ಅರ್ಥವನ್ನಿಟ್ಟುಕೊಂಡು ಈ ಶ್ಲೋಕಕ್ಕೆ ಕೆಲವರು ಅರ್ಥ ಹೇಳಿದ್ದಾರೆ. ಅದು ಸಮುಚಿತವಲ್ಲ. ಏಕೆಂದರೆ, "ನನ್ನ ಸೇನೆ ದೊಡ್ಡದು. ನನಗೆ ಜಯಪ್ರಾಪ್ತಿ ನಿಶ್ಚಯ" ಎಂದು ದುರ್ಯೋಧನನೇ ಹಲವು ಬಾರಿ ಹೇಳಿದ್ದಾನೆ. (ಉದ್ಯೋ. ೫೪. ೬೦ – ೭೦, ಭೀಷ್ಮ. ೫೧. ೪ – ೬) ಅಕ್ಷರಶಃ ಈ ಶ್ಲೋಕದಂತಹ ಶ್ಲೋಕಗಳೇ ಅವನ ಬಾಯಿಯಿಂದ ಬಂದಿವೆ.

ಪಾಂಡವರ ಸೇನಾಪತಿ ಧೃಷ್ಟದ್ಯುಮ್ನನಾಗಿದ್ದರೂ ಅವರ ಸೇನೆ 'ಭೀಮಾಭಿರಕ್ಷಿತ' ಎಂದು ಹೇಳಿದ್ದೇಕೆಂದರೆ, ಮೊದಲನೆಯ ದಿನ ಅವರ ಸೇನೆಯನ್ನು ವಜ್ರವ್ಯೂಹದಲ್ಲಿ ನಿಲ್ಲಿಸಲಾಗಿತ್ತು. ಅದರ ಅಗ್ರಭಾಗದಲ್ಲಿ ಭೀಮಸೇನನು ಗದಾಪಾಣಿಯಾಗಿ ನಿಂತದ್ದರಿಂದ ದುರ್ಯೋಧನನಿಗೆ ಭೀಮನೇ ಎದ್ದುಕಾಣುತ್ತಿದ್ದನು.

**ಅಯನೇಷು ಚ ಸರ್ವೇಷು ಯಥಾಭಾಗಮವಸ್ಥಿತಾಃ ।**
**ಭೀಷ್ಮಮೇವಾಭಿರಕ್ಷಂತು ಭವಂತಃ ಸರ್ವ ಏವ ಹಿ ॥ ೧೧**

ಇನ್ನು ನೀವೆಲ್ಲರೂ ನಿಮಗಾಗಿ ಗೊತ್ತಾಗಿರುವ ಸಮಸ್ತವ್ಯೂಹದ್ವಾರಗಳಲ್ಲಿಯೂ ನಿಂತುಕೊಂಡು ಭೀಷ್ಮರನ್ನೇ ರಕ್ಷಿಸಿಕೊಳ್ಳಬೇಕು.

**ವಿವರಣೆ :** ಅದ್ವಿತೀಯ ಪರಾಕ್ರಮಿಯಾದ ಭೀಷ್ಮನಿಗೆ ಇನ್ನೊಬ್ಬರಿಂದ ರಕ್ಷಣೆ ಬೇಕಾಗುತ್ತದೆಯೆ ? ದುರ್ಯೋಧನನ ಅಭಿಪ್ರಾಯವೇನೆಂದರೆ ; ಒಮ್ಮೆ

ಸ್ತ್ರೀಯಾಗಿದ್ದ ಶಿಖಂಡಿಯೊಡನೆ ಮಾತ್ರ ತಾನು ಯುದ್ಧ ಮಾಡುವುದಿಲ್ಲ ವೆಂದೂ ಕೈ ಎತ್ತುವುದಿಲ್ಲವೆಂದೂ ಭೀಷ್ಮನು ಸ್ಪಷ್ಟವಾಗಿ ಹೇಳಿದ್ದನು. ಆದ್ದ ರಿಂದ ಶಿಖಂಡಿಯನ್ನು ಭೀಷ್ಮಸಂಹಾರಕ್ಕಾಗಿ ಪಾಂಡವರು ಕಳಿಸಬಹುದು. ಶಿಖಂಡಿಯನ್ನು ಮುಂದಿಟ್ಟುಕೊಂಡು ಅವನನ್ನು ರಕ್ಷಿಸುತ್ತ ಅರ್ಜುನನೂ ಭೀಮಾದಿಗಳೂ ಬರಬಹುದು. ಅಂತಹ ಸನ್ನಿವೇಶಕ್ಕೆ ಅವಕಾಶವನ್ನೀಯದೆ, ಶಿಖಂಡಿಯು ಭೀಷ್ಮನೆದುರಿಗೆ ಬರದಂತೆ ನೋಡಿಕೊಳ್ಳಿರಿ – ಎಂದು.

**ತಸ್ಮಾದ್ ಭೀಷ್ಮೋ ರಕ್ಷಿತವ್ಯೋ ವಿಶೇಷೇಣೇತಿ ಮೇ ಮತಿಃ ।**
**ಶಿಖಂಡಿನೋ ವಧೇ ಯತ್ತಾಃ ಸರ್ವೇ ತಿಷ್ಠಂತು ಮಾಮಕಾಃ ॥**

– ಭೀಷ್ಮ. ೧೫ – ೧೬

ಎಂದು ದುರ್ಯೋಧನನು ತನ್ನವರಿಗೆ ಎಚ್ಚರಿಕೆ ಕೊಡುತ್ತಿದ್ದನು.

**ತಸ್ಯ ಸಂಜನಯನ್ ಹರ್ಷಂ ಕುರುವೃದ್ಧಃ ಪಿತಾಮಹಃ ।**
**ಸಿಂಹನಾದಂ ವಿನದ್ಯೋಚ್ಚೈಃ ಶಂಖಂ ದಧ್ಮೌ ಪ್ರತಾಪವಾನ್ ॥ ೧೨**

ಅಷ್ಟರಲ್ಲಿ ಕುರುಕುಲಕ್ಕೆ ಹಿರಿಯನೂ ಪ್ರತಾಪಶಾಲಿಯೂ ಆದ ಪಿತಾಮಹನು (ಭೀಷ್ಮನು) ದುರ್ಯೋಧನನಿಗೆ ಹರ್ಷವಾಗಲೆಂದು ಸಿಂಹನಾದ ಮಾಡಿ ಗಟ್ಟಿಯಾಗಿ ಶಂಖವನ್ನೂದಿದನು.

**ತತಃ ಶಂಖಾಶ್ಚ ಭೇರ್ಯಶ್ಚ ಪಣವಾನಕಗೋಮುಖಾಃ ।**
**ಸಹಸೈವಾಭ್ಯಹನ್ಯಂತ ಸ ಶಬ್ದಸ್ತುಮುಲೋಽಭವತ್ ॥ ೧೩**

ಒಡನೆಯೇ (ರಣರಂಗದಲ್ಲಿ) ಶಂಖಗಳು ಊದಿದವು. ರಣಭೇರಿಗಳೂ ಪಣವ, ಆನಕ, ಗೋಮುಖಗಳೆಂಬ ರಣವಾದ್ಯಗಳೂ ರಭಸದಿಂದ ಬಾರಿ ಸಲ್ಪಟ್ಟವು. ಆ ಶಬ್ದವು ಎಲ್ಲೆಡೆಯೂ ತುಂಬಿ ಗದ್ದಲವೆದ್ದಿತು.

**ತತಃ ಶ್ವೇತೈರ್ಹಯೈರ್ಯುಕ್ತೇ ಮಹತಿ ಸ್ಯಂದನೇ ಸ್ಥಿತೌ ।**
**ಮಾಧವಃ ಪಾಂಡವಶ್ಚೈವ ದಿವ್ಯೌ ಶಂಖೌ ಪ್ರದಧ್ಮತುಃ ॥ ೧೪**

ಅನಂತರ (ನಾಲ್ಕು) ಬಿಳಿಯ ಕುದುರೆಗಳನ್ನು ಹೂಡಿದ್ದ ಮಹಾರಥದಲ್ಲಿ ಕುಳಿತ ಶ್ರೀಕೃಷ್ಣನೂ ಪಾಂಡುಪುತ್ರನಾದ ಅರ್ಜುನನೂ ತಮ್ಮ ದಿವ್ಯಶಂಖ ಗಳನ್ನೂದಿದರು.

**ಪಾಂಚಜನ್ಯಂ ಹೃಷೀಕೇಶೋ ದೇವದತ್ತಂ ಧನಂಜಯಃ ।**
**ಪೌಂಡ್ರಂ ದಧ್ಮೌ ಮಹಾಶಂಖಂ ಭೀಮಕರ್ಮಾ ವೃಕೋದರಃ ॥ ೧೫**

ಶ್ರೀಕೃಷ್ಣನು ಪಾಂಚಜನ್ಯವನ್ನೂ ಅರ್ಜುನನು ದೇವದತ್ತವೆಂಬ ಶಂಖ ವನ್ನೂ ಊದಿದರು. ಉಗ್ರವಾದ ಕಾರ್ಯವನ್ನೆಸಗಬಲ್ಲ ಭೀಮಸೇನನು ಪೌಂಡ್ರವೆಂಬ ದೊಡ್ಡ ಶಂಖವನ್ನೂದಿದನು.

**ಅನಂತವಿಜಯಂ ರಾಜಾ ಕುಂತೀಪುತ್ರೋ ಯುಧಿಷ್ಠಿರಃ ।**
**ನಕುಲಃ ಸಹದೇವಶ್ಚ ಸುಘೋಷಮಣಿಪುಷ್ಪಕೌ ॥ ೧೬**

ಕುಂತೀಪುತ್ರನಾದ ಧರ್ಮರಾಜನು ಅನಂತವಿಜಯುವನ್ನೂ, ನಕುಲನು ಸುಘೋಷವನ್ನೂ, ಸಹದೇವನು ಮಣಿಪುಷ್ಪಕವೆಂಬ ಶಂಖವನ್ನೂ ಊದಿ ದರು.

**ಕಾಶ್ಯಶ್ಚ ಪರಮೇಷ್ವಾಸಃ ಶಿಖಂಡೀ ಚ ಮಹಾರಥಃ ।**
**ಧೃಷ್ಟದ್ಯುಮ್ನೋ ವಿರಾಟಶ್ಚ ಸಾತ್ಯಕಿಶ್ಚಾಪರಾಜಿತಃ ॥ ೧೭**

ಮಹಾಧನ್ವಿಯಾದ ಕಾಶಿರಾಜನೂ ಮಹಾರಥನಾದ ಶಿಖಂಡಿಯೂ ಹಾಗೆಯೇ ಧೃಷ್ಟದ್ಯುಮ್ನನೂ ವಿರಾಟರಾಜನೂ ಸೋಲನ್ನೇ ಕಂಡರಿಯದ ಸಾತ್ಯಕಿಯೂ ತಮ್ಮ ತಮ್ಮ ಶಂಖವನ್ನೂದಿದರು.

**ದ್ರುಪದೋ ದ್ರೌಪದೇಯಾಶ್ಚ ಸರ್ವಶಃ ಪೃಥಿವೀಪತೇ ।**
**ಸೌಭದ್ರಶ್ಚ ಮಹಾಬಾಹುಃ ಶಂಖಾನ್ ದಧ್ಮುಃ ಪೃಥಕ್ ಪೃಥಕ್ ॥ ೧೮**

ಮಹಾರಾಜ–ಧೃತರಾಷ್ಟ್ರ, ದ್ರುಪದರಾಜನೂ ದ್ರೌಪದಿಯ ಐವರು ಪುತ್ರರೂ ಮಹಾಬಾಹುವಾದ ಅಭಿಮನ್ಯುವೂ ಎಲ್ಲರೂ ತಮ್ಮ ತಮ್ಮ ಶಂಖಗಳನ್ನು ಬೇರೆಬೇರೆಯಾಗಿ ಊದಿದರು.

**ಸ ಘೋಷೋ ಧಾರ್ತರಾಷ್ಟ್ರಾಣಾಂ ಹೃದಯಾನಿ ವ್ಯದಾರಯತ್ ।**
**ನಭಶ್ಚ ಪೃಥಿವೀಂ ಚೈವ ತುಮುಲೋ ವ್ಯನುನಾದಯನ್ ॥ ೧೯**

ಭೂಮ್ಯಾಕಾಶಗಳನ್ನು ಭೇದಿಸಿ ಪ್ರತಿಧ್ವನಿಸಿದ ತೀವ್ರವಾದ ಆ ಶಂಖ ಘೋಷವು ಕೌರವರ ಎದೆಗಳನ್ನು ಸೀಳಿಬಿಟ್ಟಿತು.

**ಅಥ ವ್ಯವಸ್ಥಿತಾನ್ ದೃಷ್ಟ್ವಾ ಧಾರ್ತರಾಷ್ಟ್ರಾನ್ ಕಪಿಧ್ವಜಃ ।**
**ಪ್ರವೃತ್ತೇ ಶಸ್ತ್ರಸಂಪಾತೇ ಧನುರುದ್ಯಮ್ಯ ಪಾಂಡವಃ ॥ ೨೦**
**ಹೃಷೀಕೇಶಂ ತದಾ ವಾಕ್ಯಮಿದಮಾಹ ಮಹೀಪತೇ ।**

ಇಷ್ಟಾದ ಮೇಲೆ, ಇನ್ನೇನು ಶಸ್ತ್ರಪ್ರಹಾರವಾಗುವ ಸಮಯ! ಆಗ ಸನ್ನದ್ಧರಾಗಿ ನಿಂತಿದ್ದ ಕೌರವರನ್ನು ಕಂಡು ಕಪಿಧ್ವಜನಾದ ಅರ್ಜುನನು

ಗಾಂಡೀವ ಧನುಸ್ಸನ್ನೆತ್ತಿಹಿಡಿದು, ಮಹಾರಾಜ–ಧೃತರಾಷ್ಟ್ರ, ಶ್ರೀಕೃಷ್ಣನನ್ನು ಕುರಿತು ಈ ಮಾತನ್ನು ಹೇಳಿದನು.

**ಅರ್ಜುನ ಉವಾಚ –**

**ಸೇನಯೋರುಭಯೋರ್ಮಧ್ಯೇ ರಥಂ ಸ್ಥಾಪಯ ಮೇಽಚ್ಯುತ ॥ ೨೧**
**ಯಾವದೇತಾನ್ ನಿರೀಕ್ಷೇಽಹಂ ಯೋದ್ಧುಕಾಮನವಸ್ಥಿತಾನ್ ।**
**ಕೈರ್ಮಯಾ ಸಹ ಯೋದ್ಧವ್ಯಮಸ್ಮಿನ್ ರಣಸಮುದ್ಯಮೇ ॥ ೨೨**

**ಅರ್ಜುನನು ಹೇಳಿದ್ದೇನೆಂದರೆ :** ಶ್ರೀಕೃಷ್ಣ, ಎರಡೂ ಸೇನೆಗಳ ಮಧ್ಯದಲ್ಲಿ ನನ್ನ ರಥವನ್ನು ನಿಲ್ಲಿಸು. ಯುದ್ಧಾಪೇಕ್ಷೆಯಿಂದ ಬಂದು ನಿಂತವರು ಯಾರುಯಾರೆಂಬುದನ್ನು ಮೊದಲು ನಾನು ನೋಡಬೇಕಾಗಿದೆ. ಈ ಯುದ್ಧ ಪ್ರಸಂಗದಲ್ಲಿ ಯಾರೊಡನೆ ನಾನು ಹೋರಾಡಬೇಕೆಂಬುದನ್ನು ತಿಳಿಯಬೇಕು.

**ಯೋತ್ಸ್ಯಮಾನಾನವೇಕ್ಷೇಽಹಂ ಯ ಏತೇಽತ್ರ ಸಮಾಗತಾಃ ।**
**ಧಾರ್ತರಾಷ್ಟ್ರಸ್ಯ ದುರ್ಬುದ್ಧೇರ್ಯುದ್ಧೇ ಪ್ರಿಯಚಿಕೀರ್ಷವಃ ॥ ೨೩**

ದುರ್ಬುದ್ಧಿಯಾದ ಆ ಧೃತರಾಷ್ಟ್ರಪುತ್ರನಿಗೆ ಸಂತೋಷವನ್ನುಂಟುಮಾಡಬೇಕೆಂದು ಈ ಸಮರಭೂಮಿಗೆ ಬಂದು ಯುದ್ಧ ಮಾಡಲಿರುವ ಇವರು ಯಾರುಯಾರೆಂಬುದನ್ನು ನಾನು ನೋಡುತ್ತೇನೆ.

**ಸಂಜಯ ಉವಾಚ –**

**ಏವಮುಕ್ತೋ ಹೃಷೀಕೇಶೋ ಗುಡಾಕೇಶೇನ ಭಾರತ ।**
**ಸೇನಯೋರುಭಯೋರ್ಮಧ್ಯೇ ಸ್ಥಾಪಯಿತ್ವಾ ರಥೋತ್ತಮಮ್ ॥**

**ಭೀಷ್ಮದ್ರೋಣಪ್ರಮುಖತಃ ಸರ್ವೇಷಾಂ ಚ ಮಹೀಕ್ಷಿತಾಮ್ ।**
**ಉವಾಚ ಪಾರ್ಥ ಪಶ್ಯೈತಾನ್ ಸಮವೇತಾನ್ ಕುರೂನಿತಿ ॥ ೨೪**

**ಸಂಜಯನು ಹೇಳಿದನು:** ಭರತವಂಶೋದ್ಭವ–ಧೃತರಾಷ್ಟ್ರ, ಅರ್ಜುನನು ಹೀಗೆ ಹೇಳಲಾಗಿ ಶ್ರೀಕೃಷ್ಣನು ಉತ್ತಮವಾದ ಆ ರಥವನ್ನು ಉಭಯಸೇನೆಗಳ ನಡುವೆ, ಭೀಷ್ಮದ್ರೋಣರ ಸಂಮುಖದಲ್ಲಿ ಸಮಸ್ತರಾಜರ ಎದುರಿಗೆ ನಿಲ್ಲಿಸಿ "ಪಾರ್ಥ, ಇಲ್ಲಿ ನೆರೆದಿರುವ ಈ ಕೌರವರನ್ನು ನೋಡು" ಎಂದನು.

**ತತ್ರಾಪಶ್ಯತ್ ಸ್ಥಿತಾನ್ ಪಾರ್ಥಃ ಪಿತೄನಥ ಪಿತಾಮಹಾನ್ ।**
**ಆಚಾರ್ಯಾನ್ ಮಾತುಲಾನ್ ಭ್ರಾತೄನ್ ಪುತ್ರಾನ್ ಪೌತ್ರಾನ್ ಸಖೀಂಸ್ತಥಾ ॥ ೨೬**
**ಶ್ವಶುರಾನ್ ಸುಹೃದಶ್ಚೈವ ಸೇನಯೋರುಭಯೋರಪಿ ।**

ಅಲ್ಲಿ ಅರ್ಜುನನು ಎರಡು ಸೇನೆಗಳಲ್ಲಿಯೂ ಇದ್ದ ತಂದೆಗೆ ಸದೃಶರಾದ ಚಿಕ್ಕಪ್ಪ ಮೊದಲಾದವರನ್ನೂ ಪಿತಾಮಹರನ್ನೂ ಆಚಾರ್ಯರನ್ನೂ ಸೋದರ ಮಾವಂದಿರನ್ನೂ ಅಣ್ಣತಮ್ಮಂದಿರನ್ನೂ ಪುತ್ರಪೌತ್ರರನ್ನೂ ಮಿತ್ರರನ್ನೂ ನೋಡಿದನು. ಹಾಗೆಯೇ ಮಾವಂದಿರನ್ನೂ ಆಪ್ತರಾದ ಉಪಕಾರಿ ಜನರನ್ನೂ ಕಂಡನು.

**ಟಿಪ್ಪಣಿ :** ಈ ಶ್ಲೋಕದಲ್ಲಿ ಪಿತೃಗಳೆಂದರೆ ತಂದೆಗೆ ಸದೃಶರಾದ ಭೂರಿಶ್ರವ ಮೊದಲಾದವರು. ಭೂರಿಶ್ರವನು ಕುರುವಂಶದ ಒಬ್ಬ ದೊರೆ. ಭೀಷ್ಮ ಸೋಮದತ್ತ ಮೊದಲಾದವರು ಪಿತಾಮಹರು. ಸೋಮದತ್ತನು ಭೂರಿಶ್ರವನ ತಂದೆ. ದ್ರೋಣ, ಕೃಪಾದಿಗಳು ಆಚಾರ್ಯರು. ಶಲ್ಯ, ಶಕುನಿ ಮೊದಲಾದವರು ಸೋದರಮಾವಂದಿರು. ದುರ್ಯೋಧನಾದಿಗಳು ಅಣ್ಣ ತಮ್ಮಂದಿರು. ಅಶ್ವತ್ಥಾಮ ಮೊದಲಾದವರು ಮಿತ್ರರು. ಸುಹೃದರೆಂದರೆ ಆಪ್ತ ರಾದ ಮಾತಾಮಹಾದಿಗಳು. ಅರ್ಜುನನು ನೋಡಿದವರಲ್ಲಿ ಪಾಂಡವ ಸೇನೆಯಲ್ಲಿದ್ದವರೂ ಸೇರುತ್ತಾರೆ.

**ತಾನ್ ಸಮೀಕ್ಷ್ಯ ಸ ಕೌಂತೇಯಃ ಸರ್ವಾನ್ ಬಂಧೂನವಸ್ಥಿತಾನ್ ॥**
**ಕೃಪಯಾ ಪರಯಾವಿಷ್ಟೋ ವಿಷೀದನ್ನಿದಮಬ್ರವೀತ್ ।**

(ಹೀಗೆ ಎರಡೂ ಕಡೆಗಳಲ್ಲಿ) ಯುದ್ಧಕ್ಕೆ ಸಜ್ಜಾಗಿ ನಿಂತಿದ್ದ ಸಮಸ್ತ ಬಂಧುಬಾಂಧವರನ್ನೂ ಗಮನಿಸಿ ನೋಡಿದಾಗ, ಕುಂತೀಪುತ್ರನಾದ ಅರ್ಜುನ ನಿಗೆ (ಸ್ನೇಹವು ಉಕ್ಕಿ) ಅತಿಶಯವಾದ ಕಾರುಣ್ಯ ಉಂಟಾಯಿತು. ಮನಸ್ಸಿಗೆ ತುಂಬ ಕೆಡುಕೆನಿಸಿ ಅವನು ಹೀಗೆಂದನು.

**ಅರ್ಜುನ ಉವಾಚ –**

**ದೃಷ್ಟ್ವೇಮಂ ಸ್ವಜನಂ ಕೃಷ್ಣ ಯುಯುತ್ಸುಂ ಸಮುಪಸ್ಥಿತಮ್ ॥ ೨೮**
**ಸೀದಂತಿ ಮಮ ಗಾತ್ರಾಣಿ ಮುಖಂ ಚ ಪರಿಶುಷ್ಯತಿ ।**
**ವೇಪಥುಶ್ಚ ಶರೀರೇ ಮೇ ರೋಮಹರ್ಷಶ್ಚ ಜಾಯತೇ ॥ ೨೯**

**ಅರ್ಜುನನು ಹೇಳಿದ್ದು :** ಕೃಷ್ಣ, ಯುದ್ಧ ಮಾಡುವುದಕ್ಕಾಗಿ ಬಂದು ನಿಂತ ಈ ನನ್ನ ಆಪ್ತಬಂಧುಗಳನ್ನು ನೋಡಿದಾಗ ನನ್ನ ಕೈಕಾಲು ಮೊದಲಾದವು ಉಡಿದುಹೋಗುತ್ತಿವೆ. ಬಾಯಿ ಒಣಗುತ್ತಿದೆ. ದೇಹದಲ್ಲಿ ನಡುಕ ಬರುತ್ತಿದೆ. ಮೈನವಿರೇಳುತ್ತದೆ.

**ಗಾಂಡೀವಂ ಸ್ರಂಸತೇ ಹಸ್ತಾತ್ ತ್ವಕ್ಚೈವ ಪರಿದಹ್ಯತೇ ।**
**ನ ಚ ಶಕ್ನೋಮ್ಯವಸ್ಥಾತುಂ ಭ್ರಮತೀವ ಚ ಮೇ ಮನಃ ॥ ೩೦**

ಗಾಂಡೀವಧನುಸ್ಸು ಕೈಯಿಂದ ಜಾರುತ್ತಿದೆ. ಚರ್ಮ ಉರಿಯುತ್ತಿದೆ. ನಿಂತುಕೊಳ್ಳಲಾರೆ. ಮನಸ್ಸು ಕದಡಿ ತಲೆ ಸುತ್ತಿದಂತಾಗುತ್ತಿದೆ.

**ನಿಮಿತ್ತಾನಿ ಚ ಪಶ್ಯಾಮಿ ವಿಪರೀತಾನಿ ಕೇಶವ ।**
**ನ ಚ ಶ್ರೇಯೋಽನುಪಶ್ಯಾಮಿ ಹತ್ವಾ ಸ್ವಜನಮಾಹವೇ ॥ ೩೧**

ಕೇಶವ, ಬಹಳ ಅಪಶಕುನಗಳು ಕಾಣುತ್ತಿವೆ. ಯುದ್ಧದಲ್ಲಿ ನನ್ನ ಸ್ವಜನರನ್ನೇ ಕೊಂದುಹಾಕಿದರೆ ಯಾವ ಹಿತವಾದೀತೆಂದು ನನಗೆ ತೋರದು.

**ನ ಕಾಂಕ್ಷೇ ವಿಜಯಂ ಕೃಷ್ಣ ನ ಚ ರಾಜ್ಯಂ ಸುಖಾನಿ ಚ ।**
**ಕಿಂ ನೋ ರಾಜ್ಯೇನ ಗೋವಿಂದ ಕಿಂ ಭೋಗೈರ್ಜೀವಿತೇನ ವಾ ॥೩೨**

ಕೃಷ್ಣ, ನನಗೆ ವಿಜಯಾಪೇಕ್ಷೆ ಇಲ್ಲ. ರಾಜ್ಯವೂ ಬೇಡ, ಸುಖವೈಭವಗಳೂ ಬೇಡ. ಗೋವಿಂದ, (ಇವರೆಲ್ಲರನ್ನೂ ಕೊಂದ ಮೇಲೆ) ನಮಗೆ ರಾಜ್ಯದಿಂದೇನಾಗಬೇಕು ? ಭೋಗಗಳೇಕೆ ? ಈ ಪ್ರಾಣದಿಂದಾದರೂ ಏನಾಗಬೇಕು ?

**ಯೇಷಾಮರ್ಥೇ ಕಾಂಕ್ಷಿತಂ ನೋ ರಾಜ್ಯಂ ಭೋಗಾಃ ಸುಖಾನಿ ಚ ।**
**ತ ಇಮೇಽವಸ್ಥಿತಾಃ ಯುದ್ಧೇ ಪ್ರಾಣಾಂಸ್ತ್ಯಕ್ತ್ವಾ ಧನಾನಿ ಚ ॥ ೩೩**

ಯಾರಿಗಾಗಿ ನಾವು ರಾಜ್ಯವನ್ನೂ ಭೋಗಸೌಖ್ಯಗಳನ್ನೂ ಬಯಸ ತಕ್ಕದ್ದೋ ಅವರೇ ಪ್ರಾಣಧನಗಳ ಆಸೆಯನ್ನು ತೊರೆದು ಯುದ್ಧಕ್ಕಾಗಿ ಬಂದು ನಿಂತಿದ್ದಾರೆ !

**ಆಚಾರ್ಯಾಃ ಪಿತರಃ ಪುತ್ರಾಸ್ತಥೈವ ಚ ಪಿತಾಮಹಾಃ ।**
**ಮಾತುಲಾಃ ಶ್ವಶುರಾ ಪೌತ್ರಾ, ಶ್ಯಾಲಾಃ ಸಂಬಂಧಿನಸ್ತಥಾ ॥ ೩೪**

ಇಲ್ಲಿ ನಮ್ಮ ಗುರುಗಳಿದ್ದಾರೆ. ಪಿತೃಸಮಾನರಾದ ಚಿಕ್ಕಪ್ಪ ಮೊದಲಾದವರಿದ್ದಾರೆ. ಮಕ್ಕಳಿದ್ದಾರೆ, ಪಿತಾಮಹರಿದ್ದಾರೆ, ಸೋದರಮಾವ, ಹೆಣ್ಣು ಕೊಟ್ಟ

ಮಾವ, ಮೊಮ್ಮಕ್ಕಳು, ಭಾವಮೈದುನರು, ಇತರ ಬಾಂಧವರೂ ಇದ್ದಾರೆ.

**ಏತಾನ್ನ ಹಂತುಮಿಚ್ಛಾಮಿ ಘ್ನತೋಽಪಿ ಮಧುಸೂದನ ।**
**ಅಪಿ ತ್ರೈಲೋಕ್ಯರಾಜ್ಯಸ್ಯ ಹೇತೋಃ ಕಿಂ ನು ಮಹೀಕೃತೇ ॥ ೩೫**

ಮಧುಸೂದನ–ಕೃಷ್ಣ, ಇವರು ನನ್ನನ್ನು ಕಡಿದರೂ ಚಿಂತೆಯಿಲ್ಲ, ಇವರನ್ನು ನಾನು ಕೊಲ್ಲಲಿಚ್ಛಿಸುವುದಿಲ್ಲ. ಮೂರು ಲೋಕಗಳ ಒಡೆತನವು ಸಿಗುವುದಾದರೂ ಈ ಕಾರ್ಯವನ್ನು ಮಾಡಲಾರೆ. ಇನ್ನು ಭೂಲೋಕದ ಒಂದು ರಾಜ್ಯಕ್ಕಾಗಿ ಮಾಡುವೆನೆ ?

**ನಿಹತ್ಯ ಧಾರ್ತರಾಷ್ಟ್ರಾನ್ನಃ ಕಾ ಪ್ರೀತಿಃ ಸ್ಯಾಜ್ಜನಾರ್ದನ ।**
**ಪಾಪಮೇವಾಶ್ರಯೇದಸ್ಮಾನ್ ಹತ್ವೈತಾನಾತತಾಯಿನಃ ॥ ೩೬**

ಜನಾರ್ದನ, ಈ ಧಾರ್ತರಾಷ್ಟ್ರರನ್ನು ವಧಿಸಿದ್ದರಿಂದ ನಮಗಾಗುವ ಸಂತೋಷವಾದರೂ ಯಾವುದು? ಈ ಆತತಾಯಿಗಳನ್ನು ವಧಿಸಿದರೆ ನಮಗೆ ಪಾಪವೊಂದೇ ಅಂಟಿಕೊಳ್ಳುತ್ತದೆ.

ವಿವರಣೆ : **ಅಗ್ನಿದೋ ಗರದಶ್ಚೈವ ಶಸ್ತ್ರಪಾಣಿರ್ಧನಾಪಹಃ ।**
**ಕ್ಷೇತ್ರದಾರಹರಶ್ಚೈವ ಷಡೇತೇ ಆತತಾಯಿನಃ ॥**

(ವಸಿಷ್ಠಸ್ಮೃತಿ ೩–೧೬)

(ಮನೆಗೆ) ಬೆಂಕಿಯನ್ನಿಡತಕ್ಕವನು, ವಿಷ ಹಾಕುವವನು, ಶಸ್ತ್ರಪಾಣಿಯಾಗಿ ಕೊಲ್ಲುವುದಕ್ಕೆ ಬಂದವನು, ಹಣವನ್ನು ಸುಲಿಗೆ ಮಾಡಿದವನು, ಭೂಮಿಯನ್ನು ಅಪಹರಿಸಿದವನು, ಮಡದಿಯನ್ನು ಕದ್ದೊಯ್ಯುವವನು – ಈ ಆರು ಮಂದಿಗೆ ಆತತಾಯಿಗಳೆಂದು ಹೆಸರು.

ಇವರನ್ನು ಕೊಲ್ಲಬಹುದೆಂದೂ ಅದರಿಂದ ದೋಷ ಬರುವುದಿಲ್ಲವೆಂದೂ ಮನುಸ್ಮೃತಿಯಲ್ಲಿ ಹೇಳಿದೆ –

**ಆತತಾಯಿನಮಾಯಾಂತಂ ಹನ್ಯಾದೇವಾವಿಚಾರಯನ್ ।**
**ನಾತತಾಯಿವಧೇ ದೋಷೋ ಹಂತುರ್ಭವತಿ ಕಶ್ಚನ ॥**

(ಮನುಸ್ಮೃತಿ ೮. ೩೫೦–೩೫೧)

ಆರು ವಿಧದಲ್ಲಿಯೂ ಕೌರವರು ಪಾಂಡವರಿಗೆ ಆತತಾಯಿಗಳಾಗಿದ್ದಾರೆ. ಹೀಗಿರುವಾಗ ಅರ್ಜುನನ ಅಭಿಪ್ರಾಯವೇನು ? ವ್ಯಾಖ್ಯಾನಕಾರರು ಈ ರೀತಿ ಹೇಳುತ್ತಾರೆ – ಆತತಾಯಿಯನ್ನು ಕೊಂದರೆ ದೋಷವಿಲ್ಲವೆನ್ನುವುದು

ಅರ್ಥಶಾಸ್ತ್ರ. ಅಂಥವನಿಗೆ ರಾಜನು ದಂಡನೆಯನ್ನು ವಿಧಿಸಬೇಕಾಗಿಲ್ಲವೆಂಬ ರಾಜನೀತಿ ಇದು. ಪಾಪವಾದರೋ ಹಂತೃವಿಗೆ ಬಂದೇ ಬರುತ್ತದೆ. 'ನ ಹಿಂಸ್ಯಾತ್ ಸರ್ವಾಭೂತಾನಿ' ಎಂಬ ಧರ್ಮಶಾಸ್ತ್ರವು ಅರ್ಥಶಾಸ್ತ್ರಕ್ಕಿಂತ ಬಲವತ್ತರವಾದದ್ದು – ಎಂದು.

ವಸ್ತುತಃ, ಪ್ರಕೃತದಲ್ಲಿ ಆತತಾಯಿ ಎಂದರೆ ಕೊಲ್ಲುವುದಕ್ಕೆ ಬಂದ ಘಾತುಕ ಎಂದಿಷ್ಟೇ ಅರ್ಥ. 'ಆತತಾಯೀ ವಧೋದ್ಯತೇ' ಎಂದು ಅಮರಕೋಶವಿದೆ. ಆತತ + ಆಯೀ = ಆತತಾಯೀ. ಆಕ್ರಮಣಕಾರಿಯೆಂದು ಶಬ್ದದ ಯೌಗಿಕಾರ್ಥ. ಅರ್ಜುನನ ಹೇಳಿಕೆ ಲೋಕಾನುಸಾರಿಯಾದದ್ದು. ಸಿದ್ಧಾಂತ ಪಕ್ಷವಲ್ಲ – ಎಂಬುದನ್ನು ಗಮನದಲ್ಲಿಡಬೇಕು.

**ತಸ್ಮಾನ್ನಾರ್ಹಾ ವಯಂ ಹಂತುಂ ಧಾರ್ತರಾಷ್ಟ್ರಾನ್ ಸ್ವಬಾಂಧವಾನ್ ।**
**ಸ್ವಜನಂ ಹಿ ಕಥಂ ಹತ್ವಾ ಸುಖಿನಃ ಸ್ಯಾಮ ಮಾಧವ ॥ ೩೭**

ಆದ್ದರಿಂದ ನಮ್ಮ ಬಂಧುಗಳಾದ ಕೌರವರನ್ನು ಕೊಲ್ಲುವುದು ನಮಗೆ ತರವಲ್ಲ. ಮಾಧವ, ನಮ್ಮ ಸ್ವಜನರನ್ನೇ ಸಂಹರಿಸಿದ ಮೇಲೆ ನಾವು ಸುಖಿಗಳಾಗಿರುವುದೆಂತು ?

**ಯದ್ಯಪ್ಯೇತೇ ನ ಪಶ್ಯಂತಿ ಲೋಭೋಪಹತಚೇತಸಃ ।**
**ಕುಲಕ್ಷಯಕೃತಂ ದೋಷಂ ಮಿತ್ರದ್ರೋಹೇ ಚ ಪಾತಕಮ್ ॥ ೩೮**

ಲೋಭದಿಂದ ಬುದ್ಧಿಗೆಟ್ಟಿರುವ ಈ ಜನರಿಗೆ ಕುಲಕ್ಷಯದಿಂದಾಗುವ ದೋಷವೂ ಮಿತ್ರದ್ರೋಹದ ಪಾಪವೂ ಕಾಣುತ್ತಿಲ್ಲ.

**ಕಥಂ ನ ಜ್ಞೇಯಮಸ್ಮಾಭಿಃ ಪಾಪಾದಸ್ಮಾನ್ನಿವರ್ತಿತುಮ್ ।**
**ಕುಲಕ್ಷಯಕೃತಂ ದೋಷಂ ಪ್ರಪಶ್ಯದ್ಭಿರ್ಜನಾರ್ದನ ॥ ೩೯**

ಆದರೆ, ಜನಾರ್ದನ, ಕುಲಕ್ಷಯದಿಂದಾಗುವ ದೋಷವನ್ನು ಕಣ್ಣಾರೆ ಕಾಣುತ್ತಿರುವ ನಮಗೆ, ಈ ಪಾಪಕೃತ್ಯದಿಂದ ನಿವೃತ್ತರಾಗಬೇಕೆಂದು ಏಕೆ ತಿಳಿಯಬಾರದು ?

**ಕುಲಕ್ಷಯೇ ಪ್ರಣಶ್ಯಂತಿ ಕುಲಧರ್ಮಾಃ ಸನಾತನಾಃ ।**
**ಧರ್ಮೇ ನಷ್ಟೇ ಕುಲಂ ಕೃತ್ಸ್ನಮಧರ್ಮೋಽಭಿಭವತ್ಯುತ ॥ ೪೦**

ಕುಲಕ್ಷಯವಾಯಿತೆಂದರೆ, ಪರಂಪರೆಯಿಂದ ಬಂದ ಶಾಶ್ವತವಾದ ಕುಲಧರ್ಮಗಳು ನಾಶವಾಗುತ್ತವೆ. ಧರ್ಮವು ನಾಶವಾದೊಡನೆ ಅಳಿದುಳಿದ

ಎಲ್ಲ ಕುಲದಲ್ಲಿ ಅಧರ್ಮವು ಮನೆಮಾಡಿಕೊಳ್ಳುತ್ತದೆ.

**ಅಧರ್ಮಾಭಿಭವಾತ್ ಕೃಷ್ಣ ಪ್ರದುಷ್ಯಂತಿ ಕುಲಸ್ತ್ರಿಯಃ ।**
**ಸ್ತ್ರೀಷು ದುಷ್ಟಾಸು ವಾರ್ಷ್ಣೇಯ ಜಾಯತೇ ವರ್ಣಸಂಕರಃ ॥ ೪೧**

ಅಧರ್ಮವು ಪ್ರಬಲವಾದೊಡನೆ ಕುಲಸ್ತ್ರೀಯರು ಭ್ರಷ್ಟರಾಗುತ್ತಾರೆ. ಸ್ತ್ರೀಯರು ದುರ್ಮಾರ್ಗಕ್ಕೆ ಇಳಿದಾಗ ವರ್ಣಸಂಕರವಾಗುತ್ತದೆ.

**ವಿವರಣೆ :** ಸ್ತ್ರೀಷು ದುಷ್ಟಾಸು ವಾರ್ಷ್ಣೇಯ = ಯುದ್ಧದಲ್ಲಿ ಬಹುಮಂದಿ ರಾಜರು ಹತರಾಗುವುದರಿಂದ ಧರ್ಮನಿಯಾಮಕರಿಲ್ಲದೆ ರಾಜ್ಯಗಳಲ್ಲಿ ಅನಾಯಕತ್ವ ಉಂಟಾಗುತ್ತದೆ. ಅಸಂಖ್ಯಾತ ಯೋಧರು ಸಾಯುವುದರಿಂದ ಪುರುಷರ ಅಭಾವ ತಲೆದೋರುತ್ತದೆ. ಆಗ ಕುಲಸ್ತ್ರೀಯರೂ ಸಹ ಕಾಮಪ್ರವೃತ್ತಿಯಿಂದ ದುರ್ಮಾರ್ಗಕ್ಕೆ ಇಳಿಯುತ್ತಾರೆ ಎಂದು ಅಭಿಪ್ರಾಯ. ಅಲ್ಲದೆ ಕುಲೀನಪುರುಷರು ಧರ್ಮಭ್ರಷ್ಟರಾಗಿ ವೇಶ್ಯಾದಿಸ್ತ್ರೀಯರಲ್ಲಿ ಪ್ರಸಕ್ತರಾದರೂ ವರ್ಣಸಾಂಕರ್ಯದ ಸಂಭವ ವಿರಳ. ಕುಲಸ್ತ್ರೀಯರ ವಿಷಯ ಹಾಗಲ್ಲವೆಂಬುದನ್ನು ಗಮನಿಸಬೇಕು.

**ಸಂಕರೋ ನರಕಾಯೈವ ಕುಲಘ್ನಾನಾಂ ಕುಲಸ್ಯ ಚ ।**
**ಪತಂತಿ ಪಿತರೋ ಹ್ಯೇಷಾಂ ಲುಪ್ತಪಿಂಡೋದಕಕ್ರಿಯಾಃ ॥ ೪೨**

ಹೀಗಾದ ವರ್ಣಸಾಂಕರ್ಯವು ಕುಲಘಾತುಕರಿಗೂ ಭ್ರಷ್ಟವಾದ ಕುಲದವರಿಗೂ ನರಕವನ್ನೇ ಉಂಟುಮಾಡುತ್ತದೆ. (ಶ್ರಾದ್ಧಕರ್ತೃಗಳಿಲ್ಲದೆ ಹೋಗುವುದರಿಂದ) ಇವರ ಪಿತೃಗಳು ಪಿಂಡೋದಕಕ್ರಿಯೆಗಳಿಲ್ಲವಾಗಿ ನರಕದಲ್ಲಿ ಬೀಳುವರು.

**ದೋಷೈರೇತೈಃ ಕುಲಘ್ನಾನಾಂ ವರ್ಣಸಂಕರಕಾರಕೈಃ ।**
**ಉತ್ಸಾದ್ಯಂತೇ ಜಾತಿಧರ್ಮಾಃ ಕುಲಧರ್ಮಾಶ್ಚ ಶಾಶ್ವತಾಃ ॥ ೪೩**

ವರ್ಣಸಾಂಕರ್ಯವನ್ನುಂಟುಮಾಡುವ ಕುಲಘಾತುಕರ ಈ ದುಷ್ಕೃತ್ಯಗಳಿಂದ, ಅನಾದಿಯಾಗಿ ಬಂದ ಜಾತಿಧರ್ಮಗಳೂ ಆಯಾ ವಂಶದಲ್ಲಿರುವ ಕುಲಧರ್ಮಗಳೂ ನಿರ್ಮೂಲವಾಗಿ ಧ್ವಂಸಗೊಳ್ಳುತ್ತವೆ.

**ಉತ್ಸನ್ನಕುಲಧರ್ಮಾಣಾಂ ಮನುಷ್ಯಾಣಾಂ ಜನಾರ್ದನ ।**
**ನರಕೇ ನಿಯತಂ ವಾಸೋ ಭವತೀತ್ಯನುಶುಶ್ರುಮ ॥ ೪೪**

ಜನಾರ್ದನ, ಕುಲಧರ್ಮಗಳನ್ನಾಚರಿಸದೆ ಭ್ರಷ್ಟರಾದ ಮನುಷ್ಯರಿಗೆ

ನರಕವಾಸವು ಕಟ್ಟಿಟ್ಟದ್ದೆಂದು ನಾವು ಕೇಳಿದ್ದೇವೆ.

**ಅಹೋ ಬತ! ಮಹತ್ಪಾಪಂ ಕರ್ತುಂ ವ್ಯವಸಿತಾ ವಯಮ್ ।**
**ಯದ್ರಾಜ್ಯಸುಖಲೋಭೇನ ಹಂತುಂ ಸ್ವಜನಮುದ್ಯತಾಃ ॥ ೪೫**

ರಾಜ್ಯಲೋಭದಿಂದ, ಸುಖದ ಆಸೆಯಿಂದ, ಸ್ವಜನರನ್ನೇ ಕೊಂದು ಹಾಕಲು ಹೊರಟುಬಿಟ್ಟೆವಲ್ಲ, ಅಯ್ಯೋ! ಅಯ್ಯೋ! ನಾವು ಮಹಾಪಾಪ ಕಾರ್ಯವನ್ನಾಚರಿಸಲು ತೊಡಗಿಬಿಟ್ಟೆವು.

**ಯದಿ ಮಾಮಪ್ರತೀಕಾರಮಶಸ್ತ್ರಂ ಶಸ್ತ್ರಪಾಣಯಃ ।**
**ಧಾರ್ತರಾಷ್ಟ್ರಾ ರಣೇ ಹನ್ಯುಸ್ತನ್ಮೇ ಕ್ಷೇಮತರಂ ಭವೇತ್ ॥ ೪೬**

ಯುದ್ಧಭೂಮಿಯಲ್ಲಿ ಶಸ್ತ್ರವನ್ನು ಚೆಲ್ಲಿಕೊಟ್ಟು ಯಾವ ಅಡ್ಡಿಯನ್ನೂ ಮಾಡದೆ ತಲೆಯೊಡ್ಡುವ ನನ್ನನ್ನು ಶಸ್ತ್ರಪಾಣಿಗಳಾದ ಕೌರವರು ಕೊಂದು ಹಾಕಿದರೆ, ನನಗೆ ಇನ್ನೂ ಕ್ಷೇಮವಾದೀತು.

**ಸಂಜಯ ಉವಾಚ –**

**ಏವಮುಕ್ತ್ವಾರ್ಜುನಃ ಸಂಖ್ಯೇ ರಥೋಪಸ್ಥ ಉಪಾವಿಶತ್ ।**
**ವಿಸೃಜ್ಯ ಸಶರಂ ಚಾಪಂ ಶೋಕಸಂವಿಗ್ನಮಾನಸಃ ॥ ೪೭**

**ಇತಿ ಶ್ರೀಮದ್ಭಗವದ್ಗೀತಾಸು ಉಪನಿಷತ್ಸು ಬ್ರಹ್ಮವಿದ್ಯಾಯಾಂ ಯೋಗಶಾಸ್ತ್ರೇ ಶ್ರೀಕೃಷ್ಣಾರ್ಜುನಸಂವಾದೇ ಅರ್ಜುನವಿಷಾದಯೋಗೋ ನಾಮ ಪ್ರಥಮೋऽಧ್ಯಾಯಃ**

**ಸಂಜಯನು ಹೇಳಿದನು :** ಶೋಕಾಕುಲಚಿತ್ತನಾದ ಅರ್ಜುನನು ರಣಭೂಮಿಯಲ್ಲಿ ಈ ಪ್ರಕಾರವಾಗಿ ನುಡಿದು, ಧನುರ್ಬಾಣಗಳನ್ನು ಕೆಳಗಿಟ್ಟು, ರಥದ ಮೇಲೆ ತಣ್ಣಗೆ ಕುಳಿತುಬಿಟ್ಟನು.

**ಇಲ್ಲಿಗೆ ಶ್ರೀಭಗವದ್ಗೀತೆಯಲ್ಲಿ ಅರ್ಜುನವಿಷಾದಯೋಗವೆಂಬ ಒಂದನೆಯ ಅಧ್ಯಾಯವು ಸಮಾಪ್ತವಾಯಿತು.**

# ೧ನೆಯ ಅಧ್ಯಾಯದ ಸಾರ

ಭಾರತಯುದ್ಧಾರಂಭದಲ್ಲಿ ಪಾಂಡವ-ಕೌರವ ಸೈನ್ಯಗಳು ಯುದ್ಧಕ್ಕೆ ಸಜ್ಜಾಗಿ ಬಂದು ನಿಂತವು. ಅರ್ಜುನನ ಅಪೇಕ್ಷೆಯಂತೆ ಶ್ರೀಕೃಷ್ಣನು ರಥವನ್ನು ಕೌರವರ ಸೈನ್ಯದ ಎದುರಿಗೆ ತಂದು ನಿಲ್ಲಿಸಿದನು. ಅರ್ಜುನನು ಶತ್ರುಸೈನ್ಯದಲ್ಲಿದ್ದ ಭೀಷ್ಮದ್ರೋಣಾದಿ ಗುರುಜನರನ್ನೂ ಶಲ್ಯನೇ ಮೊದಲಾದ ಬಾಂಧವರನ್ನೂ ಕಂಡು ಚಿಂತಾಗ್ರಸ್ತನಾದನು. "ನಾನು ಈ ಗುರುಹಿರಿಯರೊಡನೆ ಯುದ್ಧ ಮಾಡಬೇಕಾಗಿ ಬಂದಿತಲ್ಲ. ರಾಜ್ಯದ ಆಸೆಯಿಂದ ಇವರ ಮೇಲೆ ನಾನು ಕೈ ಎತ್ತಬಹುದೆ ? ನನ್ನವರೇ ಆದ ಬಂಧುಗಳನ್ನು ಕೊಲ್ಲಬಹುದೆ ? ಯುದ್ಧದಲ್ಲಿ ಉಭಯಪಕ್ಷಗಳಲ್ಲಿಯೂ ಬಹುಮಂದಿ ಹತರಾಗುತ್ತಾರೆ. ಇದರಿಂದ ಮಹತ್ತರವಾದ ಪಾಪವು ನನಗೆ ಗಂಟುಬೀಳುತ್ತದೆ. ಅಲ್ಲದೆ ಇವರ ಪತ್ನಿಯರಾದ ಕುಲಸ್ತ್ರೀಯರು ದುರ್ಮಾರ್ಗಕ್ಕಿಳಿಯಬಹುದು. ಆದರಿಂದ ವರ್ಣಸಾಂಕರ್ಯವಾಗುತ್ತದೆ. ಜಾತಿಧರ್ಮಗಳೂ ಕುಲಧರ್ಮಗಳೂ ನಾಶವಾಗುತ್ತವೆ. ಕೌರವರೇ ನನ್ನನ್ನು ಕೊಂದರೂ ಚಿಂತೆಯಿಲ್ಲ. ನಾನು ಯುದ್ಧ ಮಾಡುವುದಿಲ್ಲ" ಎಂದು ಶೋಕಸಂತಪ್ತನಾಗಿ ವಿಷಾದದಿಂದ ಧನುರ್ಬಾಣಗಳನ್ನು ಕೆಳಗಿಟ್ಟು ಸುಮ್ಮನೆ ಕುಳಿತುಬಿಟ್ಟನು. ಈ ಕಾರಣದಿಂದ ಶ್ರೀಕೃಷ್ಣನು ಮುಂದಿನ ಅಧ್ಯಾಯಗಳಲ್ಲಿ ಅರ್ಜುನನ ಶೋಕಮೋಹಗಳನ್ನು ಗೀತೋಪದೇಶದಿಂದ ಪರಿಹರಿಸುತ್ತಾನೆ.

ಇಲ್ಲೊಂದು ಪ್ರಶ್ನೆ ಹುಟ್ಟುತ್ತದೆ. ಅರ್ಜುನನು ವೀರಾಗ್ರೇಸರ. ಧೈರ್ಯಶಾಲಿ. ಹಿಂದೆ ಅನೇಕ ಯುದ್ಧಗಳನ್ನು ಮಾಡಿಯೇ ಇದ್ದಾನೆ. ವಿರಾಟಪರ್ವದ ಗೋಗ್ರಹಣ ಸಂದರ್ಭದಲ್ಲಿ ಭೀಷ್ಮದ್ರೋಣಾದಿಗಳನ್ನು ಎದುರಿಸಿಯೂ ಇದ್ದಾನೆ. ಯುದ್ಧದಲ್ಲಿ ಪ್ರಾಣಹಾನಿಯಾಗುತ್ತದೆಯೆಂಬುದು ಅವನಿಗೆ ಗೊತ್ತೇ ಇದೆ. ಅದೆಲ್ಲವನ್ನೂ ತಿಳಿದೇ ಯುದ್ಧಕ್ಕೆ ಸಂನದ್ಧನಾಗಿ ಬಂದಿದ್ದಾನೆ. ಈಗ 'ಭೀಷ್ಮಾದಿಗಳನ್ನು ಕೊಲ್ಲಲು ಮನಸ್ಸು ಬಾರದು. ಯುದ್ಧವು ಘೋರಹಿಂಸಾಕೃತ್ಯ' ಎಂದು ವಿಷಣ್ಣನಾಗಲು ಕಾರಣವೇನು ? ಈ ಪ್ರಶ್ನೆಗೆ ಹೀಗೆ ಸಮಾಧಾನವನ್ನು ಹೇಳಬಹುದು.

೧. ಗೋಗ್ರಹಣಸಂದರ್ಭದಲ್ಲಿ ವಿರಾಟರಾಜನ ಗೋವುಗಳನ್ನು ಬಿಡಿಸಿಕೊಂಡು ಹೋಗುವುದು ಮಾತ್ರ ಉದ್ದಿಷ್ಟವಾಗಿತ್ತು. ಅರ್ಜುನನು ಏಕಾಕಿಯಾಗಿ ಉತ್ತರಕುಮಾರನೊಡನೆ ಬಂದಿದ್ದ. ಅವನ ಬಂಧು

ಬಳಗದವರು ಜೊತೆಗೆ ಬಂದಿರಲಿಲ್ಲ. ಸಂಮೋಹನಾಸ್ತ್ರದಿಂದ ಕೌರವರನ್ನು ಎಚ್ಚರದಪ್ಪಿಸಿ ಗೋವುಗಳನ್ನು ಬಿಡಿಸಿಕೊಂಡು ಹೋಗಿದ್ದಾನೆ. ಈಗಲಾದರೋ ಹದಿನೆಂಟು ಅಕ್ಷೌಹಿಣೀ ಸೈನ್ಯವು ಯುದ್ಧಕ್ಕಾಗಿ ನೆರೆದಿದೆ. ತನ್ನ ಅಣ್ಣತಮ್ಮಂದಿರೂ ಮಕ್ಕಳೂ ಬಂಧುಮಿತ್ರರೂ ಯುದ್ಧದಲ್ಲಿ ಭಾಗಿಗಳಾಗಿ ಬಂದಿದ್ದಾರೆ. ಎದುರು ಪಕ್ಷದಲ್ಲಿಯೂ ಗುರುಹಿರಿಯರೂ ಸಕಲ ಬಂಧು ಮಿತ್ರರೂ ಬಂದು ನೆರೆದಿದ್ದಾರೆ. ಇದು ನಿರ್ಣಾಯಕವಾದ ಯುದ್ಧ. ಸಂಮೋಹನಾಸ್ತ್ರದಿಂದ ಏನೂ ಆಗದು. ಬಹುಜನರ ವಧೆಯಿಂದಲೇ ನಿರ್ಣಯವಾಗಬೇಕಾಗಿದೆ. ಅಲ್ಲದೆ ಸಂಜಯನು ಹಿಂದೆ ಸಂಧಾನಕ್ಕಾಗಿ ಬಂದಾಗ ಈ ಬಗೆಯ ಹಿಂಸಾಪ್ರಕರಣವು ನಡೆಯುವುದೆಂದು ಹೇಳಿ, ಆದರಿಂದಾಗುವ ಅನರ್ಥಗಳನ್ನು ವಿಶದಪಡಿಸಿ, ಯುದ್ಧವು ಬೇಡವೆಂದು ತಿಳಿಸಿಹೋಗಿದ್ದನು. ಪರೋಕ್ಷವಾಗಿ ಸಂಜಯನು ಹೇಳಿದ್ದ ವಿಷಯಗಳು ಈಗ ಪ್ರತ್ಯಕ್ಷವಾಗಿ ಎದುರಿಗೆ ನೋಡಿದಾಗ ಉದ್ಬುದ್ಧವಾಗಿ, ಉದಾತ್ತ ಸ್ವಭಾವದ ಅರ್ಜುನನ ವಿಷಾದಕ್ಕೆ ಕಾರಣಗಳಾದವು.

೨. ಶ್ರೀಕೃಷ್ಣನ ದಿವ್ಯೋಪದೇಶಕ್ಕೆ ಪಾತ್ರನಾಗಲು ಅರ್ಜುನನ ಪುಣ್ಯವೇ ಈ ವಿಷಾದಯೋಗವನ್ನು ಘಟಿಸಿತು. ಗೀತಾಮೃತವನ್ನು ಪಡೆಯಲು ಜಗತ್ತಿನ ಪುಣ್ಯವೂ ಈ ವಿಷಾದಯೋಗಕ್ಕೆ ಕಾರಣವಾಯಿತು.

## ಅಧ್ಯಾಯ ೨

# ಸಾಂಖ್ಯಯೋಗ

**ಸಂಜಯ ಉವಾಚ –**

**ತಂ ತಥಾ ಕೃಪಯಾವಿಷ್ಟಮಶ್ರುಪೂರ್ಣಾಕುಲೇಕ್ಷಣಮ್ ।**
**ವಿಷೀದಂತಮಿದಂ ವಾಕ್ಯಮುವಾಚ ಮಧೂಸೂದನಃ ॥ ೧**

ಈ ಪ್ರಕಾರದಲ್ಲಿ ಕರುಣೆಯಿಂದ ವ್ಯಾಪ್ತನಾಗಿ ವಿಷಾದಗೊಂಡು ಕಣ್ಣೀರು ಸುರಿಸುತ್ತಾ ಚಿಂತಾಕುಲನಾದ ಅರ್ಜುನನನ್ನು ಕುರಿತು ಶ್ರೀಕೃಷ್ಣನು ಹೀಗೆಂದನು.

**ಶ್ರೀಭಗವಾನುವಾಚ –**

**ಕುತಸ್ತ್ವಾ ಕಶ್ಮಲಮಿದಂ ವಿಷಮೇ ಸಮುಪಸ್ಥಿತಮ್ ।**
**ಅನಾರ್ಯಜುಷ್ಟಮಸ್ವರ್ಗ್ಯಮಕೀರ್ತಿಕರಮರ್ಜುನ ॥ ೨**

ಭಗವಾನ್ ಶ್ರೀಕೃಷ್ಣನು ಹೇಳಿದ್ದೇನೆಂದರೆ: ಅರ್ಜುನ, ಯುದ್ಧದ ಈ ಸಂಕಟ ಸಮಯದಲ್ಲಿ ನಿನಗೇಕೆ ಈ ಕಶ್ಮಲಭಾವನೆ ಬಂದು ಸೇರಿತಯ್ಯ? ಸತ್ಪುರುಷರಿಗೆ ಸಲ್ಲದ ಮನೋಭಾವವಿದು. ಸ್ವರ್ಗದ ದಾರಿಯಲ್ಲ. ಇದು ಕೀರ್ತಿಯನ್ನು ಕೆಡಿಸುವಂತಹುದು.

**ಟಿಪ್ಪಣಿ :**

**೧. ಐಶ್ವರ್ಯಸ್ಯ ಸಮಗ್ರಸ್ಯ ಧರ್ಮಸ್ಯ ಯಶಸಃ ಶ್ರಿಯಃ ।**
**ಜ್ಞಾನವೈರಾಗ್ಯಯೋಶ್ಚೈವ ಷಣ್ಣಾಂ ಭಗ ಇತೀರಣಾ ॥**

ಅಣಿಮಾದ್ಯಷ್ಟೈಶ್ವರ್ಯಗಳು, ಧರ್ಮ, ಯಶಸ್ಸು, ಸಂಪತ್ತು, ಜ್ಞಾನ, ವೈರಾಗ್ಯ – ಈ ಆರಕ್ಕೆ ಭಗವೆಂದು ಹೆಸರು. ಇವುಗಳನ್ನುಳ್ಳವನು ಭಗವಂತನು.

**೨. ಉತ್ಪತ್ತಿಂ ಚ ವಿನಾಶಂ ಚ ಭೂತಾನಾಮಾಗತಿಂ ಗತಿಮ್ ।**
**ವೇತ್ತಿ ವಿದ್ಯಾಮವಿದ್ಯಾಂ ಚ ಸ ವಾಚ್ಯೋ ಭಗವಾನಿತಿ ॥**

ಸಮಸ್ತಪ್ರಾಣಿಗಳ ಉತ್ಪತ್ತಿ, ವಿನಾಶಗಳನ್ನೂ ಆಗಾಮಿಗಳಾದ ಸಂಪತ್ತು ವಿಪತ್ತುಗಳನ್ನೂ ವಿದ್ಯೆ ಅವಿದ್ಯೆಗಳನ್ನೂ ತಿಳಿದವನು ಭಗವಂತನು.

**ಕ್ಲೈಬ್ಯಂ ಮಾ ಸ್ಮ ಗಮಃ ಪಾರ್ಥ ನೈತತ್ತ್ವಯ್ಯುಪಪದ್ಯತೇ ।**
**ಕ್ಷುದ್ರಂ ಹೃದಯದೌರ್ಬಲ್ಯಂ ತ್ಯಕ್ತ್ವೋತ್ತಿಷ್ಠ ಪರಂತಪ ॥ ೩**

ಪಾರ್ಥ, ಹೇಡಿತನಕ್ಕೆ ಈಡಾಗಬೇಡ. ಇದು ನಿನಗೆ ಸಮುಚಿತವಲ್ಲ. ಇದೊಂದು ಮನಸ್ಸಿನ ದೌರ್ಬಲ್ಯ. ಹೇ ಪರಂತಪ, ಕ್ಷುದ್ರವಾದ (ಕೀಳುತನದ) ಈ ದೌರ್ಬಲ್ಯವನ್ನು ಕಿತ್ತೆಸೆದು ಯುದ್ಧಕ್ಕಾಗಿ ಎದ್ದುನಿಲ್ಲು.

**ಅರ್ಜುನ ಉವಾಚ –**

**ಕಥಂ ಭೀಷ್ಮಮಹಂ ಸಂಖ್ಯೇ ದ್ರೋಣಂ ಚ ಮಧುಸೂದನ ।**
**ಇಷುಭಿಃ ಪ್ರತಿಯೋತ್ಸ್ಯಾಮಿ ಪೂಜಾರ್ಹಾವರಿಸೂದನ ॥ ೪**

**ಅರ್ಜುನನು ಹೇಳಿದನು:** ಶ್ರೀಕೃಷ್ಣ, ಭೀಷ್ಮರೂ, ದ್ರೋಣಾಚಾರ್ಯರೂ ನನಗೆ ಪರಮಪೂಜ್ಯರಾದವರು. ಯುದ್ಧದಲ್ಲಿ ಇವರನ್ನೆದುರಿಸಿ ಬಾಣಗಳನ್ನು ಹೂಡಿ ಹೇಗೆ ಯುದ್ಧ ಮಾಡಲಿ ?

**ಟಿಪ್ಪಣಿ :** ಅರಿಸೂದನ = ಶತ್ರುನಾಶಕ.

**ಗುರೂನಹತ್ವಾ ಹಿ ಮಹಾನುಭಾವಾನ್**
**ಶ್ರೇಯೋ ಭೋಕ್ತುಂ ಭೈಕ್ಷ್ಯಮಪೀಹ ಲೋಕೇ ।**
**ಹತ್ವಾರ್ಥಕಾಮಾಂಸ್ತು ಗುರೂನಿಹೈವ**
**ಭುಂಜೀಯ ಭೋಗಾನ್ ರುಧಿರಪ್ರದಿಗ್ಧಾನ್ ॥ ೫**

ಮಹಾನುಭಾವರಾದ ಈ ಗುರುಜನರನ್ನು ಕೊಲ್ಲದೆಯೇ ಈ ಲೋಕದಲ್ಲಿ ಭಿಕ್ಷಾನ್ನವನ್ನು ತಿನ್ನಬೇಕಾಗಿ ಬಂದರೂ ಅದು ಲೇಸು. ಈ ಜನರು ಧನಲುಬ್ಧರಾಗಿದ್ದರೂ ನನಗೆ ಗುರುಜನರೇ ಸರಿ. ಇವರನ್ನು ವಧಿಸಿ ರಕ್ತದಿಂದ ತೊಡೆದ ಭೋಗಗಳನ್ನು ಇಲ್ಲಿ ಅನುಭವಿಸಲೆ ?

**ವಿವರಣೆ :** ಭೀಷ್ಮ, ದ್ರೋಣ, ಕೃಪ, ಶಲ್ಯ – ಮೊದಲಾದವರು ಗುರು ಜನರು – ಹಿರಿಯರು. ಕೌರವರು ಯುದ್ಧಕ್ಕಿಳಿದಿರುವುದು ಅಧರ್ಮವೆಂದು ಗೊತ್ತಿದ್ದರೂ ಲೌಕಿಕ ಫಲಾಪೇಕ್ಷೆಗೆ ಒಳಗಾಗಿ ಕೌರವರ ಪಕ್ಷವನ್ನು ವಹಿಸಿದ್ದಾರೆ. ಅದ್ದರಿಂದ ಅವರು ಧನಲುಬ್ಧರು. ಈ ಮಾತನ್ನು ಯುದ್ಧಾರಂಭಕ್ಕೆ ಮೊದಲು ಭೀಷ್ಮರೇ ಯುಧಿಷ್ಠಿರನಿಗೆ ಹೇಳಿದ್ದಾನೆ –

**ಅರ್ಥಸ್ಯ ಪುರುಷೋ ದಾಸೋ ದಾಸಸ್ತ್ವರ್ಥೋ ನ ಕಸ್ಯಚಿತ್ ।**
**ಇತಿ ಸತ್ಯಂ ಮಹಾರಾಜ ಬದ್ಧೋಽಸ್ಮ್ಯರ್ಥೇನ ಕೌರವೈಃ ॥**

"ಯುಧಿಷ್ಠಿರ, ಮನುಷ್ಯನು ಹಣಕ್ಕೆ ದಾಸನಾಗಿದ್ದಾನೆ. ಹಣವು ಯಾರಿಗೂ ದಾಸವಾಗಿಲ್ಲ. ಈ ಮಾತು ಸತ್ಯ. ನಾನು ಹಣದ ನಿಮಿತ್ತವಾಗಿ ಕೌರವರಿಂದ ಬಂಧಿತನಾಗಿದ್ದೇನೆ."

ಹಣ = ದ್ರವ್ಯ, ಲೌಕಿಕ ಪ್ರಯೋಜನ.

**ನ ಚೈತದ್ವಿದ್ಮಃ ಕತರನ್ನೋ ಗರೀಯೋ**
**ಯದ್ವಾ ಜಯೇಮ ಯದಿ ವಾ ನೋ ಜಯೇಯುಃ ।**
**ಯಾನೇವ ಹತ್ವಾ ನ ಜಿಜೀವಿಷಾಮ-**
**ಸ್ತೇಽವಸ್ಥಿತಾಃ ಪ್ರಮುಖೇ ಧಾರ್ತರಾಷ್ಟ್ರಾಃ ॥ ೬**

ನಾವು ಅವರನ್ನು ಗೆಲ್ಲಬಹುದು ಅಥವಾ ಅವರೇ ನಮ್ಮನ್ನು ಗೆಲ್ಲಬಹುದು – ಇವೆರಡರಲ್ಲಿ ಯಾವುದು ಉತ್ತಮವೆಂದು ನಮಗೆ ತಿಳಿಯದಾಗಿದೆ. ಏಕೆಂದರೆ, ಯಾರನ್ನು ಸಂಹರಿಸಿ ನಾವು ಬದುಕಲಿಚ್ಛಿಸುವುದಿಲ್ಲವೋ ಅಂತಹ ಕೌರವರೇ ನಮ್ಮೆದುರಿಗೆ ಯುದ್ಧಕ್ಕಾಗಿ ಬಂದು ನಿಂತಿದ್ದಾರೆ.

**ವಿವರಣೆ :** 'ಭಿಕ್ಷಾವೃತ್ತಿ, ರಕ್ತದಿಂದ ತೊಯ್ದ ಭೋಗ – ಇವೆರಡರಲ್ಲಿ ಯಾವುದು ಉತ್ತಮವೆಂದು ತಿಳಿಯದಾಗಿದೆ' ಎಂದು ಕೆಲವರು ಅರ್ಥ ಮಾಡಿದ್ದಾರೆ. ಪಾಂಡವರು ಕುರುವಂಶದವರೇ ಆದರೂ ರೂಢಿಬಲದಿಂದ ಕೌರವರೆಂದರೆ ದುರ್ಯೋಧನಾದಿಗಳೆಂಬ ಅರ್ಥವನ್ನಿಟ್ಟುಕೊಳ್ಳಬೇಕು.

**ಕಾರ್ಪಣ್ಯದೋಷೋಪಹತಸ್ವಭಾವಃ**
**ಪೃಚ್ಛಾಮಿ ತ್ವಾಂ ಧರ್ಮಸಂಮೂಢಚೇತಾಃ ।**
**ಯಚ್ಛ್ರೇಯಃ ಸ್ಯಾನ್ನಿಶ್ಚಿತಂ ಬ್ರೂಹಿ ತನ್ಮೇ**
**ಶಿಷ್ಯಸ್ತೇಽಹಂ ಶಾಧಿ ಮಾಂ ತ್ವಾಂ ಪ್ರಪನ್ನಮ್ ॥ ೭**

ದೈನ್ಯದೋಷದಿಂದ ನನ್ನ ಕ್ಷತ್ರಿಯಸ್ವಭಾವಕ್ಕೆ ತಡೆಯುಂಟಾಗಿದೆ. ಧರ್ಮದ ವಿಷಯದಲ್ಲಿ ನನ್ನ ಮನಸ್ಸಿಗೆ ಮಬ್ಬು ಕವಿದಿದೆ. ಈಗ ನನಗೆ ಶ್ರೇಯಸ್ಕರವಾದದ್ದು ಯಾವುದು ? ಶ್ರೀಕೃಷ್ಣ, ನಿನ್ನ ಶಿಷ್ಯ ನಾನು. ನಿನಗೆ ಶರಣಾಗಿದ್ದೇನೆ. ನನಗೆ ಉಪದೇಶಿಸಿ ಬುದ್ಧಿ ಹೇಳು.

**ನ ಹಿ ಪ್ರಪಶ್ಯಾಮಿ ಮಮಾಪನುದ್ಯಾ-**
**ದ್ಯಚ್ಛೋಕಮುಚ್ಛೋಷಣಮಿಂದ್ರಿಯಾಣಾಮ್ ।**
**ಅವಾಪ್ಯ ಭೂಮಾವಸಪತ್ನಮೃದ್ಧಂ**
**ರಾಜ್ಯಂ ಸುರಾಣಾಮಪಿ ಚಾಧಿಪತ್ಯಮ್ ॥ ೮**

ಇಂದ್ರಿಯುಗಳನ್ನು ಒಣಗಿಸಿ ಹಿಪ್ಪೆ ಹೀರುತ್ತಿರುವ ನನ್ನ ಶೋಕವನ್ನು ನೀಗಿಸತಕ್ಕದ್ದು ಯಾವುದೆಂಬುದೇ ನನಗೆ ತೋಚುತ್ತಿಲ್ಲ. ಈ ಲೋಕದಲ್ಲಿ ನಿಷ್ಕಂಟಕವೂ ಸಮೃದ್ಧವೂ ಆದ ರಾಜ್ಯವು ದೊರೆತರೂ ದೇವತೆಗಳ ಮೇಲೆ ಪ್ರಭುತ್ವವೇ ಲಭಿಸಿದರೂ ಈ ಶೋಕವು ನೀಗದು.

**ಸಂಜಯ ಉವಾಚ –**

**ಏವಮುಕ್ತ್ವಾ ಹೃಷೀಕೇಶಂ ಗುಡಾಕೇಶಃ ಪರಂತಪಃ ।**
**ನ ಯೋತ್ಸ್ಯ ಇತಿ ಗೋವಿಂದಮುಕ್ತ್ವಾ ತೂಷ್ಣೀಂ ಬಭೂವ ಹ ॥ ೯**

**ಸಂಜಯನು ನುಡಿದನು :** ಪರಾಕ್ರಮಿಯಾದ ಅರ್ಜುನನು ಇಂದ್ರಿಯಾಧ್ಯಕ್ಷನಾದ ಭಗವಂತನಿಗೆ ಈ ಪ್ರಕಾರವಾಗಿ ಹೇಳಿದಮೇಲೆ, ಮತ್ತೆ ಶ್ರೀಕೃಷ್ಣನನ್ನು ನೋಡಿ 'ನಾನು ಯುದ್ಧ ಮಾಡುವುದಿಲ್ಲ' ಎಂದು ನುಡಿದು ಸುಮ್ಮನಾದನು.

**ತಮುವಾಚ ಹೃಷೀಕೇಶಃ ಪ್ರಹಸನ್ನಿವ ಭಾರತ ।**
**ಸೇನಯೋರುಭಯೋರ್ಮಧ್ಯೇ ವಿಷೀದಂತಮಿದಂ ವಚಃ ॥ ೧೦**

ಭಾರತ–ಧೃತರಾಷ್ಟ್ರ, ಆಗ ಎರಡು ಸೇನೆಗಳ ನಡುವೆ ವಿಷಣ್ಣನಾಗಿ ಕುಳಿತಿದ್ದ ಅರ್ಜುನನನ್ನು ನೋಡಿ, ಮುಗುಳ್ನಗೆ ಬೀರುತ್ತ ಪ್ರಸನ್ನಮುಖನಾದ ಭಗವಂತನು ಈ ಮಾತನ್ನಾಡಿದನು.

**ಶ್ರೀಭಗವಾನುವಾಚ –**

**ಅಶೋಚ್ಯಾನನ್ವಶೋಚಸ್ತ್ವಂ ಪ್ರಜ್ಞಾವಾದಾಂಶ್ಚ ಭಾಷಸೇ ।**
**ಗತಾಸೂನಗತಾಸೂಂಶ್ಚ ನಾನುಶೋಚಂತಿ ಪಂಡಿತಾಃ ॥ ೧೧**

**ಶ್ರೀಕೃಷ್ಣನು ಹೀಗೆಂದನು:** ಯಾರ ವಿಷಯುವಾಗಿ ಶೋಕಿಸಬೇಕಾಗಿಲ್ಲವೋ ಅಂಥವರ ವಿಷಯುವಾಗಿ ನೀನು ಶೋಕಪಟ್ಟಿದ್ದೀಯೆ. ಜೊತೆಗೆ ಬುದ್ಧಿಶಾಲಿಗಳಾಡುವ ಮಾತುಗಳನ್ನಾಡುತ್ತೀಯೆ ! ಸತ್ತವರ ವಿಷಯದಲ್ಲಾಗಲಿ ಬದುಕಿರತಕ್ಕವರ ವಿಷಯುದಲ್ಲಾಗಲಿ ಜ್ಞಾನಿಗಳು ಶೋಕಿಸುವುದಿಲ್ಲ.

**ವಿವರಣೆ :** ಬದುಕಿರತಕ್ಕವರ ವಿಷಯುವಾಗಿಯೂ ಶೋಕ ಉಂಟಾಗಬಹುದು. ಬಡತನ, ರೋಗ, ಅಂಗವಿಕಲತೆಗಳಿಂದ ನರಳತಕ್ಕವರನ್ನು ನೋಡಿ ಶೋಕಿಸುವುದು ಲೋಕದಲ್ಲಿದೆ. ಜನರ ಕಷ್ಟವನ್ನು ನೋಡಿ ಜ್ಞಾನಿಯೂ ಮರುಕಪಡುತ್ತಾನೆ. ಅದು ಲೋಕದೃಷ್ಟಿಯಿಂದ. ಅವನ

ಹೃದಯವು ಶಾಂತವಾಗಿಯೇ ಇರುತ್ತದೆ.

ಆತ್ಮನು ಎಂದಿಗೂ ಸಾಯುವುದಿಲ್ಲವಾದ್ದರಿಂದ ಶೋಕಿಸುವುದು ಯುಕ್ತವಲ್ಲ –

**ನ ತ್ವೇವಾಹಂ ಜಾತು ನಾಸಂ ನ ತ್ವಂ ನೇಮೇ ಜನಾಧಿಪಾಃ ।**
**ನ ಚೈವ ನ ಭವಿಷ್ಯಾಮಃ ಸರ್ವೇ ವಯಮತಃ ಪರಮ್ ॥ ೧೨**

ನಾನು ಈ ಹಿಂದೆ ಇರಲಿಲ್ಲವೆಂಬುದು ಎಂದಿಗೂ ಇಲ್ಲ. ಹಾಗೆಯೇ ನೀನು ಇರಲಿಲ್ಲವೆಂಬುದೂ ಇಲ್ಲ. ಇಲ್ಲಿ ನೆರೆದಿರುವ ಈ ನರಪತಿಗಳೂ ಸಹ ಹಿಂದೆ ಇದ್ದವರೇ. ನಾವೆಲ್ಲರೂ ಇನ್ನು ಮುಂದೆ ಇರುವುದಿಲ್ಲವೆಂಬುದೂ ಸಲ್ಲದು (ಮುಂದೆಯೂ ನಾವೆಲ್ಲರೂ ಇದ್ದೇ ಇರುತ್ತೇವೆ. ನಿತ್ಯನಾದ ಆತ್ಮನಿಗೆ ಹುಟ್ಟು ಸಾವುಗಳಿಲ್ಲ).

**ದೇಹಿನೋಽಸ್ಮಿನ್ ಯಥಾ ದೇಹೇ ಕೌಮಾರಂ ಯೌವನಂ ಜರಾ ।**
**ತಥಾ ದೇಹಾಂತರಪ್ರಾಪ್ತಿರ್ಧೀರಸ್ತತ್ರ ನ ಮುಹ್ಯತಿ ॥ ೧೩**

ದೇಹಧಾರಿಯಾದ ಆತ್ಮನಿಗೆ ಈ ದೇಹದಲ್ಲಿ ಬಾಲ್ಯ, ಯೌವನ, ಮುಪ್ಪುಗಳು ಹೇಗೆ ಬರುತ್ತವೆಯೋ ಹಾಗೆ ಬೇರೆ ಇನ್ನೊಂದು ದೇಹದ ಪ್ರಾಪ್ತಿಯೂ ಆಗುತ್ತದೆ. ಇದಕ್ಕಾಗಿ ಧೀರನು (ಜ್ಞಾನಿಯು) ಮೋಹವಶನಾಗುವುದಿಲ್ಲ.

**ವಿವರಣೆ :** ಬಾಲ್ಯ ಮೊದಲಾದವು ದೇಹಕ್ಕೆ ಮಾತ್ರ, ಆತ್ಮನಿಗಲ್ಲ. ಆತ್ಮನು ಯಾವ ವಿಕಾರವನ್ನೂ ಹೊಂದದೆ ಒಂದೇ ರೀತಿ ಇರುತ್ತಾನೆ. ಸಾವು ಎಂದರೆ ಈ ದೇಹದಿಂದ ಬಿಡುಗಡೆ–ಇನ್ನೊಂದು ದೇಹದ ಪ್ರಾಪ್ತಿ.

**ಮಾತ್ರಾಸ್ಪರ್ಶಾಸ್ತು ಕೌಂತೇಯ ಶೀತೋಷ್ಣಸುಖದುಃಖದಾಃ ।**
**ಆಗಮಾಪಾಯಿನೋಽನಿತ್ಯಾಃ ತಾಂಸ್ತಿತಿಕ್ಷಸ್ವ ಭಾರತ ॥ ೧೪**

ಅರ್ಜುನ, ಇಂದ್ರಿಯಗಳು ಮತ್ತು ಶಬ್ದಾದಿವಿಷಯಗಳು ಚಳಿ, ಸೆಕೆ, ಸುಖ, ದುಃಖಗಳನ್ನು ಕೊಡುತ್ತವೆ. ಇವುಗಳಿಗೆ ಉತ್ಪತ್ತಿ ವಿನಾಶಗಳುಂಟು. ಅವೇನೂ ಶಾಶ್ವತವಲ್ಲ. ಅವನ್ನು ನೀನು ಸಹಿಸಿಕೊಳ್ಳಬೇಕು.

**ವಿವರಣೆ :** ಆತ್ಮನು ನಿತ್ಯನಾದರೂ ಸುಖದುಃಖಾದಿಗಳು ಬರುವುದರಿಂದ ಮನುಷ್ಯನಿಗೆ ಮೋಹವು ಸಹಜವೆಂಬ ಶಂಕೆಗೆ ಇದು ಉತ್ತರ. ಕರ್ಮವಶದಿಂದ ಇವು ಬರುತ್ತವೆ. ಇವೇನೂ ಶಾಶ್ವತವಲ್ಲ. ಸಹಿಸಿ

ಕೊಳ್ಳಬೇಕು. ಇಂದ್ರಿಯ ಮತ್ತು ವಿಷಯಗಳ ಸಂಯೋಗದಿಂದ ಇವು ಚಿತ್ತಕ್ಕೆ ಬರುತ್ತವೆ, ಆತ್ಮನಿಗಲ್ಲ.

ಮಾತ್ರಾ=ಇಂದ್ರಿಯ. ಸ್ಪರ್ಶ=ಶಬ್ದಾದಿ ವಿಷಯ. ಇವು ಅನಿತ್ಯಗಳಾದ್ದರಿಂದ ಸುಖದುಃಖಾದಿಗಳೂ ಅನಿತ್ಯಗಳು.

**ಯಂ ಹಿ ನ ವ್ಯಥಯಂತ್ಯೇತೇ ಪುರುಷಂ ಪುರುಷರ್ಷಭ ।**
**ಸಮದುಃಖಸುಖಂ ಧೀರಂ ಸೋऽಮೃತತ್ವಾಯ ಕಲ್ಪತೇ ॥ ೧೫**

ಏಕೆಂದರೆ, ಹೇ ನರಶ್ರೇಷ್ಠ, ಈ ಶೀತೋಷ್ಣಾದಿಗಳು ಯಾವ ಮನುಷ್ಯನನ್ನು ಅಲ್ಲಾಡಿಸುವುದಿಲ್ಲವೋ – ವ್ಯಥೆಪಡಿಸುವುದಿಲ್ಲವೋ, ಯಾವ ಧೀರನು ಸುಖದುಃಖಗಳನ್ನು ಸಮವಾಗಿ ಕಾಣಬಲ್ಲನೋ ಆತನು ಅಮೃತತ್ವವನ್ನು (ಮೋಕ್ಷವನ್ನು) ಪಡೆಯಲು ಸಮರ್ಥನಾಗುತ್ತಾನೆ.

**ವಿವರಣೆ :** ಸುಖದುಃಖಗಳನ್ನು ಸಮವಾಗಿ ಕಾಣುವುದೆಂದರೆ, ಆತ್ಮನಾದ ತನಗೆ ಅವುಗಳ ಸಂಬಂಧವಿಲ್ಲವೆಂದು ನಿಶ್ಚಯಿಸಿಕೊಳ್ಳುವುದೇ ಆಗಿದೆ.

**ನಾಸತೋ ವಿದ್ಯತೇ ಭಾವೋ ನಾಭಾವೋ ವಿದ್ಯತೇ ಸತಃ ।**
**ಉಭಯೋರಪಿ ದೃಷ್ಟೋऽಂತಸ್ತ್ವನಯೋಸ್ತತ್ತ್ವದರ್ಶಿಭಿಃ ॥ ೧೬**

ಅಸತಃ = (ತೋರಿಕೆಗೆ ಮಾತ್ರ ಕಾಣುವ) ಅಸದ್ವಸ್ತುವಿಗೆ, ಭಾವಃ = ನಿಜವಾದ ಅಸ್ತಿತ್ವವು ನ ವಿದ್ಯತೇ = ಇರುವುದಿಲ್ಲ. ಸತಃ = (ತೋರಿಕೆಗೆ ಕಾಣದಿರುವ) ಸದ್ವಸ್ತುವಿಗೆ, ಅಭಾವಃ = ವಿನಾಶವೂ, ನ ವಿದ್ಯತೇ = ಇರುವುದಿಲ್ಲ. ಉಭಯೋರಪಿ = ಈ ಸದ್ವಸ್ತು ಅಸದ್ವಸ್ತುಗಳೆರಡರ ಅಂತಃ = ಹೀಗೆಂಬ ನಿರ್ಣಯವು, ತತ್ತ್ವದೃಷ್ಟಿಭಿಃ = ತತ್ತ್ವಜ್ಞಾನಿಗಳಿಂದ, ದೃಷ್ಟಃ = ನೋಡಲ್ಪಟ್ಟಿದೆ.

**ವಿವರಣೆ :** ಹಗ್ಗವು ಹಾವೆಂದು ಭ್ರಮೆಯಿಂದ ತೋರುತ್ತದೆ. ಅದು ಅಸದ್ವಸ್ತು. ಪರಮಾರ್ಥವಾಗಿ ಹಾವು ಇಲ್ಲ. ದೂರದಲ್ಲಿದ್ದಾಗ ಆ ಹಾವು ಹುಟ್ಟಿ, ಹತ್ತಿರ ಹೋದಾಗ ನಾಶವಾಗಿರುತ್ತದೆ. ಉತ್ಪತ್ತಿ, ವೃದ್ಧಿ, ಕ್ಷಯ – ಮೊದಲಾದವು ವಿಕಾರಗಳು. ಈ ವಿಕಾರವಾಗತಕ್ಕದ್ದೆಲ್ಲವೂ ವಿನಾಶಿಯೆಂದು ತಿಳಿಯಬೇಕು. ಶೀತೋಷ್ಣಗಳು, ದೇಹ – ಮುಂತಾದ ನಾಮರೂಪಾತ್ಮಕವಾದ ಜಗತ್ತು ವಿಕಾರಿಯಾದ್ದರಿಂದ ವಿನಾಶಿಯಾದದ್ದು. ಆತ್ಮನು ಸಾಮಾನ್ಯ ಜನರಿಗೆ ಗೋಚರನಲ್ಲ. ಆದರೂ ಅವನು ಇರುವುದರಿಂದ ಆತ್ಮನು ಸದ್ವಸ್ತು. ಆತನಿಗೆ ಯಾವ ವಿಕಾರವೂ ಇಲ್ಲ. ಆದ್ದರಿಂದ ಆತ್ಮನಿಗೆ ವಿನಾಶವಿಲ್ಲ.

ತತ್ ಎಂದರೆ ಬ್ರಹ್ಮ. 'ಓಂ ತತ್ ಸತ್.' ತಸ್ಯ ಭಾವಃ = ತತ್ತ್ವಮ್. ಬ್ರಹ್ಮದ ಯಥಾರ್ಥಸ್ವರೂಪವೆಂದರ್ಥ. ಸತ್, ಆತ್ಮ ಬ್ರಹ್ಮ – ಒಂದೇ. ತತ್ತ್ವದರ್ಶಿಗಳು = ಬ್ರಹ್ಮದ ನಿಜಸ್ವರೂಪವನ್ನರಿತವರು.

**ಅವಿನಾಶಿ ತು ತದ್ವಿದ್ಧಿ ಯೇನ ಸರ್ವಮಿದಂ ತತಮ್ ।**
**ವಿನಾಶಮವ್ಯಯಸ್ಯಾಸ್ಯ ನ ಕಶ್ಚಿತ್ಕರ್ತುಮರ್ಹತಿ ॥** ೧೭

(ಸತ್ ಯಾವುದೆಂದರೆ)

ಈ ಜಗತ್ತೆಲ್ಲವೂ ಯಾವುದರಿಂದ ವ್ಯಾಪ್ತವಾಗಿದೆಯೋ ಅದೇ ವಿನಾಶರಹಿತವಾದ ಸದ್ವಸ್ತುವೆಂದು ತಿಳಿ. ಅವ್ಯಯವಾದ ಈ ಸದ್ವಸ್ತುವಿಗೆ ನಾಶವನ್ನುಂಟುಮಾಡಲು ಯಾರೂ ಸಮರ್ಥರಲ್ಲ.

**ವಿವರಣೆ :** ವಿನಾಶ = ಅದರ್ಶನ, ಅಭಾವ. ಅದು ಇಲ್ಲದ್ದು ಅವಿನಾಶಿ. ನವ್ಯೇತಿ ಇತ್ಯವ್ಯಯಂ = ವಿಕಾರವಿಲ್ಲದ್ದಕ್ಕೆ ಅವ್ಯಯವೆಂದು ಹೆಸರು. ಅವಯವವಿಲ್ಲದ್ದರಿಂದ ವ್ಯಯವಿಲ್ಲದ್ದು ಬ್ರಹ್ಮ. ಅದೇ ಆತ್ಮ ಸತ್, ವಿಷ್ಣು, ನಾರಾಯಣ.

**ಅಂತವಂತ ಇಮೇ ದೇಹಾ ನಿತ್ಯಸ್ಯೋಕ್ತಾಃ ಶರೀರಿಣಃ ।**
**ಅನಾಶಿನೋಽಪ್ರಮೇಯಸ್ಯ ತಸ್ಮಾದ್ಯುಧ್ಯಸ್ವ ಭಾರತ ॥** ೧೮

(ಅಸತ್ ಯಾವುದೆಂದರೆ)

ನಿತ್ಯನೂ ಅವಿನಾಶಿಯೂ ಅಪ್ರಮೇಯನೂ ಆದ ಈ ಶರೀರಧಾರಿಯಾದ ಆತ್ಮನ ಈ ದೇಹಗಳೆಲ್ಲಕ್ಕೂ ನಾಶವಿದೆಯೆಂದು (ವಿವೇಕಿಗಳು) ಹೇಳಿದ್ದಾರೆ. ಆದ್ದರಿಂದ, ಅರ್ಜುನ, ಯುದ್ಧಮಾಡು (ಯುದ್ಧವನ್ನು ನಿಲ್ಲಿಸಬೇಡ).

**ವಿವರಣೆ :** ಈ ಶ್ಲೋಕದಲ್ಲಿ ನಿತ್ಯ, ಅನಾಶಿ – ಎಂದು ಆತ್ಮನಿಗೆ ಎರಡು ವಿಶೇಷಣಗಳಿವೆ. ಇದು ಪುನರುಕ್ತವಾಯಿತೆಂದು ತಿಳಿಯಬಾರದು. ಘಟಪಟಾದಿಗಳಂತೆ ಅನಿತ್ಯವಲ್ಲ ಎಂದು ತಿಳಿಸುವುದಕ್ಕಾಗಿ ನಿತ್ಯ ಎಂಬ ವಿಶೇಷಣ ಬಂದಿದೆ. ಪ್ರಳಯದಲ್ಲಿ ನಾಶವಾಗುವ ಆಕಾಶಾದಿಗಳನ್ನೂ ನಿತ್ಯವೆನ್ನುತ್ತಾರೆ. ಆತ್ಮನು ಆಕಾಶದಂತಲ್ಲ. ಎಷ್ಟು ಪ್ರಳಯಗಳಾದರೂ ಅವನಿಗೆ ನಾಶವೇ ಇಲ್ಲ ಎಂದು ತಿಳಿಸುವುದಕ್ಕಾಗಿ ಅನಾಶಿಯೆಂದು ವಿಶೇಷಣ.

ಅಪ್ರಮೇಯ = ಕಣ್ಣು ಮುಂತಾದ ಇಂದ್ರಿಯಪ್ರಮಾಣಗಳಿಗೆ ಅಗೋಚರನೆಂದು ತಾತ್ಪರ್ಯ.

**ಯ ಏನಂ ವೇತ್ತಿ ಹಂತಾರಂ ಯಶ್ಚೈನಂ ಮನ್ಯತೇ ಹತಮ್ ।**
**ಉಭೌ ತೌ ನ ವಿಜಾನೀತೋ ನಾಯಂ ಹಂತಿ ನ ಹನ್ಯತೇ ॥ ೧೯**

ದೇಹಿಯಾದ ಆತ್ಮನು ಕೊಲ್ಲತಕ್ಕವನೆಂದು ಯಾವನು ತಿಳಿಯುತ್ತಾನೋ, ಈ ಆತ್ಮನು ಇನ್ನೊಬ್ಬನಿಂದ ಹತನಾದನೆಂದು ಯಾವನು ತಿಳಿಯುತ್ತಾನೋ ಅವರಿಬ್ಬರೂ ಸತ್ಯವನ್ನರಿಯದವರು. ಆತ್ಮನು ಕೊಲ್ಲುವುದೂ ಇಲ್ಲ, ಕೊಲ್ಲಿಸಿ ಕೊಳ್ಳುವುದೂ ಇಲ್ಲ.

**ವಿವರಣೆ :** ಆತ್ಮನಲ್ಲಿ ಯಾವ ವಿಕಾರವೂ ಇಲ್ಲವಾದ್ದರಿಂದ ಅವನು ಕರ್ತೃವೂ ಆಗಲಾರ, ಕರ್ಮವೂ ಆಗಲಾರ – ಎಂಬುದು ವಿವಕ್ಷಿತ. ಕರ್ತೃವಾದರೆ ಅವನಲ್ಲಿ ಕ್ರಿಯೆ ಹುಟ್ಟಬೇಕು. ಕರ್ಮವಾದರೆ ಕ್ರಿಯಾಫಲವು ಹುಟ್ಟಬೇಕು. ಹೊಸದಾಗಿ ಯಾವುದು ಹುಟ್ಟಿದರೂ ಅವನು ವಿಕಾರಿಯೆಂದೂ ಸಾವಯುವನೆಂದೂ ಹೇಳಬೇಕಾಗುತ್ತದೆ. ಆ ಸಮಯದಲ್ಲಿ ಆತ್ಮನು ನಿತ್ಯ ನಾಗುವುದಿಲ್ಲ.

**ನ ಜಾಯತೇ ಮ್ರಿಯತೇ ವಾ ಕದಾಚಿತ್**
**ನಾಯಂ ಭೂತ್ವಾಽಭವಿತಾ ವಾ ನ ಭೂಯಃ ।**
**ಅಜೋ ನಿತ್ಯಃ ಶಾಶ್ವತೋಽಯಂ ಪುರಾಣೋ**
**ನ ಹನ್ಯತೇ ಹನ್ಯಮಾನೇ ಶರೀರೇ ॥ ೨೦**

ಈ ಆತ್ಮನು ಎಂದಿಗೂ ಹುಟ್ಟುವುದೂ ಇಲ್ಲ; ಸಾಯುವುದೂ ಇಲ್ಲ. ಏಕೆಂದರೆ, ಇವನು ಮೊದಲು ಇದ್ದು ಆಮೇಲೆ ಇಲ್ಲದವನಾಗುವುದಿಲ್ಲ ಅಥವಾ ಮೊದಲು ಇಲ್ಲದವನಾಗಿದ್ದು ಈಗ ಇರತಕ್ಕವನಾಗುವುದಿಲ್ಲ. (ಆತ್ಮನಿಗೆ ಸಾವು ಹುಟ್ಟುಗಳಿಲ್ಲವೆಂದು ತಾತ್ಪರ್ಯ). ಈತನು ಜನ್ಮವಿಲ್ಲದ್ದ ರಿಂದ ಅಜ. ಸಾವು ಇಲ್ಲದ್ದರಿಂದ ನಿತ್ಯ. ಅಪಕ್ಷಯವಿಲ್ಲದ್ದರಿಂದ ಶಾಶ್ವತ. ಪೂರ್ವದಲ್ಲಿಯೂ ನಿತ್ಯನೂತನನಾಗಿಯೇ ಇದ್ದ ಪುರಾಣನಿವನು. ದೇಹ ವನ್ನು ಹಿಂಸಿಸಿ ಎಳದಾಡಿದರೂ ಆತ್ಮನಲ್ಲಿ ಯಾವ ಪರಿಣಾಮವೂ ಆಗುವುದಿಲ್ಲ.

**ವಿವರಣೆ :** ಜಾಯತೇ, ಅಸ್ತಿ, ವರ್ಧತೇ, ಪರಿಣಮತೇ, ಅಪಕ್ಷೀಯತೇ, ನಶ್ಯತಿ – ಎಂಬಿವು ಷಡ್ಭಾವವಿಕಾರಗಳೆಂದು ಶಾಸ್ತ್ರದಲ್ಲಿ ಗಣಿಸಿದ್ದಾರೆ. ಆತ್ಮನ ಹೊರತಾಗಿ ಉಳಿದ ಎಲ್ಲ ಭಾವಪದಾರ್ಥಗಳಿಗೂ ಈ ವಿಕಾರಗಳುಂಟು. ದೇಹವು ಹುಟ್ಟುತ್ತದೆ, ಈಗ ಈ ರೀತಿ ಇದೆ ಎನಿಸಿಕೊಳ್ಳುತ್ತದೆ, ಬೆಳೆಯುತ್ತದೆ,

ಪರಿಣಾಮ (ರೂಪಾಂತರ) ಹೊಂದುತ್ತದೆ, ಕ್ಷಯಿಸುತ್ತದೆ, ನಾಶವಾಗುತ್ತದೆ. ಆತ್ಮನಲ್ಲಿ ಈ ಆರು ವಿಕಾರಗಳೂ ಇಲ್ಲವೆಂದು ತೋರಿಸುವುದಕ್ಕಾಗಿಯೂ ಪುನರುಕ್ತಿಯನ್ನು ಪರಿಹರಿಸುವುದಕ್ಕಾಗಿಯೂ ಈ ಶ್ಲೋಕದಲ್ಲಿ ಶಬ್ದಗಳನ್ನು ಸ್ವಲ್ಪ ಜಗ್ಗಾಡಿ ಅರ್ಥ ಮಾಡಲಾಗಿದೆ. ಈ ೧೯, ೨೦ನೇ ಶ್ಲೋಕಗಳು ಕಠೋಪನಿಷತ್ತಿನಲ್ಲಿ ಇವೆ.

**ವೇದಾವಿನಾಶಿನಂ ನಿತ್ಯಂ ಯ ಏನಮಜಮವ್ಯಯಮ್ ।**
**ಕಥಂ ಸ ಪುರುಷಃ ಪಾರ್ಥ ಕಂ ಘಾತಯತಿ ಹಂತಿ ಕಮ್ ॥ ೨೧**

ಈ ಪ್ರಕಾರವಾಗಿ ಆತ್ಮನು ಮರಣವಿಲ್ಲದವನೂ ಪರಿಣಾಮವಿಲ್ಲದವನೂ ಅಜನೂ ಅಪಕ್ಷಯವಿಲ್ಲದವನೂ ಆಗಿದ್ದಾನೆಂದು ತಿಳಿದಿರುವ ಜ್ಞಾನಿಯಾದ ಪುರುಷನು, ಅರ್ಜುನ, ಯಾವನನ್ನು ಕೊಲ್ಲಿಸಿಯಾನು ? ಯಾವನನ್ನು ಕೊಂದಾನು ?

**ವಾಸಾಂಸಿ ಜೀರ್ಣಾನಿ ಯಥಾ ವಿಹಾಯ**
**ನವಾನಿ ಗೃಹ್ಣಾತಿ ನರೋಽಪರಾಣಿ ।**
**ತಥಾ ಶರೀರಾಣಿ ವಿಹಾಯ ಜೀರ್ಣಾನಿ**
**ಅನ್ಯಾನಿ ಸಂಯಾತಿ ನವಾನಿ ದೇಹೀ ॥ ೨೨**

ಹಳೆಯದಾದ ಬಟ್ಟೆಗಳನ್ನು ತೆಗೆದೊಗೆದು ಮನುಷ್ಯನು ಹೊಸ ಬಟ್ಟೆಗಳನ್ನು ಧರಿಸುವಂತೆ, ದೇಹಿಯು (ದೇಹಸ್ವಾಮಿಯಾದ ಆತ್ಮನು) ಜೀರ್ಣವಾದ ಶರೀರಗಳನ್ನು ಬಿಟ್ಟು ಬೇರೆ ನೂತನ ದೇಹಗಳನ್ನು ಹೊಂದುತ್ತಾನೆ.

ವಿವರಣೆ : ಬಟ್ಟೆಯನ್ನು ಬದಲಾಯಿಸಿದಂತೆ ಹಳೆಯ ದೇಹವನ್ನು ಬಿಟ್ಟು ಹೊಸ ದೇಹವನ್ನು ಸ್ವೀಕರಿಸಿದಾಗ ಆತ್ಮನಲ್ಲಿ ಯಾವ ವಿಕಾರವೂ ಆಗುವುದಿಲ್ಲ.

**ನೈನಂ ಛಿಂದಂತಿ ಶಸ್ತ್ರಾಣಿ ನೈನಂ ದಹತಿ ಪಾವಕಃ ।**
**ನ ಚೈನಂ ಕ್ಲೇದಯಂತ್ಯಾಪೋ ನ ಶೋಷಯತಿ ಮಾರುತಃ ॥ ೨೩**

ಈ ಆತ್ಮನನ್ನು ಆಯುಧಗಳು ಕತ್ತರಿಸಲಾರವು. ಬೆಂಕಿಯು ಸುಡಲಾರದು. ನೀರು ಒದ್ದೆಮಾಡಲಾರದು. ಗಾಳಿಯು ಒಣಗಿಸಲೂ ಆರದು.

**ಅಚ್ಛೇದ್ಯೋಽಯಮದಾಹ್ಯೋಽಯಮಕ್ಲೇದ್ಯೋಽಶೋಷ್ಯ ಏವ ಚ ।**
**ನಿತ್ಯಃ ಸರ್ವಗತಃ ಸ್ಥಾಣುರಚಲೋಽಯಂ ಸನಾತನಃ ॥ ೨೪**

ಆದ್ದರಿಂದ ಈ ಆತ್ಮನು ಅಚ್ಛೇದ್ಯನೂ ಅದಾಹ್ಯನೂ ಆಗಿದ್ದಾನೆ. ಅವನನ್ನು

ಒದ್ದೆಮಾಡಲೂ ಸಾಧ್ಯವಿಲ್ಲ. ಒಣಗಿಸಲೂ ಸಾಧ್ಯವಿಲ್ಲ. ಆದ್ದರಿಂದ ಅವನು ನಿತ್ಯನೂ ಸರ್ವವ್ಯಾಪಿಯೂ ಆಗಿದ್ದಾನೆ. ಕಂಭದಂತೆ ಸ್ಥಿರನೂ ಅಚಲನೂ ಚಿರಂತನನೂ ಆಗಿದ್ದಾನೆ.

**ವಿವರಣೆ :** ಸನಾತನ = ಸದಾ ಇರತಕ್ಕವನು. ಯಾವ ಕಾರಣದಿಂದಲೂ ಹುಟ್ಟಿದವನಲ್ಲ. ಇಲ್ಲಿ ಮತ್ತೆ ಮತ್ತೆ ಒಂದೇ ವಿಷಯವನ್ನು ತಿರುಗಿಸಿ ಹೇಳಿದ್ದರಿಂದ ಪುನರುಕ್ತಿದೋಷವೆಂದು ಶಂಕಿಸಬಾರದು. ಆತ್ಮತತ್ತ್ವವು ದುರ್ಬೋಧವಾದದ್ದು. ಇದನ್ನು ಸರಿಯಾಗಿ ಅರಿತುಕೊಂಡು ಸಂಸಾರಿಗಳು ಹೇಗಾದರೂ ಬಂಧಮುಕ್ತರಾಗಿ ಕೃತಕೃತ್ಯರಾಗಲಿ – ಎಂಬ ಕಾರುಣ್ಯದಿಂದ ಭಗವಂತನು ಹೀಗೆ ಒತ್ತಿಹೇಳಿದ್ದಾನೆ.

**ಅವ್ಯಕ್ತೋಽಯಮಚಿಂತ್ಯೋಽಯಮವಿಕಾರ್ಯೋಽಯಮುಚ್ಯತೇ ।**
**ತಸ್ಮಾದೇವಂ ವಿದಿತ್ವೈನಂ ನಾನುಶೋಚಿತುಮರ್ಹಸಿ ॥ ೨೫**

ಈ ಆತ್ಮನು ಅವ್ಯಕ್ತನೆಂದೂ ಆದ್ದರಿಂದಲೇ ಅಚಿಂತ್ಯನೆಂದೂ ಶಸ್ತ್ರಗಳಿಂದಲೂ ವಿಕಾರಗೊಳಿಸಲು ಅಶಕ್ಯನೆಂದೂ ಜ್ಞಾನಿಗಳು ಹೇಳಿದ್ದಾರೆ. ಆದ್ದರಿಂದ ಆತ್ಮನು ಈ ಪ್ರಕಾರದವನೆಂದು ತಿಳಿದುಕೊಂಡಮೇಲೆ ಈ ಜನರಿಗಾಗಿ ಶೋಕಿಸುವುದು ತರವಲ್ಲ.

**ವಿವರಣೆ :** ಅವ್ಯಕ್ತ=ಇಂದ್ರಿಯಗಳಿಗೆ ಅಗೋಚರವಾದದ್ದು, ಆದ್ದರಿಂದಲೇ ಅಚಿಂತ್ಯ. ಅವಯವಶೂನ್ಯವಾದ್ದರಿಂದ ಆತ್ಮದಲ್ಲಿ ಯಾವ ವಿಕಾರವನ್ನೂ ಉಂಟುಮಾಡಲಾಗುವುದಿಲ್ಲ. ಅಖಂಡವಾದ ಅಭೇದ್ಯವಸ್ತು ಆತ್ಮ ಇದೆಲ್ಲವೂ ಉಪನಿಷತ್ತಿನಲ್ಲಿ ಹೇಳಿದ ಸಿದ್ಧಾಂತಪಕ್ಷ.

**ಅಥ ಚೈನಂ ನಿತ್ಯಜಾತಂ ನಿತ್ಯಂ ವಾ ಮನ್ಯಸೇ ಮೃತಮ್ ।**
**ತಥಾಪಿ ತ್ವಂ ಮಹಾಬಾಹೋ ನೈವಂ ಶೋಚಿತುಮರ್ಹಸಿ ॥ ೨೬**

ಹೇ ಮಹಾಬಾಹು – ಅರ್ಜುನ, ಒಂದು ವೇಳೆ ಈ ಆತ್ಮನು ಮತ್ತೆ ಮತ್ತೆ ಹುಟ್ಟುತ್ತಾನೆ, ಮತ್ತೆ ಮತ್ತೆ ಸಾಯುತ್ತಾನೆ – ಎಂದು ನೀನು ತಿಳಿಯುವುದಾದರೂ, ಆತನಿಗಾಗಿ ನೀನು ಶೋಕಿಸುವುದು ತರವಲ್ಲ.

**ವಿವರಣೆ :** ಇದು ಸಿದ್ಧಾಂತಪಕ್ಷವಲ್ಲ, ಲೋಕಾಭಿರಾಮವಾಗಿ ಹೇಳುವ ಮಾತಿದು. ಆತ್ಮನು ನಿತ್ಯನಾದರೂ ಹೊಸ ದೇಹದ ಸಂಬಂಧವನ್ನು ಜನ್ಮವೆಂದೂ ಇರುವ ದೇಹದ ವಿಯೋಗವನ್ನು ಮರಣವೆಂದೂ ಹೇಳುತ್ತಾರೆ. ತಂದೆ, ತಾಯಿ, ಮಗ – ಮುಂತಾದ ಲೋಕವ್ಯವಹಾರವು ಕೇವಲ ಆತ್ಮನನ್ನು

ಕುರಿತೂ ಅಲ್ಲ. ಕೇವಲ ದೇಹವನ್ನು ಕುರಿತೂ ಅಲ್ಲ. ಇವೆರಡು ಒಟ್ಟಿಗೆ ಸೇರಿರುವಾಗ ತಂದೆ, ತಾಯಿ – ಎಂದು ವ್ಯವಹರಿಸುತ್ತೇವೆ. ಒಬ್ಬನನ್ನು ಕೊಂದಾಗ ಶರೀರ–ಆತ್ಮಗಳ ವಿಯೋಗವಾಗುತ್ತದೆ. ಅದೇ ಸಾವು, ಅದೇ ದುಃಖಕ್ಕೆ ಕಾರಣ ಎಂಬ ಅಭಿಪ್ರಾಯದಿಂದ ಈ ಶ್ಲೋಕ ಬಂದಿದೆ.

**ಜಾತಸ್ಯ ಹಿ ಧ್ರುವೋ ಮೃತ್ಯುಃ ಧ್ರುವಂ ಜನ್ಮ ಮೃತಸ್ಯ ಚ ।**
**ತಸ್ಮಾದಪರಿಹಾರ್ಯೇಽರ್ಥೇ ನ ತ್ವಂ ಶೋಚಿತುಮರ್ಹಸಿ ॥** ೨೭

ಏಕೆಂದರೆ, ಹುಟ್ಟಿದವನಿಗೆ ಮರಣವು ತಪ್ಪಿದ್ದಲ್ಲ. ಸತ್ತವನಿಗೆ ಮತ್ತೆ ಇನ್ನೊಂದು ಜನ್ಮವು ತಪ್ಪಿದ್ದಲ್ಲ. ಇವುಗಳಿಗೆ ಪರಿಹಾರವೇ ಇಲ್ಲ. ಇಂತಹ ವಿಷಯದಲ್ಲಿ ನೀನು ಶೋಕಿಸಬಾರದು.

**ವಿವರಣೆ :** ಹಸಿವೆ, ನಿದ್ರೆ, ರೋಗ, ಮುಪ್ಪು – ಮುಂತಾದುವು ಅನಿವಾರ್ಯವಾಗಿ ಬಂದೇ ಬರತಕ್ಕವು. ಅವನ್ನು ಹೇಗೆ ಸಹಿಸಿಕೊಳ್ಳುತ್ತೇವೋ ಹಾಗೆಯೇ ಸಾವನ್ನೂ ಸಹಿಸಿಕೊಳ್ಳಬೇಕು – ಎಂದು ಅಭಿಪ್ರಾಯ.

**ಅವ್ಯಕ್ತಾದೀನಿ ಭೂತಾನಿ ವ್ಯಕ್ತಮಧ್ಯಾನಿ ಭಾರತ ।**
**ಅವ್ಯಕ್ತನಿಧನಾನ್ಯೇವ ತತ್ರ ಕಾ ಪರಿದೇವನಾ ॥** ೨೮

ಅರ್ಜುನ, (ಪುತ್ರಮಿತ್ರಾದಿರೂಪದಲ್ಲಿರುವ) ಈ ಪ್ರಾಣಿಗಳೆಲ್ಲವೂ ಅವ್ಯಕ್ತವಾದ ಯಾವುದೋ ಕಾಣದೆಡೆಯಿಂದ ಬಂದು, ಮಧ್ಯದಲ್ಲಿ (ಸ್ವಲ್ಪ ಕಾಲ) ಕಾಣಿಸಿಕೊಂಡಿದ್ದು, ಮರಣದಲ್ಲಿ ಅವ್ಯಕ್ತವಾದ ಕಾಣದೆಡೆಗೇ ತೆರಳಿಹೋಗತಕ್ಕವರು. ಇದಕ್ಕಾಗಿ ಶೋಕವೇತರದು ?

**ವಿವರಣೆ :** ನೆಂಟರಿಷ್ಟರೆಲ್ಲರೂ ಎಲ್ಲಿಂದಲೋ ಬಂದು ಎಲ್ಲಿಗೋ ಹೋಗಿಬಿಡತಕ್ಕವರು. ಅವರಿಗಾಗಿ ಇಷ್ಟು ದುಃಖ ಬೇಕಾಗಿಲ್ಲ. ಅವರೇನೂ ಶಾಶ್ವತರಲ್ಲ – ಎಂದು ಲೋಕದೃಷ್ಟಿಯಿಂದ ಹೇಳಿದ ಮಾತಿದು. 'ಅದರ್ಶನಾದಾಪತಿತಾಃ ಪುನಶ್ಚಾದರ್ಶನಂ ಗತಾಃ । ನ ತೇ ತವ ನ ತೇಷಾಂ ತ್ವಂ ತತ್ರ ಕಾ ಪರಿದೇವನಾ' ಎಂದು ಭಾರತದ ಸ್ತ್ರೀಪರ್ವದಲ್ಲಿ (೨ – ೬) ಇದೇ ತರದ ಶ್ಲೋಕ ಬಂದಿದೆ. ಅದಕ್ಕೆ ಅನುಗುಣವಾಗಿ ಅದರ್ಶನವೆಂದು ಅವ್ಯಕ್ತಶಬ್ದಕ್ಕೆ ಇಲ್ಲಿ ಅರ್ಥವನ್ನು ಬರೆದಿದೆ. ಅವ್ಯಕ್ತಶಬ್ದಕ್ಕೆ ಪ್ರಕೃತಿ, ಮಾಯೆ, ಬ್ರಹ್ಮ – ಎಂಬ ಅರ್ಥಗಳನ್ನೂ ಹೇಳಬಹುದು. ಅನಿತ್ಯವಾದ ಈ ದೇಹಕ್ಕಾಗಿ ಅಳುವುದೇಕೆ ? ಎಂಬುದು ಮುಖ್ಯ ತಾತ್ಪರ್ಯ.

**ಆಶ್ಚರ್ಯವತ್ ಪಶ್ಯತಿ ಕಶ್ಚಿದೇನ–**
**ಮಾಶ್ಚರ್ಯವದ್ವದತಿ ತಥೈವ ಚಾನ್ಯಃ ।**
**ಆಶ್ಚರ್ಯವಚ್ಚೈನಮನ್ಯಃ ಶೃಣೋತಿ**
**ಶ್ರುತ್ವಾಪ್ಯೇನಂ ವೇದ ನ ಚೈವ ಕಶ್ಚಿತ್ ॥ ೨೯**

ಇದೊಂದು (ಅದ್ಭುತವಾದ) ಆಶ್ಚರ್ಯಕರ ವಸ್ತುವೆಂಬಂತೆ ಆತ್ಮನನ್ನು ಒಬ್ಬನು ಕಾಣುವನು. ಹಾಗೆಯೇ ಇದೊಂದು ಆಶ್ಚರ್ಯವೆಂದು ಇನ್ನೊಬ್ಬನು ಬಣ್ಣಿಸುವನು. ಮತ್ತೊಬ್ಬನು ಆಶ್ಚರ್ಯವನ್ನು ಕೇಳುವಂತೆ ಆತ್ಮನ ವಿಷಯುವನ್ನು ಕೇಳುವನು. ಆತ್ಮನ ವಿಷಯುವನ್ನು ಕೇಳಿದರೂ, ಏನು ಮಾಡಿದರೂ, ಈತನನ್ನು ಯಾವನೂ ತಿಳಿದಿಲ್ಲ.

**ವಿವರಣೆ :** ಈ ಶ್ಲೋಕಕ್ಕೆ ಇನ್ನೊಂದು ರೀತಿಯಲ್ಲಿಯೂ ಅರ್ಥವನ್ನು ಹೇಳಬಹುದು. ಮೇಲ್ಕಂಡ ಅರ್ಥದಲ್ಲಿ ಆತ್ಮನು ಆಶ್ಚರ್ಯದ ವಸ್ತುವಾಗಿದ್ದಾನೆ. ಆತ್ಮನನ್ನು ಕಾಣುವ, ಆತನ ವಿಷಯುವಾಗಿ ಹೇಳುವ, ಕೇಳುವ ಮನುಷ್ಯನೇ ಆಶ್ಚರ್ಯದ ವ್ಯಕ್ತಿಯೆಂದು ಇನ್ನೊಂದು ರೀತಿಯ ಅರ್ಥ. ಆತ್ಮವಿಚಾರವು ಅತ್ಯದ್ಭುತವಾದದ್ದೆಂದೂ ಆತ್ಮನನ್ನರಿತವರು ವಿರಳ ರೆಂದೂ ಅರ್ಜುನನೊಬ್ಬನನ್ನೇ ನಿಂದಿಸಬೇಕಾಗಿಲ್ಲವೆಂದೂ ಅಭಿಪ್ರಾಯ. ಇದೇ ವಿಷಯುವು ಕಠೋಪನಿಷತ್ತಿನಲ್ಲಿದೆ (ಕಠ. ೨ – ೭).

**ದೇಹೀ ನಿತ್ಯಮವಧ್ಯೋಽಯಂ ದೇಹೇ ಸರ್ವಸ್ಯ ಭಾರತ ।**
**ತಸ್ಮಾತ್ ಸರ್ವಾಣಿ ಭೂತಾನಿ ನ ತ್ವಂ ಶೋಚಿತುಮರ್ಹಸಿ ॥ ೩೦**

ಎಲ್ಲರ ದೇಹದಲ್ಲಿರುವ ಈ ದೇಹಿಯು (ಆತ್ಮನು) ಸರ್ವಥಾ ಅವಧ್ಯನಾದವನು. (ಭೀಷ್ಮನೇ ಮೊದಲಾದ) ಸಕಲ ಭೂತಗಳ ವಿಷಯ ದಲ್ಲಿಯೂ ಸಹ ನೀನು ಶೋಕಿಸುವುದು ಯುಕ್ತವಲ್ಲ.

**ಸ್ವಧರ್ಮಮಪಿ ಚಾವೇಕ್ಷ್ಯ ನ ವಿಕಂಪಿತುಮರ್ಹಸಿ ।**
**ಧರ್ಮ್ಯಾದ್ಧಿ ಯುದ್ಧಾತ್ ಶ್ರೇಯೋಽನ್ಯತ್ ಕ್ಷತ್ರಿಯಸ್ಯ ನ ವಿದ್ಯತೇ ॥**

ನಿನ್ನ ಸ್ವಧರ್ಮವನ್ನು ಚೆನ್ನಾಗಿ ಲಕ್ಷಿಸಿ ನೋಡಿದರೂ ನೀನು ಎದೆಗುಂದುವುದು ಸರಿಯಲ್ಲ. ಧರ್ಮೋಚಿತವಾದ ಯುದ್ಧಕ್ಕಿಂತ ಶ್ರೇಯಸ್ಕರ ವಾದದ್ದು ಕ್ಷತ್ರಿಯನಿಗೆ ಇನ್ನೊಂದಿಲ್ಲ.

**ಯದೃಚ್ಛಯಾ ಚೋಪಪನ್ನಂ ಸ್ವರ್ಗದ್ವಾರಮಪಾವೃತಮ್ ।**
**ಸುಖಿನಃ ಕ್ಷತ್ರಿಯಾಃ ಪಾರ್ಥ ಲಭಂತೇ ಯುದ್ಧಮೀದೃಶಮ್ ॥ ೩೨**

ಸ್ವರ್ಗದ ಬಾಗಿಲನ್ನು ತೆಗೆಸಿರುವ ಯುದ್ಧವು ತಾನಾಗಿ ಒದಗಿಬಂದಿದೆ. ಅರ್ಜುನ, ಇಂತಹ ಯುದ್ಧವನ್ನು ಪಡೆಯುವ ಕ್ಷತ್ರಿಯರು ಧನ್ಯರು!

**ಅಥ ಚೇತ್ ತ್ವಮಿಮಂ ಧರ್ಮ್ಯಂ ಸಂಗ್ರಾಮಂ ನ ಕರಿಷ್ಯಸಿ ।**
**ತತಃ ಸ್ವಧರ್ಮಂ ಕೀರ್ತಿಂ ಚ ಹಿತ್ವಾ ಪಾಪಮವಾಪ್ಸ್ಯಸಿ ॥ ೩೩**

ಹೀಗಿರುವಾಗ, ಧರ್ಮೋಚಿತವಾದ ಈ ಸಂಗ್ರಾಮವನ್ನು ನೀನು ಮಾಡದೇ ಹೋದರೆ ಸ್ವಧರ್ಮವನ್ನೂ ತ್ಯಜಿಸಿ, ಕೀರ್ತಿಯನ್ನೂ ಕಳೆದು ಕೊಳ್ಳುವುದಲ್ಲದೆ ಪಾಪವೂ ನಿನಗೆ ಗಂಟುಬೀಳುತ್ತದೆ.

**ವಿವರಣೆ :** ಪರಮೇಶ್ವರ, ದೇವೇಂದ್ರ – ಮೊದಲಾದವರನ್ನು ದರ್ಶನ ಮಾಡಿದ್ದರಿಂದ ಬಂದದ್ದು ಅರ್ಜುನನ ಕೀರ್ತಿ. ಇಂದ್ರಕೀಲದಲ್ಲಿ ಪರಮೇಶ್ವರ ನನ್ನೂ ಖಾಂಡವವನ ದಾಹದಲ್ಲಿ ದೇವೇಂದ್ರನನ್ನೂ ಅರ್ಜುನನು ಸಂದರ್ಶಿ ಸಿದ್ದನು. ಅವನು ಮಹಾಪರಾಕ್ರಮಿಯೆಂಬ ಕೀರ್ತಿಯೂ ಇದೆ.

**ಅಕೀರ್ತಿಂ ಚಾಪಿ ಭೂತಾನಿ ಕಥಯಿಷ್ಯಂತಿ ತೇಽವ್ಯಯಾಮ್ ।**
**ಸಂಭಾವಿತಸ್ಯ ಚಾಕೀರ್ತಿರ್ಮರಣಾದತಿರಿಚ್ಯತೇ ॥ ೩೪**

ಅಲ್ಲದೆ ಸಕಲಪ್ರಾಣಿಗಳೂ ನಿನ್ನ ಅಪಕೀರ್ತಿಯ ಕಥೆಯನ್ನು ಮುಂದೆ ನಿರಂತರವಾಗಿ ಹೇಳುತ್ತಲೇ ಇರುವರು. ಸಂಭಾವಿತನೆಂದು ಗೌರವಾನ್ವಿತ ನಾದವನಿಗೆ ಅಪಕೀರ್ತಿಯೆನ್ನುವುದು ಸಾವಿಗಿಂತ ಹೆಚ್ಚಿನದು.

**ಭಯಾದ್ರಣಾದುಪರತಂ ಮನ್ಯಂತೇ ತ್ವಾಂ ಮಹಾರಥಾಃ ।**
**ಯೇಷಾಂ ಚ ತ್ವಂ ಬಹುಮತೋ ಭೂತ್ವಾ ಯಾಸ್ಯಸಿ ಲಾಘವಮ್ ॥**

ನೀನು ಕರ್ಣಾದಿಗಳಿಗೆ ಹೆದರಿಯೇ ರಣರಂಗದಿಂದ ಪ್ರೈದೆಗೆದೆಯೆಂದು ದುರ್ಯೋಧನಾದಿ ಮಹಾರಥರು ಭಾವಿಸುತ್ತಾರೆ. ಶೌರ್ಯಾದಿ ಗುಣ ಯುಕ್ತನೆಂದು ಸಂಭಾವಿತನಾದ ನೀನು, ಈಗ ಅವರೆದುರಿಗೆ ಹಗುರವಾಗಿ ಬಿಡುತ್ತೀಯೆ.

**ಅವಾಚ್ಯವಾದಾಂಶ್ಚ ಬಹೂನ್ ವದಿಷ್ಯಂತಿ ತವಾಹಿತಾಃ ।**
**ನಿಂದಂತಸ್ತವ ಸಾಮರ್ಥ್ಯಂ ತತೋ ದುಃಖತರಂ ನು ಕಿಮ್ ॥ ೩೬**

ನಿನ್ನ ಶತ್ರುಗಳು ನಿನ್ನ ಸಾಮರ್ಥ್ಯವನ್ನು ಹಂಗಿಸುತ್ತ ಆಡಬಾರದ ಅನೇಕ ಕೊಳೆಮಾತುಗಳನ್ನು ನಿನ್ನ ವಿಷಯವಾಗಿ ಆಡಲಾರಂಭಿಸುವರು. ಅದಕ್ಕಿಂತ ವ್ಯಥೆಯನ್ನುಂಟುಮಾಡತಕ್ಕದ್ದು ಇನ್ನು ಯಾವುದಿದೆ ?

**ಹತೋ ವಾ ಪ್ರಾಪ್ಸ್ಯಸಿ ಸ್ವರ್ಗಂ ಜಿತ್ವಾ ವಾ ಭೋಕ್ಷ್ಯಸೇ ಮಹೀಮ್ ।**
**ತಸ್ಮಾದುತ್ತಿಷ್ಠ ಕೌಂತೇಯ ಯುದ್ಧಾಯ ಕೃತನಿಶ್ಚಯಃ ॥ ೩೭**

ಯುದ್ಧದಲ್ಲಿ ಹತನಾದರೆ ಸ್ವರ್ಗವನ್ನು ಪಡೆಯುವೆ. ಗೆದ್ದರೆ ಪೃಥ್ವಿಯನ್ನು ಭೋಗಿಸುವೆ. ಆದ್ದರಿಂದ, ಹೇ ಕುಂತೀತನಯ, ಯುದ್ಧಕ್ಕಾಗಿ ನಿರ್ಧಾರ ಮಾಡಿ ಎದ್ದುನಿಲ್ಲು!

**ಸುಖದುಃಖೇ ಸಮೇ ಕೃತ್ವಾ ಲಾಭಾಲಾಭೌ ಜಯಾಜಯೌ ।**
**ತತೋ ಯುದ್ಧಾಯ ಯುಜ್ಯಸ್ವ ನೈವಂ ಪಾಪಮವಾಪ್ಸ್ಯಸಿ ॥ ೩೮**

ಸುಖದುಃಖಗಳಲ್ಲಿ ರಾಗದ್ವೇಷಗಳನ್ನಿಡದೆ ಅವು ಸಮವೆಂದು ಭಾವಿಸಿ, ಹಾಗೆಯೇ ಲಾಭ–ನಷ್ಟ, ಜಯ–ಅಪಜಯಗಳನ್ನು ಸಮವೆಂದು ತಿಳಿದು ಯುದ್ಧ ಮಾಡಲು ಸಜ್ಜಾಗು. ಈ ರೀತಿಯಾದ ಭಾವನೆಯಿಂದ ಯುದ್ಧ ಮಾಡಿದರೆ ನಿನಗೆ ಪಾಪವುಂಟಾಗುವುದಿಲ್ಲ.

**ಏಷಾ ತೇಽಭಿಹಿತಾ ಸಾಂಖ್ಯೇ ಬುದ್ಧಿರ್ಯೋಗೇ ತ್ವಿಮಾಂ ಶೃಣು ।**
**ಬುದ್ಧ್ಯಾ ಯುಕ್ತೋ ಯಯಾ ಪಾರ್ಥ ಕರ್ಮಬಂಧಂ ಪ್ರಹಾಸ್ಯಸಿ ॥**

ಪಾರ್ಥ, ನಿನಗೆ ಹೇಳಿದ ಈ ಬುದ್ಧಿಯು ಸಾಂಖ್ಯ ವಿಷಯದಲ್ಲಿ. ಕರ್ಮಯೋಗ ಮತ್ತು ಧ್ಯಾನಯೋಗದ ವಿಷಯದಲ್ಲಿ ಈಗ ಹೇಳುವ ಬುದ್ಧಿಮಾರ್ಗವನ್ನು ಕೇಳು. ನೀನು ಈ ಯೋಗಬುದ್ಧಿಯನ್ನು ಅಳವಡಿಸಿ ಕೊಂಡರೆ ಕರ್ಮಬಂಧನದಿಂದ ಬಿಡುಗಡೆ ಹೊಂದುವೆ.

**ವಿವರಣೆ :** ಭಗವದ್ಗೀತೆಯಲ್ಲಿ ಸಾಂಖ್ಯವೆಂದರೆ ಪರಮಾರ್ಥವಾದ ಜ್ಞಾನಯೋಗ; ಕಾಪಿಲಸಾಂಖ್ಯಮತವಲ್ಲ. ಉಪಕ್ರಮದಲ್ಲಿ 'ಅಶೋಚ್ಯಾನನ್ವ ಶೋಚಸ್ತ್ವಂ' (ಶ್ಲೋ. ೧೧) ಎಂಬುದರಿಂದ 'ಸ್ವಧರ್ಮಮಪಿ ಚಾವೇಕ್ಷ್ಯ' (ಶ್ಲೋ. ೩೧) ಎಂಬ ಶ್ಲೋಕದವರೆಗೆ ಹೇಳಿದ್ದು ಪರಮಾರ್ಥವಾದದ್ದು. ಆನಂತರ ಹೇಳಿರುವುದು ಪ್ರಾಸಂಗಿಕವಾಗಿ ಲೋಕನೀತಿಯನ್ನನುಸರಿಸಿದ ಮಾತು. ಅರ್ಜುನನ ಶೋಕಮೋಹಗಳನ್ನು ಕಳೆಯುವುದಕ್ಕಾಗಿ ಹೀಗೆ ಹೇಳಬೇಕಾಯಿತು. ಇದು ಮುಖ್ಯ ತಾತ್ಪರ್ಯದಿಂದ ಹೇಳಿದ್ದಲ್ಲ. ಗೀತೆಯಲ್ಲಿ ಸಾಂಖ್ಯ ಮತ್ತು ಕರ್ಮಯೋಗ ಇವೆರಡರ ವಿಷಯವೇ ಪ್ರಸಂಗಾನುಸಾರವಾಗಿ ಬರುತ್ತದೆ. ಇವೆರಡನ್ನು ಕಲಬೆರಕೆ ಮಾಡಿಕೊಳ್ಳಬಾರದು. ಅಧಿಕಾರಭೇದ ದಿಂದ ಕೆಲವರಿಗೆ ಜ್ಞಾನಯೋಗವನ್ನೂ ಕೆಲವರಿಗೆ ಕರ್ಮಯೋಗವನ್ನೂ ಭಗವಂತನು ಹೇಳಿದ್ದಾನೆ. ಇವೆರಡೂ ಬೇರೆಬೇರೆಯಾದವು – ಎಂದು

ವಿಂಗಡಿಸಿ ತೋರಿಸುವುದಕ್ಕಾಗಿ ಈ ಶ್ಲೋಕವು ಹೊರಟಿದೆ. ಅರ್ಜುನನಿಗೆ ಕರ್ಮಯೋಗವೇ ಸರಿಯಾದದ್ದೆಂದು ಭಗವಂತನು ಅದನ್ನು ಮತ್ತೆ ಮತ್ತೆ ಹೇಳಿದ್ದಾನೆ. ಜ್ಞಾನಯೋಗವನ್ನು ಜ್ಞಾನನಿಷ್ಠೆಯೆಂದೂ ಕರ್ಮಯೋಗವನ್ನು ಕರ್ಮನಿಷ್ಠೆಯೆಂದೂ ವ್ಯವಹರಿಸುವುದುಂಟು.

**ನೇಹಾಭಿಕ್ರಮನಾಶೋಽಸ್ತಿ ಪ್ರತ್ಯವಾಯೋ ನ ವಿದ್ಯತೇ ।**
**ಅಲ್ಪಮಪ್ಯಸ್ಯ ಧರ್ಮಸ್ಯ ತ್ರಾಯತೇ ಮಹತೋ ಭಯಾತ್ ॥ ೪೦**

ಈ ಕರ್ಮಯೋಗದಲ್ಲಿ ಪ್ರಾರಂಭಿಸಿದ್ದು ಫಲವನ್ನು ಕೊಡದೆ ನಾಶ ವಾಗುತ್ತದೆ ಎಂಬುದಿಲ್ಲ. (ವೈದ್ಯದಲ್ಲಿರುವ ಹಾಗೆ) ಇದರಲ್ಲಿ ದೋಷವೂ ಸಂಭವಿಸುವುದಿಲ್ಲ. ಈ ಧರ್ಮದ ಒಂದು ಲೇಶವೂ ಸಹ ಮಹತ್ತರವಾದ ಸಂಸಾರಭಯುವನ್ನು ತಪ್ಪಿಸಿ ಕಾಪಾಡುತ್ತದೆ. (ತಪ್ಪಾದರೆ ವೈದ್ಯರಲ್ಲಿ ದೋಷ.)

**ವಿವರಣೆ :** ಕರ್ಮಯೋಗವೂ ಮೋಕ್ಷಮಾರ್ಗವೇ ಹೌದು. ಇದು ಜ್ಞಾನಮಾರ್ಗವನ್ನೇರಲು ಅರ್ಹತೆಯನ್ನು ತಂದುಕೊಟ್ಟು ಪರಂಪರೆಯಿಂದ ಮೋಕ್ಷವನ್ನು ಒದಗಿಸುತ್ತದೆ. ಕರ್ಮಯೋಗದ ಅನುಷ್ಠಾನವು ನಿಷ್ಫಲ ವಾಗುವುದೇ ಇಲ್ಲ. ಇದರ ಅನುಷ್ಠಾನದಲ್ಲಿ ಯಾವ ಅನರ್ಥವೂ ಆಗುವು ದಿಲ್ಲ. ಎಷ್ಟು ಕಡಿಮೆ ಮಾಡಿದರೂ ಅದು ಚಿತ್ತಸಂಸ್ಕಾರಕವಾಗುವುದರಿಂದ ಫಲವಿದ್ದೇ ಇರುತ್ತದೆ. ಚಿತ್ತವು ಸಂಸ್ಕಾರಹೊಂದಿದಂತೆ ಶುದ್ಧವಾಗುವುದರಿಂದ ಸಾಧಕನು ಕರ್ಮಯೋಗವನ್ನು ನಿಷ್ಠೆಯಿಂದ ಮುಂದುವರಿಸುತ್ತಾನೆ. ಕರ್ಮಯೋಗವು ಜ್ಞಾನಯೋಗವನ್ನೇರಲು ಮೆಟ್ಟಿಲು.

**ವ್ಯವಸಾಯಾತ್ಮಿಕಾ ಬುದ್ಧಿರೇಕೇಹ ಕುರುನಂದನ ।**
**ಬಹುಶಾಖಾ ಹ್ಯನಂತಾಶ್ಚ ಬುದ್ಧಯೋಽವ್ಯವಸಾಯಿನಾಮ್ ॥ ೪೧**

ಅರ್ಜುನ, ಈ ಶ್ರೇಯೋಮಾರ್ಗದಲ್ಲಿ (ಜ್ಞಾನನಿಷ್ಠೆಯಾಗಿರಲಿ, ಕರ್ಮನಿಷ್ಠೆಯಾಗಿರಲಿ) ನಿಶ್ಚಯಾತ್ಮಕವಾದ ಬುದ್ಧಿಯು ಏಕರೂಪ ವಾಗಿರುತ್ತದೆ. ಯಾರಿಗೆ ದೃಢವಾದ ಒಂದು ನಿಶ್ಚಯವಿಲ್ಲವೋ ಅವರ ಬುದ್ಧಿಗಳು ಬಹಳ ಕವಲುಗಳಾಗಿಬಿಡುತ್ತವೆಯಲ್ಲದೆ ಒಂದೊಂದು ಕವಲಿನಲ್ಲಿ ಅನೇಕ ಭೇದಗಳುಂಟಾಗುತ್ತವೆ.

**ವಿವರಣೆ :** ಸರಿಯಾದ ಪ್ರಮಾಣಗಳಿಂದ ವಿಚಾರ ಮಾಡಿ ನಿಶ್ಚಯ ಹೊಂದಿರುವ ಬುದ್ಧಿಗೆ ವ್ಯವಸಾಯಾತ್ಮಕಬುದ್ಧಿಯೆಂದು ಹೆಸರು.

**ಯಾಮಿಮಾಂ ಪುಷ್ಪಿತಾಂ ವಾಚಂ ಪ್ರವದಂತ್ಯವಿಪಶ್ಚಿತಃ ।**
**ವೇದವಾದರತಾಃ ಪಾರ್ಥ ನಾನ್ಯದಸ್ತೀತಿ ವಾದಿನಃ ॥ ೪೨**

(ಕರ್ಮಕಾಂಡಾತ್ಮಕವಾದ) ವೇದವಾದಗಳಲ್ಲಿ ಮುಳುಗಿದ ಕೆಲವು ಅಪಂಡಿತರಿದ್ದಾರೆ. ಈ ಅವಿವೇಕಿಗಳು 'ಸ್ವರ್ಗಾದಿಫಲಭೋಗವನ್ನು ಬಿಟ್ಟು ಇನ್ನೇನೂ ಇಲ್ಲ' ಎಂದು ವಾದಿಸುತ್ತ, ಹೂವರಳಿದ ಮರದಂತಿರುವ ಬಣ್ಣಬಣ್ಣದ ಮಾತನ್ನಾಡುತ್ತಾರೆ.

**ಕಾಮಾತ್ಮಾನಃ ಸ್ವರ್ಗಪರಾ ಜನ್ಮಕರ್ಮಫಲಪ್ರದಾಮ್ ।**
**ಕ್ರಿಯಾವಿಶೇಷಬಹುಲಾಂ ಭೋಗೈಶ್ವರ್ಯಗತಿಂ ಪ್ರತಿ ॥ ೪೩**

ಈ ಜನರು ಕಾಮಾತ್ಮರಾಗಿದ್ದು ಸ್ವರ್ಗವೇ ಶ್ರೇಷ್ಠವಾದ ಫಲವೆಂದು ನಂಬಿರುತ್ತಾರೆ. ಇಂದ್ರಿಯಭೋಗ, ಐಶ್ವರ್ಯಪ್ರಾಪ್ತಿಗಳನ್ನು ಕುರಿತೇ ಮಾತನಾಡುತ್ತಾರೆ. ಆದರೆ ಇವರ ಬಣ್ಣದ ಮಾತು ಪುನರ್ಜನ್ಮವೆಂಬ ಕರ್ಮಫಲವನ್ನೀಯುತ್ತದೆ. ಮಾಡಬೇಕಾದ ನಾನಾ ಕ್ರಿಯೆಗಳು ಈ ಮಾರ್ಗದಲ್ಲಿ ತುಂಬಿಕೊಂಡಿರುತ್ತವೆ.

**ವಿವರಣೆ :** ವೇದದಲ್ಲಿ ಕರ್ಮಕಾಂಡ, ಜ್ಞಾನಕಾಂಡವೆಂದು ಎರಡು ವಿಭಾಗಗಳಿವೆ. ಯಾರಿಗೆ ಇಂದ್ರಿಯಸುಖದಲ್ಲಿ ಆಸಕ್ತಿಯುಂಟೋ ಅವರಿಗಾಗಿ ಕರ್ಮಕಾಂಡವಿದೆ. ಯಾರಿಗೆ ಮೋಕ್ಷವೆಂಬ ಪರಮಪುರುಷಾರ್ಥದಲ್ಲಿ ಬಯಕೆಯುಂಟೋ ಅವರಿಗಾಗಿ ಜ್ಞಾನಕಾಂಡವಿದೆ. ಐಶ್ವರ್ಯ, ದನಕರುಗಳು, ಸ್ವರ್ಗ–ಮುಂತಾದ್ದನ್ನು ಬಯಸತಕ್ಕವರು ಕರ್ಮಕಾಂಡದಲ್ಲಿ ತೊಡಗುತ್ತಾರೆ. ಯಜ್ಞಯಾಗಾದಿಗಳಿಂದ ಫಲವನ್ನು ಪಡೆಯಲು ಅಪೇಕ್ಷಿಸುತ್ತಾರೆ. ಈ ಕರ್ಮವು ಜನ್ಮದುಃಖವನ್ನೇನೂ ನೀಗಿಸುವುದಿಲ್ಲ. ಜನನ–ಮರಣಗಳೆಂಬ ಚಕ್ರದಲ್ಲಿ ಸುತ್ತುತ್ತಲೇ ಇರಬೇಕಾಗುತ್ತದೆ. ಆದರೂ ಇದನ್ನೇ ನಂಬಿಕೊಂಡಿರುವ ಕಾಮಾತ್ಮರನ್ನು ಇಲ್ಲಿ ನಿಂದಿಸಲಾಗಿದೆ. ಈ ಕಾಮ್ಯ ಕರ್ಮಗಳಲ್ಲಿ ನಿರತರಾದವರಿಗೆ ನಿಷ್ಕಾಮಕರ್ಮಯೋಗವು ಸಿದ್ಧಿಸುವುದಿಲ್ಲವೆಂದು ಅಭಿಪ್ರಾಯ.

**ಭೋಗೈಶ್ವರ್ಯಪ್ರಸಕ್ತಾನಾಂ ತಯಾಪಹೃತಚೇತಸಾಂ ।**
**ವ್ಯವಸಾಯಾತ್ಮಿಕಾ ಬುದ್ಧಿಃ ಸಮಾಧೌ ನ ವಿಧೀಯತೇ ॥ ೪೪**

ಭೋಗ, ಐಶ್ವರ್ಯಗಳಲ್ಲಿಯೇ ತೊಡಗಿದವರಿಗೆ ಕ್ರಿಯಾಬಹುಳವಾದ ಆ ಮಾತಿನಿಂದ ವಿವೇಕವು ಮುಚ್ಚಿಹೋಗಿರುತ್ತದೆ. ಅವರ ಅಂತಃಕರಣದಲ್ಲಿ

ವ್ಯವಸಾಯಾತ್ಮಕವಾದ ನಿಶ್ಚಯಬುದ್ಧಿಯು ಹುಟ್ಟುವುದಿಲ್ಲ.

**ತ್ರೈಗುಣ್ಯವಿಷಯಾ ವೇದಾ ನಿಸ್ತ್ರೈಗುಣ್ಯೋ ಭವಾರ್ಜುನ ।**
**ನಿರ್ದ್ವಂದ್ವೋ ನಿತ್ಯಸತ್ತ್ವಸ್ಥೋ ನಿರ್ಯೋಗಕ್ಷೇಮ ಆತ್ಮವಾನ್ ॥ ೪೫**

ಅರ್ಜುನ, (ಕರ್ಮಕಾಂಡಾತ್ಮಕವಾದ) ವೇದಗಳು ತ್ರಿಗುಣಾತ್ಮಕವಾದ ಸಂಸಾರದಲ್ಲಿ ತೊಡಗಿಸತಕ್ಕವು. ನೀನು ಈ ತ್ರಿಗುಣಗಳನ್ನು ಮೀರಿ ನಿಷ್ಕಾಮನಾಗು. ಸುಖದುಃಖಾದಿ ದ್ವಂದ್ವಗಳನ್ನು ದಾಟು. ಸದಾ ಸತ್ತ್ವಗುಣದಲ್ಲಿ ನಿಷ್ಠನಾಗಿರು. ಯೋಗಕ್ಷೇಮಗಳ ಚಿಂತೆಯನ್ನು ತ್ಯಜಿಸಿ ಆತ್ಮವಂತನಾಗಿರು.

ವಿವರಣೆ : ಲೋಕದಲ್ಲಿ ಸ್ವರ್ಗಾದಿಫಲಗಳನ್ನು ಬಯಸತಕ್ಕವರೂ ಇರುತ್ತಾರೆ. ಅವರಿಗಾಗಿ ವೇದವು ಕೆಲವು ಮಾರ್ಗಗಳನ್ನು ತಿಳಿಸುತ್ತದೆ. ಅದು ಕಾಮ್ಯವಿಧಿ. ಆ ಫಲವು ಬೇಕಾದರೆ ನಿರ್ದಿಷ್ಟವಾದ ಕರ್ಮವನ್ನು ಆಚರಿಸಬೇಕು. ಅದು ಮಾಡಲೇಬೇಕಾದ ನಿತ್ಯವಿಧಿಯಲ್ಲ. ಅಂಗಡಿಯಲ್ಲಿ ಎಲ್ಲ ಸಾಮಾನುಗಳನ್ನು ಮಾರಾಟಕ್ಕೆ ಇಟ್ಟಿರುತ್ತಾರೆ. ಅವೆಲ್ಲವನ್ನೂ ಎಲ್ಲರೂ ಕೊಳ್ಳಬೇಕಾದ್ದಿಲ್ಲ. ತಮಗೆ ಬೇಕಾದ್ದನ್ನು ಮಾತ್ರ ಜನರು ಆರಿಸಿಕೊಳ್ಳುತ್ತಾರೆ. ಹಾಗೆಯೇ ವೇದವೂ ಸಹ ಜನರ ಇಷ್ಟಾರ್ಥಗಳನ್ನು ಪೂರೈಸುವ ನಾನಾ ಮಾರ್ಗಗಳನ್ನು ಬೋಧಿಸುತ್ತದೆ. ನಮಗೆ ಹಿತವಾದುದನ್ನು ನಾವು ಆರಿಸಿಕೊಳ್ಳಬೇಕು. ಕೆಲವು ನಿತ್ಯವಿಧಿಗಳು ವೇದದಲ್ಲಿವೆ. ಅವನ್ನು ಮಾತ್ರ ಯಾರೂ ಮೀರಕೂಡದು. ಅಲಬ್ಧವಸ್ತುವಿನ ಲಾಭಕ್ಕೆ ಯೋಗವೆಂದೂ ಲಬ್ಧವಾದ ವಸ್ತುವಿನ ರಕ್ಷಣೆಗೆ ಕ್ಷೇಮವೆಂದೂ ಹೆಸರು. ಆತ್ಮವಂತನೆಂದರೆ ಮನಸ್ಸನ್ನು ಬಿಗಿಹಿಡಿದು ಎಚ್ಚರಿಕೆಯಿಂದ ನಡೆಯತಕ್ಕವನು. ಪ್ರಮಾದ ಮಾಡದಿರುವವನೆಂದರ್ಥ.

**ಯಾವಾನರ್ಥ ಉದಪಾನೇ ಸರ್ವತಃ ಸಂಪ್ಲುತೋದಕೇ ।**
**ತಾವಾನ್ ಸರ್ವೇಷು ವೇದೇಷು ಬ್ರಾಹ್ಮಣಸ್ಯ ವಿಜಾನತಃ ॥ ೪೬**

ಈ ಶ್ಲೋಕದಲ್ಲಿರುವ ಪದಗಳ ಅನ್ವಯ ಹೀಗೆ – ಉದಪಾನೇ ಯಾವಾನ್ ಅರ್ಥಃ ತಾವಾನ್ ಸರ್ವತಃ ಸಂಪ್ಲುತೋದಕೇ. (ಏವಂ) ಸರ್ವೇಷು ವೇದೇಷು ಯಾವಾನ್ ಅರ್ಥಃ ತಾವಾನ್ ವಿಜಾನತಃ ಬ್ರಾಹ್ಮಣಸ್ಯ (ಜ್ಞಾನೇ).

ಚಿಕ್ಕದಾದ ಕೊಳದಲ್ಲಿ ಎಷ್ಟು ಪ್ರಯೋಜನ ದೊರೆಯುತ್ತದೆಯೋ ಅಷ್ಟು ಪ್ರಯೋಜನವು ಎಲ್ಲೆಡೆಯೂ ತುಂಬಿ ತುಳುಕುವಷ್ಟು ನೀರಿರುವ ದೊಡ್ಡ ಜಲಾಶಯದಲ್ಲಿಯೂ ಆಗುತ್ತದೆ. ಸಮಸ್ತ ವೇದಗಳಲ್ಲಿಯೂ ದೊರಕುವಷ್ಟು

ಫಲವು ಪರಮಾರ್ಥತತ್ತ್ವವನ್ನರಿತ ಬ್ರಹ್ಮಜ್ಞಾನಿಯ ಜ್ಞಾನದಲ್ಲಿ ಸೇರಿ ಹೋಗುತ್ತದೆ.

**ವಿವರಣೆ :** ಚಿಕ್ಕ ಕೊಳದಲ್ಲಿ ಸ್ನಾನ, ಬಟ್ಟೆ ಒಗೆಯುವುದು – ಮುಂತಾದ ಪ್ರಯೋಜನ ಆಗುತ್ತದೆ. ತುಂಬಿ ತುಳುಕುವ ದೊಡ್ಡ ಜಲಾಶಯದಲ್ಲಿಯೂ ಅಷ್ಟು ಪ್ರಯೋಜನ ಇದ್ದೇ ಇದೆ. ಹಾಗೆ ವೇದೋಕ್ತವಾದ ಸಮಸ್ತ ಕರ್ಮಫಲವೂ ಬ್ರಹ್ಮಜ್ಞಾನಿಗಾಗುವ ಫಲದಲ್ಲಿ ಅಡಗಿಹೋಗುತ್ತದೆ. ಕರ್ಮ ಫಲಕ್ಕಿಂತ ಜ್ಞಾನಫಲವು ಬಹು ದೊಡ್ಡದು. 'ಸರ್ವಂ ಕರ್ಮಾಖಿಲಂ ಪಾರ್ಥ ಜ್ಞಾನೇ ಪರಿಸಮಾಪ್ಯತೇ' (೪–೩೩) ಎಂದು ಭಗವಂತನು ಮುಂದೆ ಹೇಳುತ್ತಾನೆ. ಜ್ಞಾನನಿಷ್ಠೆಗೆ ತಕ್ಕ ಅಧಿಕಾರ ಬರುವವರೆಗೂ ಕರ್ಮಕ್ಕೆ ಅಧಿಕಾರಿಯಾದವನು ನಿಷ್ಕಾಮನಾಗಿ ಕರ್ಮವನ್ನು ಆಚರಿಸುತ್ತಲೇ ಇರಬೇಕು. ಅರ್ಜುನನು ಕರ್ಮಕ್ಕೆ ಅಧಿಕಾರಿ. ಜ್ಞಾನಿಯ ಬ್ರಹ್ಮಾನಂದದಲ್ಲಿ ಕರ್ಮ ಗಳಿಂದಾಗುವ ಭೋಗಸುಖವು ಅಡಗಿಹೋಗುತ್ತದೆ. ಅಲ್ಪವಾದ ಕರ್ಮಫಲಕ್ಕೆ ಆಸೆಪಡಬಾರದೆಂದು ತಾತ್ಪರ್ಯ.

**ಕರ್ಮಣ್ಯೇವಾಧಿಕಾರಸ್ತೇ ಮಾ ಫಲೇಷು ಕದಾಚನ ।**
**ಮಾ ಕರ್ಮಫಲಹೇತುರ್ಭೂಃ ಮಾ ತೇ ಸಂಗೋಽಸ್ತ್ವಕರ್ಮಣಿ ॥ ೪೭**

ನಿನಗೆ ಕರ್ಮವನ್ನು ಮಾಡಲು ಮಾತ್ರ ಅಧಿಕಾರವಿದೆ. ಅದರ ಫಲದಲ್ಲಿ ಮಾತ್ರ ಎಂದಿಗೂ ಬೇಡ. ಕರ್ಮಫಲವಾದ ಪುನರ್ಜನ್ಮಕ್ಕೆ ಕಾರಣನಾಗಬೇಡ. ಕರ್ಮತ್ಯಾಗದಲ್ಲಿಯೂ ನಿನಗೆ ಪ್ರೀತಿಯುಂಟಾಗದಿರಲಿ.

**ವಿವರಣೆ :** ಜ್ಞಾನಯೋಗಕ್ಕೆ ಬೇಕಾದ ಶಮ, ದಮ, ವಿವೇಕ, ವೈರಾಗ್ಯಾದಿಗಳು ಅರ್ಜುನನಿಗೆ ಬಂದಿಲ್ಲವಾದ್ದರಿಂದ ಅವನು ಕರ್ಮಯೋಗಕ್ಕೆ ಮಾತ್ರ ಅಧಿಕಾರಿ. ಈಶ್ವರಾರ್ಪಣಬುದ್ಧಿಯಿಂದ ಕರ್ಮವನ್ನಾಚರಿಸಬೇಕು. ಅದರಿಂದಾಗುವ ಪ್ರೀತಿ ಭಗವಂತನಿಗೆ ಸೇರಿದ್ದು. ಅದು ನಮಗೆ ಸೇರಿಲ್ಲ ವಾದ್ದರಿಂದ ನಿಷ್ಕಾಮಕರ್ಮವಾಗುತ್ತದೆ. ಫಲಾಪೇಕ್ಷೆಯನ್ನು ತ್ಯಜಿಸುವು ದಾದರೆ ಕರ್ಮವನ್ನಾದರೂ ಏಕೆ ಮಾಡಬೇಕು ? – ಎಂದು ಕರ್ಮವನ್ನು ತ್ಯಜಿಸಲೂ ಕೂಡದು.

**ಯೋಗಸ್ಥಃ ಕುರು ಕರ್ಮಾಣಿ ಸಂಗಂ ತ್ಯಕ್ತ್ವಾ ಧನಂಜಯ ।**
**ಸಿದ್ಧ್ಯಸಿದ್ಧ್ಯೋಃ ಸಮೋ ಭೂತ್ವಾ ಸಮತ್ವಂ ಯೋಗ ಉಚ್ಯತೇ ॥ ೪೮**

ಎಲೈ ಧನಂಜಯ, ಫಲಾಸಕ್ತಿಯನ್ನು ತೊರೆದು ಯೋಗಸ್ಥನಾಗಿ

ಕರ್ಮಗಳನ್ನಾಚರಿಸು. ಸಿದ್ಧಿ–ಅಸಿದ್ಧಿಗಳೆರಡೂ ನನಗೆ ಸಮವೆಂದು ಸಮತ್ವ ಬುದ್ಧಿಯುಳ್ಳವನಾಗಿರು. ಈ ಸಮತ್ವಕ್ಕೆ ಯೋಗವೆಂದು ಹೆಸರು.

**ವಿವರಣೆ :** ಇದು ನನ್ನ ಕರ್ತವ್ಯವೆಂದು ಈಶ್ವರಾರಾಧನೆಗಾಗಿ ಕರ್ಮವನ್ನಾಚರಿಸಬೇಕು. ಈಶ್ವರನಿಗೆ ನನ್ನ ವಿಷಯದಲ್ಲಿ ಪ್ರೀತಿಯಾಗಲಿ ಎಂದು ಸಹ ಬಯಸಬಾರದು. ಇಂತಹ ಕರ್ಮಾಚರಣೆಯಿಂದ ಚಿತ್ತಶುದ್ಧಿಯಾಗಿ ಅದರ ಮೂಲಕ ಜ್ಞಾನಪ್ರಾಪ್ತಿಯಾಗುವುದು. ಯೋಗಶಬ್ದಕ್ಕೆ ಅನೇಕ ಅರ್ಥಗಳಿವೆ. ಶ್ರೀಕೃಷ್ಣನೇ ಅದರ ಅರ್ಥವನ್ನು ಅಲ್ಲಲ್ಲಿ ವಿವರಿಸುತ್ತಾನೆ.

**ದೂರೇಣ ಹ್ಯವರಂ ಕರ್ಮ ಬುದ್ಧಿಯೋಗಾದ್ಧನಂಜಯ ।**
**ಬುದ್ಧೌ ಶರಣಮನ್ವಿಚ್ಛ ಕೃಪಣಾಃ ಫಲಹೇತವಃ ॥ ೪೯**

ಸಮತ್ವಬುದ್ಧಿಯಿಂದ ಕೂಡಿದ ಕರ್ಮಕ್ಕಿಂತ (ಫಲಾಪೇಕ್ಷೆಯಿಂದ) ಕೂಡಿದ ನಿಕೃಷ್ಟವಾದ. ಕರ್ಮವು ಬಹುದೂರ ಇರಬೇಕಾದದ್ದು. ಈ ಸಮತ್ವಬುದ್ಧಿಗೆ ನೀನು ಶರಣಾಗತನಾಗು. ಫಲದ ಕಾರಣದಿಂದ ಕೆಲಸ ಮಾಡತಕ್ಕವರು ಹೀನರು.

**ವಿವರಣೆ :** "ಯೋ ವಾ ಏತದಕ್ಷರಂ ಗಾರ್ಗಿ ಅವಿದಿತ್ವಾ ಅಸ್ಮಾಲ್ಲೋಕಾತ್ ಪ್ರೈತಿ ಸ ಕೃಪಣಃ' (ಬೃಹ. ೩–೮–೧೦) – ಎಲೌ ಗಾರ್ಗಿ, ಈ ಅಕ್ಷರವನ್ನು ತಿಳಿದುಕೊಳ್ಳದೆ ಯಾವನು ಈ ಲೋಕದಿಂದ ಹೊರಟುಹೋಗುವನೋ ಅವನು ಕೃಪಣ. ಫಲಾಪೇಕ್ಷೆಯಿಂದ ಮಾಡುವ ಕರ್ಮವು ಹುಟ್ಟುಸಾವುಗಳನ್ನು ಕೊಡುತ್ತಲೇ ಇರುತ್ತದೆ.

**ಬುದ್ಧಿಯುಕ್ತೋ ಜಹಾತೀಹ ಉಭೇ ಸುಕೃತದುಷ್ಕೃತೇ ।**
**ತಸ್ಮಾದ್ಯೋಗಾಯ ಯುಜ್ಯಸ್ವ ಯೋಗಃ ಕರ್ಮಸು ಕೌಶಲಮ್ ॥ ೫೦**

ಸಮತ್ವಬುದ್ಧಿಯುಕ್ತನಾದವನು ಸುಕೃತದುಷ್ಕೃತಗಳೆರಡನ್ನೂ ಈ ಲೋಕದಲ್ಲಿಯೇ ಬಿಟ್ಟುಬಿಡುತ್ತಾನೆ. ಆದ್ದರಿಂದ ಆ ಯೋಗಕ್ಕೆ ನಿನ್ನನ್ನೂ ಹೊಂದಿಸಿಕೊ. ಯೋಗವೆಂದರೆ ಕರ್ಮವನ್ನು ಮಾಡುವುದರಲ್ಲಿ ಒಂದು ಜಾಣ್ಮೆ.

**ವಿವರಣೆ :** ಸಮತ್ವವೆಂದರೆ ಕರ್ಮಜನ್ಯವಾದ ಸಿದ್ಧಿ– ಅಸಿದ್ಧಿಗಳಲ್ಲಿ ಸಮತೆ. ಅಥವಾ ಫಲಾಪೇಕ್ಷೆ ಇಲ್ಲದ್ದರಿಂದ ನಿತ್ಯ, ನೈಮಿತ್ತಿಕ, ಕಾಮ್ಯಕರ್ಮಗಳಲ್ಲಿ ಸಮತೆ. ಈ ಬುದ್ಧಿಯುಳ್ಳ ಕರ್ಮಯೋಗಿಗೆ ಪಾಪ–ಪುಣ್ಯಗಳ ಲೇಪವಿಲ್ಲ.

**ಕರ್ಮಜಂ ಬುದ್ಧಿಯುಕ್ತಾ ಹಿ ಫಲಂ ತ್ಯಕ್ತ್ವಾ ಮನೀಷಿಣಃ ।**
**ಜನ್ಮಬಂಧವಿನಿರ್ಮುಕ್ತಾಃ ಪದಂ ಗಚ್ಛಂತ್ಯನಾಮಯಮ್ ॥ ೫೧**

ಏಕೆಂದರೆ, ಸಮತ್ವಬುದ್ಧಿಯುಳ್ಳವರು ಕರ್ಮಜನ್ಯವಾದ ಫಲವನ್ನು ತ್ಯಜಿಸಿ, ಜ್ಞಾನಿಗಳಾಗಿ, ಹುಟ್ಟುವುದೆಂಬ ಬಂಧನವನ್ನು ಕಳಚಿಕೊಂಡು, ಸರ್ವೋಪದ್ರವರಹಿತವಾದ ವಿಷ್ಣುಪದವನ್ನು (ಮೋಕ್ಷವನ್ನು) ಪಡೆಯುತ್ತಾರೆ.

ಅಥವಾ "ಬುದ್ಧಿಯೋಗಾದ್ಧನಂಜಯ" ಎಂಬಲ್ಲಿಂದ (ಶ್ಲೋ. ೪೯) ಇಲ್ಲಿಯವರೆಗೆ ಪರಮಾರ್ಥದರ್ಶನವೆಂಬ ಜ್ಞಾನವನ್ನು ತಿಳಿಸಿದೆ – ಎಂದೂ ಹೇಳಬಹುದು. ಆ ಪಕ್ಷದಲ್ಲಿ, ಸಾಂಖ್ಯಯೋಗಕ್ಕಿಂತ (ಜ್ಞಾನಯೋಗಕ್ಕಿಂತ) ಕರ್ಮವು ಕೀಳಾದದ್ದು. ಆದ್ದರಿಂದ ಸಾಂಖ್ಯಬುದ್ಧಿಯಲ್ಲಿ ಶರಣಾಗು (೪೯), ಸಾಂಖ್ಯಬುದ್ಧಿಯುಳ್ಳವರು ಪುಣ್ಯಪಾಪಗಳನ್ನು ಮೀರುತ್ತಾರೆ (೫೦), ಸಾಂಖ್ಯಬುದ್ಧಿಯುಳ್ಳವರು ವಿಷ್ಣುಪದವನ್ನು ಪಡೆಯುವರು (೫೧) – ಎಂದು ಅರ್ಥ ಹೇಳಬೇಕು.

**ಯದಾ ತೇ ಮೋಹಕಲಿಲಂ ಬುದ್ಧಿರ್ವ್ಯತಿತರಿಷ್ಯತಿ ।**
**ತದಾ ಗಂತಾಸಿ ನಿರ್ವೇದಂ ಶ್ರೋತವ್ಯಸ್ಯ ಶ್ರುತಸ್ಯ ಚ ॥ ೫೨**

ಯಾವಾಗ ನಿನ್ನ ಬುದ್ಧಿಯು ಮೋಹಾತ್ಮಕವಾದ ಅವಿವೇಕವೆಂಬ ಕಶ್ಮಲವನ್ನು ದಾಟುವುದೋ ಆಗ, ಇಂದು ಕೇಳಬೇಕಾದದ್ದು ಹಿಂದೆ ಕೇಳಿದ್ದು – ಈ ಎರಡರ ವಿಷಯದಲ್ಲಿಯೂ ವೈರಾಗ್ಯವನ್ನು ಹೊಂದುವೆ.

**ವಿವರಣೆ :** ಸಮತ್ವಬುದ್ಧಿಯುಂಟಾದ ಮೇಲೆ ಫಲವಿಷಯಕವಾದ ಶಾಸ್ತ್ರ ವಾಕ್ಯವನ್ನು ಕೇಳುವುದಕ್ಕೆ ಇಚ್ಛೆ ಬರುವುದಿಲ್ಲ – ಎಂದು ಅಭಿಪ್ರಾಯ.

**ಶ್ರುತಿವಿಪ್ರತಿಪನ್ನಾ ತೇ ಯದಾ ಸ್ಥಾಸ್ಯತಿ ನಿಶ್ಚಲಾ ।**
**ಸಮಾಧಾವಚಲಾ ಬುದ್ಧಿಸ್ತದಾ ಯೋಗಮವಾಪ್ಸ್ಯಸಿ ॥ ೫೩**

ಫಲಾತ್ಮಕವೇದವಚನಗಳಿಂದ ವಿಕ್ಷಿಪ್ತವಾದ ನಿನ್ನ ಅಂತಃಕರಣವು ಯಾವಾಗ ಆತ್ಮನಲ್ಲಿ ಸ್ಥಿರವಾಗಿ ನಿಲ್ಲುವುದೋ, ಆಗ ವಿವೇಕಪ್ರಜ್ಞೆಯೆಂಬ ಯೋಗವನ್ನು ಪಡೆಯುತ್ತೀಯೆ.

**ವಿವರಣೆ :** ವಿಕ್ಷಿಪ್ತವಾದ ಅಂತಃಕರಣ=ಅನಾತ್ಮವಸ್ತುವಿನ ಕಡೆಗೆ ಹರಿದಾಡುವ ಮನಸ್ಸು. ಮನಸ್ಸು ಸಮಾಧಾನದಿಂದ ಯಾವುದರಲ್ಲಿ ನಿಲ್ಲುವುದೋ ಅದು ಸಮಾಧಿ. ಆತ್ಮವೆಂದರ್ಥ. ಇದು ಗೌಣಾರ್ಥವಾದರೂ ಸ್ವೀಕರಿಸಬೇಕು. ಇಲ್ಲದಿದ್ದರೆ 'ಯೋಗಮವಾಪ್ಸ್ಯಸಿ' ಎನ್ನುವುದು ಪುನರುಕ್ತಿಯಾಗುತ್ತದೆ.

**ಅರ್ಜುನ ಉವಾಚ –**

**ಸ್ಥಿತಪ್ರಜ್ಞಸ್ಯ ಕಾ ಭಾಷಾ ಸಮಾಧಿಸ್ಥಸ್ಯ ಕೇಶವ ।**
**ಸ್ಥಿತಧೀಃ ಕಿಂ ಪ್ರಭಾಷೇತ ಕಿಮಾಸೀತ ವ್ರಜೇತ ಕಿಮ್ ॥ ೫೪**

**ಅರ್ಜುನನು ಹೇಳಿದನು :** ಕೇಶವ, ಸಮಾಧಿಸ್ಥನಾದ ಸ್ಥಿತಪ್ರಜ್ಞನೆಂದು ಯಾರಿಗೆ ಹೇಳಬೇಕು ? ಅವನು ಮಾತಾಡುವನೆ ? ಅವನ ಇರವು, ಅವನ ನಡತೆ ಹೇಗಿರುವುದು ? (ಸ್ಥಿತಪ್ರಜ್ಞನ ಲಕ್ಷಣವೇನು ? – ಎಂದು ತಾತ್ಪರ್ಯ.)

**ಶ್ರೀಭಗವಾನುವಾಚ –**

**ಪ್ರಜಹಾತಿ ಯದಾ ಕಾಮಾನ್ ಸರ್ವಾನ್ ಪಾರ್ಥ ಮನೋಗತಾನ್ ।**
**ಆತ್ಮನ್ಯೇವಾತ್ಮನಾ ತುಷ್ಟಃ ಸ್ಥಿತಪ್ರಜ್ಞಸ್ತದೋಚ್ಯತೇ ॥ ೫೫**

**ಶ್ರೀಭಗವಂತನು ಹೇಳಿದನು –** ಪಾರ್ಥ, ಮನಸ್ಸಿನಲ್ಲಿ ನೆಟ್ಟಿರುವ ಸಮಸ್ತ ಆಸೆಗಳನ್ನೂ ಯಾವಾಗ ತೊರೆದುಬಿಡುತ್ತಾನೋ, ತನ್ನ ಪಾಡಿಗೆ ತಾನೇ ಆತ್ಮಾನಂದದಲ್ಲಿರುತ್ತಾನೋ, ಆಗ ಅವನು ಸ್ಥಿತಪ್ರಜ್ಞನೆನಿಸಿ ಕೊಳ್ಳುತ್ತಾನೆ.

**ದುಃಖೇಷ್ವನುದ್ವಿಗ್ನಮನಾಃ ಸುಖೇಷು ವಿಗತಸ್ಪೃಹಃ ।**
**ವೀತರಾಗಭಯಕ್ರೋಧಃ ಸ್ಥಿತಧೀರ್ಮುನಿರುಚ್ಯತೇ ॥ ೫೬**

ದುಃಖಗಳು ಬಂದಾಗ ಯಾರ ಮನಸ್ಸು ಬೇಸರಗೊಳ್ಳುವುದಿಲ್ಲವೋ, ಸುಖಗಳು ಬಂದಾಗ ಇನ್ನೂ ಬೇಕೆಂಬ ಆಸೆ ಯಾರಿಗಿಲ್ಲವೋ, ಅನುರಾಗ–ಭಯ–ಕೋಪಗಳು ಯಾವಾತನಿಗಿಲ್ಲವೋ ಆತನನ್ನು ಸ್ಥಿತಪ್ರಜ್ಞನಾದ ಸಂನ್ಯಾಸಿ ಎನ್ನಬೇಕು.

**ಯಃ ಸರ್ವತ್ರಾನಭಿಸ್ನೇಹಸ್ತತ್ತತ್ ಪ್ರಾಪ್ಯ ಶುಭಾಶುಭಮ್ ।**
**ನಾಭಿನಂದತಿ ನ ದ್ವೇಷ್ಟಿ ತಸ್ಯ ಪ್ರಜ್ಞಾ ಪ್ರತಿಷ್ಠಿತಾ ॥ ೫೭**

ಯಾವಾತನು ಸರ್ವವಿಷಯದಲ್ಲಿಯೂ ಸಂಗರಹಿತನಾಗಿ, ಶುಭವಾದರೆ ಸಂತೋಷಿಸದೆಯೂ ಅಶುಭವಾದರೆ ದ್ವೇಷಿಸದೆಯೂ ಇರುತ್ತಾನೋ ಆತನ ಬುದ್ಧಿಯು ಸ್ಥಿರವಾದ ನಿಲುಗಡೆಯನ್ನು ಪಡೆದಿರುತ್ತದೆ.

**ಯದಾ ಸಂಹರತೇ ಚಾಯಂ ಕೂರ್ಮೋಽಂಗಾನೀವ ಸರ್ವಶಃ।**
**ಇಂದ್ರಿಯಾಣೀಂದ್ರಿಯಾರ್ಥೇಭ್ಯಸ್ತಸ್ಯ ಪ್ರಜ್ಞಾ ಪ್ರತಿಷ್ಠಿತಾ ॥ ೫೮**

ಆಮೆಯು (ಅಂಜಿಕೆಯಾದಾಗ) ತನ್ನ ಅವಯವಗಳನ್ನು ಹೇಗೆ ಎಲ್ಲ ಕಡೆಯಿಂದಲೂ ಒಳಕ್ಕೆ ಸೆಳೆದುಕೊಳ್ಳುವುದೋ ಹಾಗೆ ಈ ಜ್ಞಾನನಿಷ್ಠನು ಇಂದ್ರಿಯವಿಷಯಗಳಿಂದ ತನ್ನ ಇಂದ್ರಿಯಗಳನ್ನು ಯಾವಾಗ ಬಿಗಿಹಿಡಿದು ಕೊಳ್ಳಬಲ್ಲನೋ ಆಗ ಇವನ ಬುದ್ಧಿಯು ಸ್ಥಿರವಾಯಿತೆಂದು ತಿಳಿಯಬೇಕು.

**ಟಿಪ್ಪಣಿ :** ಶಬ್ದ, ಸ್ಪರ್ಶ, ರೂಪ, ರಸ, ಗಂಧ – ಇವು ಇಂದ್ರಿಯ ವಿಷಯಗಳು.

**ವಿಷಯಾ ವಿನಿವರ್ತಂತೇ ನಿರಾಹಾರಸ್ಯ ದೇಹಿನಃ ।**
**ರಸವರ್ಜಂ ರಸೋऽಪ್ಯಸ್ಯ ಪರಂ ದೃಷ್ಟ್ವಾ ನಿವರ್ತತೇ ॥ ೫೯**

ಮನುಷ್ಯನು ಆಹಾರವನ್ನು ಬಿಟ್ಟರೆ ವಿಷಯೇಂದ್ರಿಯಗಳು ತಾವಾಗಿ ಹಿಂದಕ್ಕೆ ಸರಿಯುತ್ತವೆ. ಆದರೆ ಲಾಲಸೆಯು ಮಾತ್ರ ಹೋಗುವುದಿಲ್ಲ. ಪರಮಾರ್ಥತತ್ತ್ವವಾದ ಬ್ರಹ್ಮವನ್ನರಿತ ಮೇಲೆ ಈತನ ಲಾಲಸೆಯೂ ಹೊರಟುಹೋಗುತ್ತದೆ.

**ವಿವರಣೆ :** ಆಹಾರವನ್ನು ತ್ಯಜಿಸಿದರೆ ದೇಹಾಧಾರಿಯಾದ ಮೂರ್ಖನಿಗೂ ವಿಷಯಭೋಗಸಾಮರ್ಥ್ಯ ಹೋಗಿಬಿಡುತ್ತದೆ. ಆದರೆ ಲಾಲಸೆ–ಸುಖದ ಚಾಪಲ್ಯ ಉಳಿದುಕೊಂಡೇ ಇರುತ್ತದೆ. ಅವನು ಸ್ಥಿತಪ್ರಜ್ಞನಲ್ಲ. ವಿಷಯಚಾಪಲ್ಯ ಹೋಗಬೇಕು. ಬ್ರಹ್ಮಜ್ಞಾನಿಗೆ ಮಾತ್ರ ಆ ಚಾಪಲ್ಯ ಹೊರಟು ಹೋಗುತ್ತದೆ.

**ಯತತೋ ಹ್ಯಪಿ ಕೌಂತೇಯ ಪುರುಷಸ್ಯ ವಿಪಶ್ಚಿತಃ ।**
**ಇಂದ್ರಿಯಾಣಿ ಪ್ರಮಾಥೀನಿ ಹರಂತಿ ಪ್ರಸಭಂ ಮನಃ ॥ ೬೦**

ಏಕೆಂದರೆ, ಕೌಂತೇಯ, ಇಂದ್ರಿಯಗಳು ಮನುಷ್ಯನನ್ನು ಹಿಂಡಿ ಹಿಪ್ಪೆ ಮಾಡತಕ್ಕಂಥವು. ಪಂಡಿತನಾದವನು ಸಹ ಎಷ್ಟೇ ಪ್ರಯತ್ನಿಸಿದರೂ ಇಂದ್ರಿಯಗಳು ಅವನ ಮನಸ್ಸನ್ನು ಬಲಾತ್ಕಾರವಾಗಿ ಜಗ್ಗಿಕೊಂಡು ಹೋಗುತ್ತವೆ.

**ತಾನಿ ಸರ್ವಾಣಿ ಸಂಯಮ್ಯ ಯುಕ್ತ ಆಸೀತ ಮತ್ಪರಃ ।**
**ವಶೇ ಹಿ ಯಸ್ಯೇಂದ್ರಿಯಾಣಿ ತಸ್ಯ ಪ್ರಜ್ಞಾ ಪ್ರತಿಷ್ಠಿತಾ॥ ೬೧**

ಹೀಗಿರುವುದರಿಂದ, ಆ ಎಲ್ಲ ಇಂದ್ರಿಯಗಳನ್ನೂ ಬಿಗಿಯಾಗಿ ದಮನ ಮಾಡಿ, ಸಮಾಹಿತನಾಗಿ ಮತ್ಪರನಾಗಿರಬೇಕು. ಹೀಗೆ ಯಾವಾತನ

ಇಂದ್ರಿಯಗಳು ಅವನ ವಶದಲ್ಲಿರುತ್ತವೆಯೋ ಅವನ ಪ್ರಜ್ಞೆ ಸ್ಥಿರವಾಯಿತು ಎನ್ನಬೇಕು.

**ವಿವರಣೆ :** ಯುಕ್ತ = ಸಮಾಹಿತ, ಏಕಾಗ್ರಚಿತ್ತನೆಂದರ್ಥ. ಮತ್ಪರಃ = ಅಹಂ – ಪ್ರತ್ಯಗಾತ್ಮನಾದ ವಾಸುದೇವನು, ಪರಃ = ಶ್ರೇಷ್ಠನೆಂದು ಯಾರಿಗೆ ನಿರ್ಣಯುವಿದೆಯೋ ಅವನು. 'ಪ್ರತ್ಯಗಾತ್ಮನಿಗಿಂತ ನಾನು ಬೇರೆಯಲ್ಲವೆಂಬ ನಿಶ್ಚಯದಿಂದ ಇರಬೇಕು' ಎಂದರ್ಥ.

**ಧ್ಯಾಯತೋ ವಿಷಯಾನ್ ಪುಂಸಃ ಸಂಗಸ್ತೇಷೂಪಜಾಯತೇ ।**
**ಸಂಗಾತ್ ಸಂಜಾಯತೇ ಕಾಮಃ ಕಾಮಾತ್**
**ಕ್ರೋಧೋಽಭಿಜಾಯತೇ ॥** ೬೨

ವಿಷಯಗಳನ್ನು ಚಿಂತಿಸುತ್ತಿರುವ ಪುರುಷನಿಗೆ ಅವುಗಳಲ್ಲಿ ಆಸಕ್ತಿ ಹುಟ್ಟುತ್ತದೆ. ಈ ಆಸಕ್ತಿಯಿಂದ ಅವು ಬೇಕೆಂಬ ಬಯಕೆ ಹುಟ್ಟುತ್ತದೆ. ಈ ಬಯಕೆಯಿಂದ (ಬಯಕೆಗೆ ಅಡ್ಡಿಯಾಯಿತೆಂದರೆ) ಕ್ರೋಧ ಉಂಟಾಗುತ್ತದೆ.

**ಕ್ರೋಧಾದ್ ಭವತಿ ಸಂಮೋಹಃ ಸಂಮೋಹಾತ್ ಸ್ಮೃತಿವಿಭ್ರಮಃ ।**
**ಸ್ಮೃತಿಭ್ರಂಶಾದ್ ಬುದ್ಧಿನಾಶೋ ಬುದ್ಧಿನಾಶಾತ್ ಪ್ರಣಶ್ಯತಿ ॥** ೬೩

ಕ್ರೋಧದಿಂದ, ಇದು ಕಾರ್ಯವೇ – ಅಕಾರ್ಯವೇ ? ಎಂದು ವಿಚಾರ ಮಾಡುವ ವಿವೇಕವೇ ಹೋಗಿಬಿಡುತ್ತದೆ. ಇಂಥ ಅವಿವೇಕದಿಂದ (ಶಾಸ್ತ್ರೋಪದೇಶ ಗುರೂಪದೇಶಗಳ) ಸ್ಮರಣೆಗೆ ಭ್ರಂಶವಾಗುತ್ತದೆ. ಈ ಸ್ಮೃತಿಭ್ರಂಶದಿಂದ ಬುದ್ಧಿ ಕೆಟ್ಟುಹೋಗುತ್ತದೆ. ಬುದ್ಧಿ ಕೆಟ್ಟಮೇಲೆ ಆತನು ನಾಶವಾಗುತ್ತಾನೆ.

**ವಿವರಣೆ :** ಬುದ್ಧಿ ನೆಟ್ಟಗಿರುವವರೆಗೆ ಅವನು ಮನುಷ್ಯ. ಬುದ್ಧಿ ಕೆಟ್ಟಮೇಲೆ ಅವನು ನಾಶಹೊಂದಿದಂತೆಯೇ. ಯಾವ ಪುರುಷಾರ್ಥವೂ ಅವನಿಗೆ ಸಿದ್ಧಿಸುವುದಿಲ್ಲವೆಂದರ್ಥ.

**ರಾಗದ್ವೇಷವಿಯುಕ್ತೈಸ್ತು ವಿಷಯಾನಿಂದ್ರಿಯೈಶ್ಚರನ್ ।**
**ಆತ್ಮವಶ್ಯೈರ್ವಿಧೇಯಾತ್ಮಾ ಪ್ರಸಾದಮಧಿಗಚ್ಛತಿ ॥** ೬೪

ಆದರೆ ಯಾವಾತನು ಬುದ್ಧಿಯನ್ನು ಸ್ವಾಧೀನದಲ್ಲಿಟ್ಟುಕೊಂಡು, ರಾಗದ್ವೇಷಗಳಿಂದ ಬಿಡುಗಡೆಹೊಂದಿರುವ ಮತ್ತು ತನಗೆ ವಶವಾಗಿರುವ ಇಂದ್ರಿಯಗಳಿಂದ (ಬದುಕಿರುವುದಕ್ಕೆ ಅತ್ಯವಶ್ಯಕವಾದ) ಅನ್ನಪಾನಾದಿ

ವಿಷಯಗಳನ್ನು ಸೇವಿಸುತ್ತಿರುವನೋ ಅವನು ಮನಸ್ಸಿನ ಸ್ವಾಸ್ಥ್ಯವನ್ನು ಪಡೆಯುತ್ತಾನೆ.

**ಪ್ರಸಾದೇ ಸರ್ವದುಃಖಾನಾಂ ಹಾನಿರಸ್ಯೋಪಜಾಯತೇ ।**
**ಪ್ರಸನ್ನಚೇತಸೋ ಹ್ಯಾಶು ಬುದ್ಧಿಃ ಪರ್ಯವತಿಷ್ಠತೇ ॥ ೬೫**

ಚಿತ್ತಶುದ್ಧಿಯಾದಾಗ ಈತನ ಸಮಸ್ತ ದುಃಖಗಳೂ ನಷ್ಟವಾಗುತ್ತವೆ. ಏಕೆಂದರೆ, ಚಿತ್ತಶುದ್ಧಿಯಾದವನ ಬುದ್ಧಿಯು ಶೀಘ್ರವಾಗಿ ಆತ್ಮನಲ್ಲಿ ಸ್ಥಿರವಾಗಿ ನಿಲ್ಲುತ್ತದೆ.

**ಟಿಪ್ಪಣಿ :** ಮನಸ್ಸಿನ ಸ್ವಾಸ್ಥ್ಯವೆಂದರೆ ಚಿತ್ತಶುದ್ಧಿ. ಅದೇ ಮನಃಶಾಂತಿ.

**ನಾಸ್ತಿ ಬುದ್ಧಿರಯುಕ್ತಸ್ಯ ನ ಚಾಯುಕ್ತಸ್ಯ ಭಾವನಾ ।**
**ನ ಚಾಭಾವಯತಃ ಶಾಂತಿರಶಾಂತಸ್ಯ ಕುತಃ ಸುಖಮ್ ॥ ೬೬**

ಅಯುಕ್ತನಿಗೆ ಎಂದರೆ– ಯಾರ ಅಂತಃಕರಣವು ಸಮಾಧಾನಗೊಂಡಿಲ್ಲವೋ ಆತನಿಗೆ ಆತ್ಮವಿಷಯಕವಾದ ಬುದ್ಧಿಯು ಬರುವುದಿಲ್ಲ ಮತ್ತು ಆತನಿಗೆ ಆತ್ಮಜ್ಞಾನವನ್ನುಂಟುಮಾಡಿಕೊಳ್ಳಬೇಕೆಂಬ ತೀವ್ರವಾದ ಆಸಕ್ತಿಯೂ ಬರುವುದಿಲ್ಲ. ಇಂತಹ ಆತ್ಮಭಾವನೆಯಿಲ್ಲದವನಿಗೆ ಶಾಂತಿಯೂ ದೊರೆಯುವುದಿಲ್ಲ. ಚಿತ್ತಶಾಂತಿಯಿಲ್ಲದವನಿಗೆ ಸುಖವೆಲ್ಲಿಯದು ?

**ವಿವರಣೆ :** ವಿಷಯಗಳನ್ನು ಸೇವಿಸಬೇಕೆಂಬ ಹಂಬಲವು ತಪ್ಪಿ ಹೋಗುವುದೇ ಸುಖ. ವಿಷಯಸೇವನೆಯಿಂದ ದುಃಖವೇ ಹುಟ್ಟುತ್ತದೆ. ವಿಷಯಗಳನ್ನು ಸೇವಿಸಬೇಕೆಂಬ ಹಂಬಲಿಕೆ ಇರುವವರೆಗೆ ಸುಖದ ಗಂಧವೂ ಸುಳಿಯುವುದಿಲ್ಲ.

**ಇಂದ್ರಿಯಾಣಾಂ ಹಿ ಚರತಾಂ ಯನ್ಮನೋಽನುವಿಧೀಯತೇ ।**
**ತದಸ್ಯ ಹರತಿ ಪ್ರಜ್ಞಾಂ ವಾಯುರ್ನಾವಮಿವಾಂಭಸಿ ॥ ೬೭**

(ವಿಷಯಗಳನ್ನು ಅರಸುತ್ತ) ಹೊರಟ ಇಂದ್ರಿಯಗಳ ಬೆನ್ನುಹತ್ತಿ ಮನಸ್ಸು ಹೊರಟಿತೆಂದರೆ ಅದು, ನೀರಿನಲ್ಲಿ ಹೋಗುವ ದೋಣಿಯನ್ನು ಗಾಳಿಯು ಎತ್ತಲೋ ಸೆಳೆದುಬಿಡುವಂತೆ, ಈತನ ವಿವೇಕಪ್ರಜ್ಞೆಯನ್ನು ಸೆಳೆದುಕೊಂಡು ಹೋಗುತ್ತದೆ.

**ತಸ್ಮಾದ್ಯಸ್ಯ ಮಹಾಬಾಹೋ ನಿಗೃಹೀತಾನಿ ಸರ್ವಶಃ ।**
**ಇಂದ್ರಿಯಾಣೀಂದ್ರಿಯಾರ್ಥೇಭ್ಯಸ್ತಸ್ಯ ಪ್ರಜ್ಞಾ ಪ್ರತಿಷ್ಠಿತಾ॥ ೬೮**

ಆದ್ದರಿಂದ, ಮಹಾಬಾಹುವಾದ ಅರ್ಜುನ, ಯಾವಾತನು ಇಂದ್ರಿಯ ವಿಷಯಗಳಾದ ಶಬ್ದ, ಸ್ಪರ್ಶಾದಿಗಳಿಂದ ತನ್ನ ಇಂದ್ರಿಯಗಳನ್ನು ಸರ್ವ ಪ್ರಕಾರದಲ್ಲಿಯೂ ಜಗ್ಗಿಹಿಡಿಯುವನೋ ಅವನ ಬುದ್ಧಿಯು (ಆತ್ಮನಲ್ಲಿ) ಪ್ರತಿಷ್ಠಿತವಾಗಿ ನಿಲ್ಲುತ್ತದೆ.

**ಯಾ ನಿಶಾ ಸರ್ವಭೂತಾನಾಂ ತಸ್ಯಾಂ ಜಾಗರ್ತಿ ಸಂಯಮೀ ।**
**ಯಸ್ಯಾಂ ಜಾಗ್ರತಿ ಭೂತಾನಿ ಸಾ ನಿಶಾ ಪಶ್ಯತೋ ಮುನೇಃ ॥ ೬೯**

ಎಲ್ಲ ಪ್ರಾಣಿಗಳಿಗೆ ಯಾವುದು ರಾತ್ರಿಯಾಗಿರುತ್ತದೆಯೋ ಅದರಲ್ಲಿ, ಜಿತೇಂದ್ರಿಯನಾದ ಸ್ಥಿತಪ್ರಜ್ಞನು ಜಾಗ್ರತನಾಗಿರುತ್ತಾನೆ. ಎಲ್ಲ ಪ್ರಾಣಿಗಳು ಯಾವುದರಲ್ಲಿ ಜಾಗ್ರತವಾಗಿರುತ್ತವೆಯೋ ಅದು ಜ್ಞಾನಿಯಾದ ಮುನಿಗೆ ರಾತ್ರಿಯಾಗಿರುತ್ತದೆ.

**ವಿವರಣೆ :** ಇಲ್ಲಿ ಆಲಂಕಾರಿಕ ಭಾಷೆಯಿಂದ ಪರಮಾರ್ಥತತ್ತ್ವವನ್ನು ವರ್ಣಿಸಲಾಗಿದೆ. ಪರಮಾರ್ಥತತ್ತ್ವವೇ ಆತ್ಮ. ಅಜ್ಞಾನಿಗಳಿಗೆ ಆತ್ಮವಿಚಾರವು ರಾತ್ರಿ ಇದ್ದಂತೆ. ಬರಿಯ ಕತ್ತಲೆ. ಏನೂ ಕಾಣಿಸದು. ಆ ವಿಷಯದಲ್ಲಿ ಅವರು ನಿದ್ರಿಸುತ್ತಾರೆ. ಜ್ಞಾನಿಗಾದರೋ ಆತ್ಮವಿಚಾರವೆಲ್ಲವೂ ಗೋಚರಿಸುತ್ತದೆ. ಅವನಿಗೆ ಅದು ಹಗಲು. ಅದರಲ್ಲಿ ಜಾಗ್ರತನಾಗಿರುತ್ತಾನೆ. ಅವಿದ್ಯಾಕಲ್ಪಿತವಾದ ಲೋಕವ್ಯವಹಾರವು ಜನರಿಗೆ ಹಗಲಾಗಿರುತ್ತದೆ. ಅವರು ಎಚ್ಚರಿದ್ದು ವ್ಯವಹರಿಸುತ್ತಾರೆ. ಜ್ಞಾನಿಗಾದರೋ ಈ ವ್ಯವಹಾರವು ಅವಿದ್ಯಾಕಲ್ಪಿತ; ಮಿಥ್ಯೆ. ಇದೆಲ್ಲವೂ ಅವನಿಗೆ ರಾತ್ರಿ ಇದ್ದಂತೆ. ಕನಸಿನಂತೆ ಈ ವ್ಯವಹಾರವು ಇರುತ್ತದೆ.

**ಆಪೂರ್ಯಮಾಣಮಚಲಪ್ರತಿಷ್ಠಂ**
**ಸಮುದ್ರಮಾಪಃ ಪ್ರವಿಶಂತಿ ಯದ್ವತ್ ।**
**ತದ್ವತ್ ಕಾಮಾ ಯಂ ಪ್ರವಿಶಂತಿ ಸರ್ವೇ**
**ಸ ಶಾಂತಿಮಾಪ್ನೋತಿ ನ ಕಾಮಕಾಮೀ ॥ ೭೦**

ನದೀಜಲಗಳು ಎಲ್ಲೆಡೆಯಿಂದಲೂ ತುಂಬುತ್ತ ಪ್ರವೇಶಿಸಿದರೂ ಸಮುದ್ರವು ಯಾವ ವಿಕಾರವನ್ನೂ ಹೊಂದದೆ ಒಂದೇ ರೀತಿಯಲ್ಲಿ ಅಚಲ ಪ್ರತಿಷ್ಠವಾಗಿರುತ್ತದೆ. ಹಾಗೆ ಎಲ್ಲ ಕಾಮನೆಗಳು ನುಗ್ಗಿ ಬಂದರೂ ಯಾವಾತನಲ್ಲಿ ನದಿಗಳಂತೆ ತಾವೇ ಲಯಹೊಂದುತ್ತವೆಯೋ (ವಿಷಯ ಸಾಂನಿಧ್ಯದಲ್ಲಿಯೂ) ಯಾವಾತನು ವಿಕಾರಗೊಳ್ಳದೆ ಅಚಲಪ್ರತಿಷ್ಠ ನಾಗಿರುವನೋ ಅವನು ಶಾಂತಿಯೆಂಬ ಮೋಕ್ಷವನ್ನು ಪಡೆಯುವನು.

ಕಾಮಿತಾರ್ಥಗಳನ್ನು ಬಯಸುವ ಕಾಮಕಾಮಿಯು ಪಡೆಯಲಾರನು.

**ವಿಹಾಯ ಕಾಮಾನ್ ಯಃ ಸರ್ವಾನ್ ಪುಮಾಂಶ್ಚರತಿ ನಿಃಸ್ಪೃಹಃ ।**
**ನಿರ್ಮಮೋ ನಿರಹಂಕಾರಃ ಸ ಶಾಂತಿಮಧಿಗಚ್ಛತಿ ॥ ೭೧**

ಯಾವ ಪುರುಷನು ಸಮಸ್ತಕಾಮನೆಗಳನ್ನೂ ತೊರೆದು, (ದೇಹದಲ್ಲಿಯೂ) ಸ್ಪೃಹೆಯಿಲ್ಲದವನಾಗಿ, ಇದು ನನ್ನದು ಎಂಬ ಅಭಿನಿವೇಶವಿಲ್ಲದೆ, ನಾನು ಜ್ಞಾನಿಯೆಂಬ ಅಹಂಕಾರವೂ ಇಲ್ಲದೆ ತಿರುಗಾಡಿಕೊಂಡಿರುತ್ತಾನೋ ಆ ಸ್ಥಿತಪ್ರಜ್ಞನು ಶಾಂತಿಯೆಂಬ (ಸರ್ವಸಂಸಾರದುಃಖಶಮನರೂಪವಾದ) ನಿರ್ವಾಣವನ್ನು ಪಡೆಯುತ್ತಾನೆ.

**ವಿವರಣೆ :** 'ಬ್ರಹ್ಮವಿದ್ ಬ್ರಹ್ಮೈವ ಭವತಿ' ಎಂಬ ಶ್ರುತಿವಾಕ್ಯದಂತೆ ಶರೀರವಿದ್ದರೂ ಜ್ಞಾನಿಯು ಬ್ರಹ್ಮಭಾವವನ್ನೈದುತ್ತಾನೆ.

**ಏಷಾ ಬ್ರಾಹ್ಮೀ ಸ್ಥಿತಿಃ ಪಾರ್ಥ ನೈನಾಂ ಪ್ರಾಪ್ಯ ವಿಮುಹ್ಯತಿ ।**
**ಸ್ಥಿತ್ವಾಸ್ಯಾಮಂತಕಾಲೇಽಪಿ ಬ್ರಹ್ಮನಿರ್ವಾಣಮೃಚ್ಛತಿ ॥ ೭೨**

**ಇತಿ ಶ್ರೀಮದ್ಭಗವದ್ಗೀತಾಸೂಪನಿಷತ್ಸು ಬ್ರಹ್ಮವಿದ್ಯಾಯಾಂ ಯೋಗಶಾಸ್ತ್ರೇ**
**ಸಾಂಖ್ಯಯೋಗೋ ನಾಮ ದ್ವಿತೀಯೋಽಧ್ಯಾಯಃ**

ಪಾರ್ಥ, ಇದು ಬ್ರಾಹ್ಮೀಸ್ಥಿತಿ (ಬ್ರಹ್ಮಸ್ವರೂಪದಲ್ಲಿಯೇ ಇರುವುದು). ಈ ಸ್ಥಿತಿಯನ್ನು ಪಡೆದ ಮೇಲೆ ಆತನು (ಅಜ್ಞಾನಜನ್ಯವಾದ) ಮೋಹವನ್ನೈದುವುದಿಲ್ಲ. ಕೊನೆಯ ವಯಸ್ಸಿನಲ್ಲಿ ಕೂಡ ಈ ಸ್ಥಿತಿಯಲ್ಲಿದ್ದರೆ ಬ್ರಹ್ಮಾನಂದವೆಂಬ ಮೋಕ್ಷವನ್ನು ಪಡೆದುಕೊಳ್ಳುತ್ತಾನೆ.

**ವಿವರಣೆ :** ಆತ್ಮಜ್ಞಾನವು ಕೊನೆಯ ವಯಸ್ಸಿನಲ್ಲಿ ಬಂದರೂ ಮುಕ್ತಿಯುಂಟು. "ಅಂತಕಾಲೇ ಚ ಮಾಮೇವ ಸ್ಮರನ್ ಮುಕ್ತ್ವಾ ಕಲೇವರಂ" (ಗೀ. ೮–೫) ಎಂದು ಮರಣಕಾಲಕ್ಕೆ ಸಂಬಂಧಿಸಿದಂತೆ ಹೇಳಿರುವುದು ಧ್ಯಾನವನ್ನು, ಜ್ಞಾನವನ್ನಲ್ಲ. ಜ್ಞಾನವು ಬಂದೊಡನೆಯೇ ಮುಕ್ತಿ.

**ಇಲ್ಲಿಗೆ ಶ್ರೀಮದ್ಭಗವದ್ಗೀತೆಯಲ್ಲಿ ಸಾಂಖ್ಯಯೋಗವೆಂಬ**
**ಎರಡನೆಯ ಅಧ್ಯಾಯವು ಸಮಾಪ್ತವಾಯಿತು.**

# ೨ನೆಯ ಅಧ್ಯಾಯದ ಸಾರ

ಯುದ್ಧ ಮಾಡುವುದಕ್ಕಾಗಿಯೇ ಸಿದ್ಧನಾಗಿ ಬಂದಿದ್ದ ಅರ್ಜುನನು ಯುದ್ಧ ಮಾಡುವುದಿಲ್ಲವೆಂದು ವಿಷಣ್ಣನಾಗಿ ಕುಳಿತನು. ಇದೊಂದು ಅಚ್ಚರಿಯ ಘಟನೆಯಾದರೂ ಲೋಕಸ್ವಭಾವವನ್ನರಿತ ಭಗವಂತನಿಗೆ ಅಚ್ಚರಿಯೆನಿಸ ಲಿಲ್ಲ. ಅವನು ಮಂದಹಾಸಬೀರುತ್ತ "ಅರ್ಜುನ, ಈ ಬಿಕ್ಕಟ್ಟಿನ ಸಮಯದಲ್ಲಿ ಈ ಬುದ್ಧಿ ನಿನಗೆ ಹೇಗೆ ಬಂದಿರಬಹುದು ? ಇದು ನಿನ್ನ ಹೃದಯದ ದೌರ್ಬಲ್ಯ. ಇದನ್ನು ಕಿತ್ತೆಸೆದು ಯುದ್ಧಕ್ಕೆ ನಿಲ್ಲು" ಎಂದು ಲೋಕಾಭಿರಾಮವಾಗಿ ಹೇಳಿದರೂ ಅರ್ಜುನನಿಗೆ ಒಪ್ಪಿಗೆಯಾಗಲಿಲ್ಲ. ಅವನು ದಿಕ್ಕುಗಾಣದೆ "ನಾನು ಧರ್ಮಸ್ವರೂಪವನ್ನು ನಿಶ್ಚಯಿಸಲಾರದೆ ದಿಗ್ಭ್ರಾಂತನಾಗಿದ್ದೇನೆ. ಶಿಷ್ಯಸ್ತೇಽಹಂ ಶಾಧಿ ಮಾಂ ತ್ವಾಂ ಪ್ರಪನ್ನಮ್" ಎಂದು ಹೇಳಿ ಶರಣಾಗತನಾದಾಗ ಶ್ರೀಕೃಷ್ಣನು ಪರಮಾರ್ಥತತ್ತ್ವವನ್ನು ಬೋಧಿಸ ಲಾರಂಭಿಸಿದನು.

ಅರ್ಜುನ, ಪರಮಾರ್ಥವಾದ ಆತ್ಮತತ್ತ್ವವನ್ನರಿಯದೆ ನಿನಗೆ ಈ ರೀತಿ ಶೋಕಮೋಹಗಳುಂಟಾಗಿವೆ. ಆತ್ಮನು ಶಾಶ್ವತನಾದವನು. ಅವನಿಗೆ ಸಾವು ಇಲ್ಲವೇ ಇಲ್ಲ. ಭೀಷ್ಮಾದಿಗಳ ಆತ್ಮವು ನಿತ್ಯವಾದದ್ದು. ಅದನ್ನು ನೀನು ಕೊಲ್ಲಲಾರೆ. ಯಾರಿಂದಲೂ ಕೊಲ್ಲಲು ಸಾಧ್ಯವಿಲ್ಲ. ಇನ್ನು ದೇಹವಾದರೋ ಹೇಗಾದರೂ ಅನಿತ್ಯವಾದದ್ದೇ. ಯಾರು ಕೊಲ್ಲದಿದ್ದರೂ ಅದಕ್ಕೆ ಸಾವು ಬರುತ್ತದೆ. ಆತ್ಮನಿಗೆ ದೇಹವು ಬಟ್ಟೆಯನ್ನು ತೊಟ್ಟ ಹಾಗೆ. ಹಳೆಯ ಬಟ್ಟೆಯನ್ನು ತೆಗೆದುಹಾಕಿ ಹೊಸದನ್ನು ಜನರು ತೊಡುತ್ತಾರಲ್ಲವೇ ? ಹಾಗೆ ಜೀರ್ಣವಾದ ಶರೀರವನ್ನು ತ್ಯಜಿಸಿ ಆತ್ಮನು ಹೊಸ ಶರೀರವನ್ನು ಧರಿಸುತ್ತಾನೆ. ಜನ್ಮಾಂತರ ಇದ್ದೇ ಇದೆ. ಇದಕ್ಕಾಗಿ ಶೋಕಿಸುವುದೇಕೆ ? ಹಳೆಯ ಅಂಗಿಯು ಹೋಯಿತೆಂದು ಯಾರಾದರೂ ದುಃಖಿಸುತ್ತಾರೆಯೆ ?

ಭೀಷ್ಮಾದಿಗಳು ನನಗೆ ಗುರುಹಿರಿಯರು, ಬಂಧುಮಿತ್ರರು. ನಾನು ಕೊಲ್ಲುವುದೂ ದೇಹವನ್ನೇ ಆದರೂ ಗುರುಹಿರಿಯರ ವಿಯೋಗವನ್ನೂ ಬಂಧುಮಿತ್ರರ ಅಗಲಿಕೆಯನ್ನೂ ಹೇಗೆ ಸಹಿಸಿಕೊಳ್ಳಲಿ ? – ಎಂದು ನೀನು ಕೇಳಬಹುದು. ಅದಕ್ಕೇನು ಮಾಡಲೂ ಆಗುವುದಿಲ್ಲ. ಅವರು ಯುದ್ಧ ಕ್ಕಾಗಿಯೇ ಎದುರು ಬಂದಾಗ ಹೋರಾಡುವುದು ನಿನ್ನ ಧರ್ಮ. ನೀನು ಕ್ಷತ್ರಿಯ. ಯಾವ ಸಮಯದಲ್ಲಿಯೂ ಸ್ವಧರ್ಮವನ್ನು ತ್ಯಜಿಸಕೂಡದು.

ಸ್ವಧರ್ಮವನ್ನು ಬಿಟ್ಟರೆ ಕೆಟ್ಟ ಹೆಸರು ಬರುತ್ತದೆಯಲ್ಲದೆ ಪಾಪವೂ ಗಂಟುಬೀಳುತ್ತದೆ. ಗುರುಹಿರಿಯರನ್ನು ಕೊಂದರೂ ಪಾಪ ಬರುತ್ತದೆ ಯೆಂದು ನೀನು ಶಂಕಿಸುವೆಯಾದರೆ ಹೀಗೆ ಮಾಡು. "ಈಶ್ವರನ ಪ್ರೀತ್ಯರ್ಥ ವಾಗಿ ನಾನು ವಿಹಿತಕರ್ಮಗಳನ್ನು ಮಾಡುತ್ತೇನೆ. ನನಗೆ ಫಲದ ಅಪೇಕ್ಷೆ ಯಾವುದೂ ಇಲ್ಲ. ಕ್ಷತ್ರಿಯನ ಕರ್ತವ್ಯವನ್ನು ಮಾತ್ರ ಆಚರಿಸುತ್ತಿದ್ದೇನೆ" ಎಂದು ದೃಢವಾಗಿ ಸಂಕಲ್ಪಿಸಿ ಯುದ್ಧ ಮಾಡು. ಫಲಾಪೇಕ್ಷೆಯಿಲ್ಲದೆ ವಿಹಿತಕರ್ಮವನ್ನಾಚರಿಸುವುದಕ್ಕೆ ನಿಷ್ಕಾಮಕರ್ಮಯೋಗವೆನ್ನುತ್ತಾರೆ. ಈ ಕರ್ಮಯೋಗಿಗೆ ಪಾಪದ ಲೇಪವಿಲ್ಲ. ಯಾರಿಗೆ ಸರ್ವತ್ರ ಸಮಭಾವ ವುಂಟಾಗುವುದೋ ಆತನು ಸಾಂಖ್ಯಬುದ್ಧಿಯನ್ನು ಪಡೆದು ಜನ್ಮಬಂಧದಿಂದ ಬಿಡುಗಡೆ ಹೊಂದಿ ಪರಮಾತ್ಮನಲ್ಲಿ ಸೇರಿಹೋಗುವನು. ಅವನಿಗೆ ವಿವೇಕಜನ್ಯವಾದ ಆತ್ಮಜ್ಞಾನವು ಹುಟ್ಟಿ, ಅವನು ಸ್ಥಿತಪ್ರಜ್ಞನಾಗುವನು.

ಯಾವಾತನ ಬುದ್ಧಿಯು ಸದಾ ಶಾಂತವಾಗಿ, ಪರಮಾತ್ಮನಲ್ಲಿ ದೃಢವಾಗಿ ನೆಲೆ ನಿಂತಿರುವುದೋ ಅವನು ಸ್ಥಿತಪ್ರಜ್ಞ. ಅವನು ಸುಖವನ್ನು ಬಯ ಸುವುದೂ ಇಲ್ಲ, ದುಃಖವನ್ನು ದ್ವೇಷಿಸುವುದೂ ಇಲ್ಲ. ಸುಖದುಃಖ ಗಳೆರಡೂ ಅವನಿಗೆ ಸಮಾನ. ಅವನಿಗೆ ಲೌಕಿಕವ್ಯವಹಾರದಲ್ಲಿ ಯಾವ ಆಸ್ಥೆಯೂ ಇರುವುದಿಲ್ಲ. ಅಹಂಕಾರ ಲೇಶವೂ ಇಲ್ಲದ ಈ ಸ್ಥಿತಪ್ರಜ್ಞನು ಮುಕ್ತಿಯನ್ನು ಪಡೆಯಲು ಅರ್ಹತೆಯನ್ನು ಗಳಿಸಿಕೊಂಡಿರುತ್ತಾನೆ. ಇವನಿಗೆ ಮತ್ತೆ ಶೋಕಮೋಹಗಳು ಹುಟ್ಟುವುದೇ ಇಲ್ಲ. ಇವನು ಮುಕ್ತನಾಗುವನು.

## ಅಧ್ಯಾಯ ೩

# ಕರ್ಮಯೋಗ

ಎರಡನೆಯ ಅಧ್ಯಾಯದಲ್ಲಿ ಸಾಂಖ್ಯಬುದ್ಧಿ, ಯೋಗಬುದ್ಧಿ — ಎಂಬ ಹೆಸರಿನಿಂದ ನಿವೃತ್ತಿಮಾರ್ಗವನ್ನೂ ಪ್ರವೃತ್ತಿಮಾರ್ಗವನ್ನೂ ಶ್ರೀಕೃಷ್ಣನು ಬೋಧಿಸಿದ್ದಾನೆ. ಸಾಂಖ್ಯಬುದ್ಧಿಯ ನಿವೃತ್ತಿಮಾರ್ಗವನ್ನವಲಂಬಿಸಿದವನಿಗೆ 'ಏಷಾ ಬ್ರಾಹ್ಮೀ ಸ್ಥಿತಿಃ ಪಾರ್ಥ......' ಎಂದು ಮೋಕ್ಷಫಲವನ್ನು ಹೇಳಿದ್ದಾನೆ. ಅರ್ಜುನನಿಗಾದರೋ ವಿಶೇಷವಾಗಿ 'ಕರ್ಮಣ್ಯೇವಾಧಿಕಾರಸ್ತೇ......' ಎಂದು ಪ್ರವೃತ್ತಿಮಾರ್ಗವನ್ನೇ ಅವಲಂಬಿಸುವಂತೆ ಬೋಧಿಸಿದ್ದಾನೆ. ಈ ಪ್ರವೃತ್ತಿ ಮಾರ್ಗದಲ್ಲಿ ಮೋಕ್ಷಫಲವನ್ನು ಹೇಳಲೇ ಇಲ್ಲ. ಪರಮಾಪ್ತನಾದ ಶ್ರೀಕೃಷ್ಣನು ತನಗೇಕೆ ಈ ಕರ್ಮಮಾರ್ಗವನ್ನು ಆಶ್ರಯಿಸುವಂತೆ ಹೇಳುತ್ತಿದ್ದಾನೆ — ಎಂದು ಅರ್ಜುನನು ಖಿನ್ನನಾಗಿ ಕೇಳುತ್ತಾನೆ –

**ಅರ್ಜುನ ಉವಾಚ –**

**ಜ್ಯಾಯಸೀ ಚೇತ್ ಕರ್ಮಣಸ್ತೇ ಮತಾ ಬುದ್ಧಿರ್ಜನಾರ್ದನ ।**
**ತತ್ ಕಿಂ ಕರ್ಮಣಿ ಘೋರೇ ಮಾಂ ನಿಯೋಜಯಸಿ ಕೇಶವ ॥ ೧**

ಜನಾರ್ದನ, ಕರ್ಮಕ್ಕಿಂತಲೂ ಜ್ಞಾನವೇ ಶ್ರೇಯಸ್ಕರವೆಂದು ನಿನ್ನ ಅಭಿಪ್ರಾಯವಾದರೆ, ಘೋರವಾದ ಈ ಯುದ್ಧಕರ್ಮದಲ್ಲಿ ನನ್ನನ್ನೇಕೆ ನೂಕುತ್ತಿದ್ದೀಯ ?

**ವ್ಯಾಮಿಶ್ರೇಣೇವ ವಾಕ್ಯೇನ ಬುದ್ಧಿಂ ಮೋಹಯಸೀವ ಮೇ ।**
**ತದೇಕಂ ವದ ನಿಶ್ಚಿತ್ಯ ಯೇನ ಶ್ರೇಯೋಽಹಮಾಪ್ನುಯಾಮ್ ॥ ೨**

ಕಲಬೆರಕೆಯಾದಂತಿರುವ ನಿನ್ನ ಮಾತಿನಿಂದ ನನ್ನ ಬುದ್ಧಿಯನ್ನು ಕಂಗೆಡಿಸುತ್ತಿದ್ದೀಯೋ ಎಂಬಂತೆ ಭಾಸವಾಗುತ್ತದೆ. ಆದ್ದರಿಂದ ನನಗೆ ಶ್ರೇಯಸ್ಸಾಗುವಂತೆ ಜ್ಞಾನಕರ್ಮಗಳಲ್ಲಿ ಒಂದನ್ನು ನಿಶ್ಚಯಿಸಿ ಹೇಳು.

**ವಿವರಣೆ :** ಜ್ಞಾನಮಾರ್ಗಕ್ಕೆ ಬೇಕಾದ ಚಿತ್ತಶುದ್ಧಿ, ವೈರಾಗ್ಯಾದಿಗಳು ಅರ್ಜುನನಿಗೆ ಪ್ರಾಪ್ತವಾಗಿಲ್ಲವೆಂದು ಆತನಿಗೆ ಕರ್ಮಯೋಗವನ್ನು ಮಾತ್ರ ಭಗವಂತನು ಬೋಧಿಸಿದ್ದಾನೆ. ಕರ್ಮಯೋಗವನ್ನು ಸರಿಯಾಗಿ ಆಚರಿಸುತ್ತಿದ್ದರೆ ಚಿತ್ತಶುದ್ಧಿಯಾಗಿ ಜ್ಞಾನಮಾರ್ಗಕ್ಕೆ ಅಧಿಕಾರ ಬರುತ್ತದೆ. ಅದರಿಂದ ಅರ್ಜುನನಿಗೆ

ಮುಂದೆ ಶ್ರೇಯಸ್ಸಾಗುತ್ತದೆಯೆಂದು ಭಗವಂತನ ಅಭಿಪ್ರಾಯ. ಇದನ್ನು ತಿಳಿಯಲಾರದೆ ಅರ್ಜುನನು ಪ್ರಶ್ನೆ ಮಾಡಿದ್ದಾನೆ.

**ಶ್ರೀಭಗವಾನುವಾಚ –**

**ಲೋಕೇऽಸ್ಮಿನ್ ದ್ವಿವಿಧಾ ನಿಷ್ಠಾ ಪುರಾ ಪ್ರೋಕ್ತಾ ಮಯಾऽನಘ ।**
**ಜ್ಞಾನಯೋಗೇನ ಸಾಂಖ್ಯಾನಾಂ ಕರ್ಮಯೋಗೇನ ಯೋಗಿನಾಮ್ ॥ ೩**

**ಶ್ರೀಕೃಷ್ಣನೆಂದನು :** ಪಾಪರಹಿತ–ಅರ್ಜುನ, ಈ ಲೋಕದಲ್ಲಿ ಎರಡು ಬಗೆಯ ನಿಷ್ಠೆಯನ್ನು ನಾನು ಹಿಂದೆಯೇ ಜಗತ್ತಿನ ಸೃಷ್ಟಿಕಾಲದಲ್ಲಿಯೇ ಹೇಳಿದ್ದೇನೆ. ಜ್ಞಾನಯೋಗದಿಂದ ಸಾಂಖ್ಯರಿಗೆ, ಕರ್ಮಯೋಗದಿಂದ ಯೋಗಿಗಳಿಗೆ.

**ವಿವರಣೆ :** ನಿಷ್ಠಾ = ಸ್ಥಿತಿ; ಸಾಧನತತ್ಪರತೆ; ಮಾರ್ಗ. ಸಾಂಖ್ಯರು = ಆತ್ಮ –ಅನಾತ್ಮ ಎಂಬ ವಿವೇಕವುಳ್ಳ ಜ್ಞಾನಿಗಳು (ಇವರು ಕಾಪಿಲ ಸಾಂಖ್ಯರಲ್ಲ). ಯೋಗಿಗಳು = ಕರ್ಮಯೋಗಿಗಳು. ಜ್ಞಾನನಿಷ್ಠೆ, ಕರ್ಮನಿಷ್ಠೆ – ಎಂದು ಎರಡು ನಿಷ್ಠೆಗಳುಂಟು. ಯಾರಿಗೆ ಯಾವ ನಿಷ್ಠೆಯಲ್ಲಿ ಅಧಿಕಾರ ಎಂಬುದನ್ನು ತಿಳಿಯುಬೇಕಾದದ್ದು ಮುಖ್ಯ.

**ನ ಕರ್ಮಣಾಮನಾರಂಭಾತ್ ನೈಷ್ಕರ್ಮ್ಯಂ ಪುರುಷೋऽಶ್ನುತೇ ।**
**ನ ಚ ಸಂನ್ಯಸನಾದೇವ ಸಿದ್ಧಿಂ ಸಮಧಿಗಚ್ಛತಿ ॥ ೪**

ಕರ್ಮಗಳ ಆರಂಭವನ್ನೇ ಬಿಟ್ಟರೆ ಪುರುಷನು ನೈಷ್ಕರ್ಮ್ಯವನ್ನು – ಎಂದರೆ ಕರ್ಮಶೂನ್ಯತಾರೂಪವಾದ ಜ್ಞಾನನಿಷ್ಠೆಯನ್ನು ಪಡೆದುಬಿಡುವುದಿಲ್ಲ ಅಥವಾ ಸಂನ್ಯಾಸದಿಂದ ಕರ್ಮತ್ಯಾಗ ಮಾಡಿದ ಮಾತ್ರಕ್ಕೆ ನೈಷ್ಕರ್ಮ್ಯಸಿದ್ಧಿಯು ಲಭಿಸುವುದೂ ಇಲ್ಲ.

**ವಿವರಣೆ :** ವಿಹಿತಕರ್ಮಗಳನ್ನು ಬಿಟ್ಟುಬಿಡುವುದರಿಂದ ಅಥವಾ ಸಂನ್ಯಾಸದ ಮೂಲಕ ಕರ್ಮತ್ಯಾಗ ಮಾಡುವುದರಿಂದ ಸಿದ್ಧಿಯು ದೊರೆಯುವುದಿಲ್ಲ. ಮೋಕ್ಷಸಿದ್ಧಿಗೆ ಜ್ಞಾನ ಒಂದೇ ಕಾರಣ. ಜ್ಞಾನವಿಲ್ಲದ ಸಂನ್ಯಾಸದಿಂದ ಮೋಕ್ಷ ದೊರೆಯದು. ಜ್ಞಾನವಿಲ್ಲದ ಕರ್ಮತ್ಯಾಗವು ನೈಷ್ಕರ್ಮ್ಯವಲ್ಲ.

**ನ ಹಿ ಕಶ್ಚಿತ್ ಕ್ಷಣಮಪಿ ಜಾತು ತಿಷ್ಠತ್ಯಕರ್ಮಕೃತ್ ।**
**ಕಾರ್ಯತೇ ಹ್ಯವಶಃ ಕರ್ಮ ಸರ್ವಃ ಪ್ರಕೃತಿಜೈರ್ಗುಣೈಃ ॥ ೫**

ಏಕೆಂದರೆ, ಯಾವುದಾದರೊಂದು ಕ್ರಿಯೆಯನ್ನು ಮಾಡದೆ ಒಬ್ಬನೂ ಒಂದು

ಕ್ಷಣಕಾಲವೂ ಇರಲಾರನು. ಅದೇಕೆಂದರೆ, ಪ್ರಕೃತಿಯಿಂದ ಹುಟ್ಟಿದ ಸತ್ತ್ವ ರಜಸ್ತಮೋಗುಣಗಳಿಂದ ಪ್ರತಿಯೊಬ್ಬ ಜೀವನೂ ತನ್ನ ವಶವಿಲ್ಲದೆ ಅಸ್ವತಂತ್ರನಾಗಿ ಕ್ರಿಯೆಯಲ್ಲಿ ತೊಡಗಿಸಲ್ಪಡುತ್ತಾನೆ.

**ವಿವರಣೆ :** ಗುಣಗಳಿಗೆ ಅಧೀನನಾಗಿ ಕರ್ಮದಲ್ಲಿ ತೊಡಗುವುದು ಅಜ್ಞನಿಗೆ ಮಾತ್ರ ಸಂಬಂಧಿಸುತ್ತದೆಯೆಂದು ತಿಳಿಯಬೇಕು. ಜ್ಞಾನಿಯು ಗುಣಗಳಿಗೆ ಅಧೀನನಲ್ಲ. 'ಗುಣೈರ್ಯೋ ನ ವಿಚಾಲ್ಯತೇ' (೧೪–೨೩) ಎಂದು ಭಗವಂತನು ಮುಂದೆ ಹೇಳುತ್ತಾನೆ. ಆದ್ದರಿಂದ ಕರ್ಮಯೋಗವು ಅಜ್ಞರಿಗೆ ಎಂದು ಸಿದ್ಧವಾಗುತ್ತದೆ.

**ಕರ್ಮೇಂದ್ರಿಯಾಣಿ ಸಂಯಮ್ಯ ಯ ಆಸ್ತೇ ಮನಸಾ ಸ್ಮರನ್ ।**
**ಇಂದ್ರಿಯಾರ್ಥಾನ್ ವಿಮೂಢಾತ್ಮಾ ಮಿಥ್ಯಾಚಾರಃ ಸ ಉಚ್ಯತೇ ॥ ೬**

(ಕೈ ಕಾಲು ಬಾಯಿ) ಮುಂತಾದ ಕರ್ಮೇಂದ್ರಿಯಗಳನ್ನು ಮಾತ್ರ ನಿಯಂತ್ರಿಸಿ, ಮನಸ್ಸಿನಲ್ಲಿ ಇಂದ್ರಿಯವಿಷಯಗಳನ್ನು ಯಾವನು ಚಿಂತಿಸುತ್ತಿರುವನೋ ಅವನು ಮಿಥ್ಯಾಚಾರ – ಪಾಪಿ – ದಾಂಭಿಕ.

**ವಿವರಣೆ :** ತನ್ನಲ್ಲಿ ಕರ್ಮವಾಸನೆಯಿದ್ದರೂ ಕರ್ಮವನ್ನು ಮಾಡದಿರುವುದು ಪಾಪಕರವಾದದ್ದು.

**ಯಸ್ತ್ವಿಂದ್ರಿಯಾಣಿ ಮನಸಾ ನಿಯಮ್ಯಾರಭತೇಽರ್ಜುನ ।**
**ಕರ್ಮೇಂದ್ರಿಯೈಃ ಕರ್ಮಯೋಗಮಸಕ್ತಃ ಸ ವಿಶಿಷ್ಯತೇ ॥ ೭**

ಆದರೆ, ಅರ್ಜುನ, ಯಾವಾತನು ಮನಸ್ಸಿನಿಂದ (ಮನಃಪೂರ್ವಕವಾಗಿ) ಇಂದ್ರಿಯಗಳನ್ನು ನಿಯಂತ್ರಿಸಿ, ಫಲದಲ್ಲಿ ಅನಾಸಕ್ತನಾಗಿ, ಕರ್ಮೇಂದ್ರಿಯಗಳಿಂದ ಕರ್ಮಯೋಗವನ್ನು ಆರಂಭಿಸುತ್ತಾನೋ ಅವನು (ಈ ಮಿಥ್ಯಾಚಾರನಿಗಿಂತ) ಶ್ರೇಷ್ಠನಾದವನು.

**ನಿಯತಂ ಕುರು ಕರ್ಮ ತ್ವಂ ಕರ್ಮ ಜ್ಯಾಯೋ ಹ್ಯಕರ್ಮಣಃ ।**
**ಶರೀರಯಾತ್ರಾಪಿ ಚ ತೇ ನ ಪ್ರಸಿಧ್ಯೇದಕರ್ಮಣಃ ॥ ೮**

(ನಿನ್ನ ಧರ್ಮದಿಂದ) ನಿಯಮಿತವಾದ ಕರ್ಮವನ್ನು ನೀನು ಮಾಡುತ್ತಿರು. ಏಕೆಂದರೆ, ಕರ್ಮವು ಅಕರ್ಮಕ್ಕಿಂತ ಮೇಲು. ಕರ್ಮವನ್ನು ಮಾಡದಿದ್ದರೆ ನಿನ್ನ ದೇಹಯಾತ್ರೆಯೂ ನಡೆಯಲಾರದು.

**ವಿವರಣೆ :** ಅಜ್ಞನಿಗೆ ಕರ್ಮಯೋಗವೇ ಉತ್ತಮ. ಆದರಿಂದ ಪ್ರಾಪ್ತ

ವಾಗುವ ಜ್ಞಾನನಿಷ್ಠೆ ಸರ್ವೋತ್ತಮ. ಜ್ಞಾನಿಗೆ ಕರ್ಮವಿಲ್ಲ. ಅವನ ಭಿಕ್ಷಾಟನೆ ಮೊದಲಾದದ್ದು ಕರ್ಮವೇ ಅಲ್ಲ. ಏಕೆಂದರೆ, ಜ್ಞಾನಿಗೆ ಕರ್ತೃತ್ವಬುದ್ಧಿಯೇ ಇರುವುದಿಲ್ಲ.

ಕರ್ಮವು ಬಂಧಕವಾದ್ದರಿಂದ ಅದನ್ನು ಮಾಡಬಾರದು–ಎಂಬ ಅಭಿಪ್ರಾಯ ಸರಿಯಲ್ಲ –

**ಯಜ್ಞಾರ್ಥಾತ್ ಕರ್ಮಣೋಽನ್ಯತ್ರ ಲೋಕೋಽಯಂ ಕರ್ಮಬಂಧನಃ।**
**ತದರ್ಥಂ ಕರ್ಮ ಕೌಂತೇಯ ಮುಕ್ತಸಂಗಃ ಸಮಾಚರ ॥ ೯**

ಕುಂತೀಪುತ್ರ–ಅರ್ಜುನ, ಯಜ್ಞಸ್ವರೂಪನಾದ ಈಶ್ವರನಿಗೋಸ್ಕರ ಮಾಡುವ ಕರ್ಮವನ್ನು ಬಿಟ್ಟು ಮಿಕ್ಕ ಕಡೆಯಲ್ಲಿ ಈ ಲೋಕವು ಕರ್ಮದ ಬಂಧನಕ್ಕೆ ಸಿಕ್ಕಿರುತ್ತದೆ. ಆದ್ದರಿಂದ ಈಶ್ವರಪ್ರೀತ್ಯರ್ಥವಾಗಿ ಫಲಾಸಕ್ತಿಯಿಲ್ಲದೆ ಕರ್ಮವನ್ನಾಚರಿಸು.

**ವಿವರಣೆ :** 'ಯಜ್ಞೋ ವೈ ವಿಷ್ಣುಃ' (ತೈ.ಸಂ. ೧–೭–೪) ಎಂದು ಶ್ರುತಿಯಿರುವುದರಿಂದ ಇಲ್ಲಿ ಯಜ್ಞನೆಂದರೆ ದೇವರೆಂದರ್ಥ. ಆತನು ಯಜ್ಞ ಸ್ವರೂಪನೂ ಆಗಿದ್ದಾನೆ. ಪ್ರಸಿದ್ಧವಾದ ಯಜ್ಞವಾದರೋ ಸ್ವತಃ ಕರ್ಮವಾದ್ದ ರಿಂದ 'ಯಜ್ಞಾರ್ಥವಾದ ಕರ್ಮ' ಎಂಬ ಅರ್ಥವು ಹೊಂದುವುದಿಲ್ಲ. ಈಶ್ವರಾರ್ಪಣಬುದ್ಧಿಯಿಂದ ಮಾಡುವ ನಿಷ್ಕಾಮಕರ್ಮವು ಬಂಧಕವಲ್ಲ.

**ಸಹಯಜ್ಞಾಃ ಪ್ರಜಾಃ ಸೃಷ್ಟ್ವಾ ಪುರೋವಾಚ ಪ್ರಜಾಪತಿಃ ।**
**ಅನೇನ ಪ್ರಸವಿಷ್ಯಧ್ವಮೇಷ ವೋಽಸ್ತ್ವಿಷ್ಟಕಾಮಧುಕ್ ॥ ೧೦**

ಪೂರ್ವದಲ್ಲಿ ಪ್ರಜಾಪತಿಯು ಯಜ್ಞದೊಡನೆ ಪ್ರಜೆಗಳನ್ನು ಸೃಷ್ಟಿಸಿ ಅವರಿಗೆ ಹೀಗೆ ಹೇಳಿದ್ದಾನೆ: "ಈ ಯಜ್ಞದಿಂದ ಅಭಿವೃದ್ಧಿಹೊಂದಿರಿ. ಇದು ನಿಮಗೆ ಇಷ್ಟಾರ್ಥವನ್ನು ಕೊಡುವ ಕಾಮಧೇನುವಾಗಿರಲಿ.

**ದೇವಾನ್ ಭಾವಯತಾನೇನ ತೇ ದೇವಾ ಭಾವಯಂತು ವಃ ।**
**ಪರಸ್ಪರಂ ಭಾವಯಂತಃ ಶ್ರೇಯಃ ಪರಮವಾಪ್ಸ್ಯಥ ॥ ೧೧**

"ಈ ಯಜ್ಞದಿಂದ ನೀವು ದೇವತೆಗಳನ್ನು ತೃಪ್ತಿಗೊಳಿಸಿರಿ. ಆ ದೇವತೆಗಳು ನಿಮ್ಮನ್ನು ಸಂವರ್ಧಿಸಲಿ. ಹೀಗೆ ಪರಸ್ಪರವಾಗಿ ಒಬ್ಬರನ್ನೊಬ್ಬರು ತೃಪ್ತಿ ಗೊಳಿಸುತ್ತ ಪರಮಶ್ರೇಯಸ್ಸನ್ನು ಪಡೆಯಿರಿ.

**ಇಷ್ಟಾನ್ ಭೋಗಾನ್ ಹಿ ವೋ ದೇವಾ ದಾಸ್ಯಂತೇ ಯಜ್ಞಭಾವಿತಾಃ ।**
**ತೈರ್ದತ್ತಾ ನ ಪ್ರದಾಯೈಭ್ಯೋ ಯೋ ಭುಂಕ್ತೇ ಸ್ತೇನ ಏವ ಸಃ ॥ ೧೨**

ಹೇಗೆಂದರೆ, ಯಜ್ಞದಿಂದ ತೃಪ್ತರಾದ ದೇವತೆಗಳು ನಿಮಗೆ ಬೇಕಾದ ಭೋಗಗಳನ್ನು ಕೊಡುವರು. ಅವರು ಕೊಟ್ಟಿರುವವುಗಳನ್ನು ಅವರಿಗೆ ಕೊಡದೆ ಯಾವನು ತಾನೊಬ್ಬನೇ ತಿನ್ನುವನೋ ಅವನು ಕಳ್ಳನೇ ಸರಿ."

**ವಿವರಣೆ :** ನಿತ್ಯವೂ ಮಾಡುವ ದೇವತಾರ್ಚನೆಯೂ ಯಜ್ಞವೇ. ಅದಕ್ಕೆ ದೇವಯಜ್ಞವೆಂದು ಹೆಸರು.

**ಯಜ್ಞಶಿಷ್ಟಾಶಿನಃ ಸಂತೋ ಮುಚ್ಯಂತೇ ಸರ್ವಕಿಲ್ಬಿಷೈಃ ।**
**ಭುಂಜತೇ ತೇ ತ್ವಘಂ ಪಾಪಾ ಯೇ ಪಚಂತ್ಯಾತ್ಮಕಾರಣಾತ್ ॥ ೧೩**

ಯಜ್ಞವಾದಮೇಲೆ ಅವಶಿಷ್ಟವಾದ್ದನ್ನು ಭುಂಜಿಸತಕ್ಕ ಸಜ್ಜನರು ಸಮಸ್ತ ಪಾಪಗಳಿಂದಲೂ ಬಿಡುಗಡೆ ಹೊಂದುತ್ತಾರೆ. ಯಾರು ತಮಗೋಸ್ಕರ ಮಾತ್ರ ಅಡಿಗೆ ಮಾಡಿಕೊಳ್ಳುತ್ತಾರೋ ಆ ಪಾಪಿಗಳು ಪಾಪವನ್ನೇ ಉಣ್ಣುತ್ತಾರೆ.

**ವಿವರಣೆ :** ದೇವಯಜ್ಞ, ಪಿತೃಯಜ್ಞ, ಮನುಷ್ಯಯಜ್ಞ, ಭೂತಯಜ್ಞ, ಬ್ರಹ್ಮ ಯಜ್ಞ – ಎಂಬ ಪಂಚಯಜ್ಞಗಳನ್ನು ಗೃಹಸ್ಥನು ಪ್ರತಿದಿನ ಮಾಡಬೇಕು. ಇದಾದ ಮೇಲೆ ಉಳಿದ ಅನ್ನಕ್ಕೆ ಅಮೃತವೆಂದು ಹೆಸರು.

**ಅನ್ನಾದ್ ಭವಂತಿ ಭೂತಾನಿ ಪರ್ಜನ್ಯಾದನ್ನಸಂಭವಃ ।**
**ಯಜ್ಞಾದ್ಭವತಿ ಪರ್ಜನ್ಯೋ ಯಜ್ಞಃ ಕರ್ಮಸಮುದ್ಭವಃ ॥ ೧೪**

ಅನ್ನದಿಂದ ಪ್ರಾಣಿಗಳು ಹುಟ್ಟುತ್ತವೆ. ಅನ್ನವು ಮೋಡದಿಂದ (ಮಳೆಯಿಂದ) ಹುಟ್ಟುತ್ತದೆ. ಯಜ್ಞದಿಂದ ಮೋಡವು ಜನಿಸುತ್ತದೆ. ಯಜ್ಞವು ಯಜಮಾನ–ಋತ್ವಿಜರ ಕರ್ಮದಿಂದ ಆಗತಕ್ಕದ್ದು.

**ವಿವರಣೆ :**

**ಅಗ್ನೌ ಪ್ರಾಸ್ತಾಹುತಿಃ ಸಮ್ಯಗಾದಿತ್ಯಮುಪತಿಷ್ಠತೇ ।**
**ಆದಿತ್ಯಾಜ್ಜಾಯತೇ ವೃಷ್ಟಿಃ ವೃಷ್ಟೇರನ್ನಂ ತತಃ ಪ್ರಜಾಃ ॥**

**(ಮನು. ೩–೭೬)**

ಎಂಬ ಶ್ಲೋಕದ ತಾತ್ಪರ್ಯವು ಇದೇ. ಯಜ್ಞವೇ ಕರ್ಮರೂಪವಾದ್ದರಿಂದ ಯಜ್ಞದಿಂದ ಹುಟ್ಟುವ ಅಪೂರ್ವವು ಕರ್ಮಜನ್ಯವೆಂದು ತಿಳಿಯಬೇಕು. ಇದು ಕರ್ಮಚಕ್ರ. ಇದರ ಮೂಲವು ಪರಮಾತ್ಮನೇ ಎಂದು ಮುಂದಿನ ಶ್ಲೋಕವು

ತಿಳಿಸುತ್ತದೆ.

**ಕರ್ಮ ಬ್ರಹ್ಮೋದ್ಭವಂ ವಿದ್ಧಿ ಬ್ರಹ್ಮಾಕ್ಷರಸಮುದ್ಭವಮ್ ।**
**ತಸ್ಮಾತ್ ಸರ್ವಗತಂ ಬ್ರಹ್ಮ ನಿತ್ಯಂ ಯಜ್ಞೇ ಪ್ರತಿಷ್ಠಿತಮ್ ॥ ೧೫**

ಕರ್ಮವು ವೇದದಿಂದ ಹುಟ್ಟಿದೆಯೆಂದು ತಿಳಿ. ವೇದವಾದರೋ ಶಾಶ್ವತನಾದ ಪರಮಾತ್ಮನಿಂದ ಆವಿರ್ಭವಿಸಿದ್ದು. ವೇದವು ಸರ್ವಗತವಾದರೂ ಯಜ್ಞದಲ್ಲಿ ಸದಾ ಸುಪ್ರತಿಷ್ಠಿತವಾಗಿದೆ.

**ವಿವರಣೆ :** ಸರ್ವಜ್ಞನಿಂದ ಆವಿರ್ಭವಿಸಿದ ವೇದವು ಸರ್ವಾರ್ಥವನ್ನೂ ತಿಳಿಸಬಲ್ಲುದಾದ್ದರಿಂದ ಸರ್ವಗತವಾಗಿದೆ. ಆದರೂ ಯಜ್ಞದಲ್ಲಿ ಮುಖ್ಯ ತಾತ್ಪರ್ಯವಿರುವುದರಿಂದ ಅದು ಯಜ್ಞದಲ್ಲಿ ಸುಪ್ರತಿಷ್ಠಿತ. ಅಧಿಕೃತನಾದವನು ವೇದೋಕ್ತಕರ್ಮವನ್ನು ಮಾಡಲೇಬೇಕು.

**ಏವಂ ಪ್ರವರ್ತಿತಂ ಚಕ್ರಂ ನಾನುವರ್ತಯತೀಹ ಯಃ ।**
**ಅಘಾಯುರಿಂದ್ರಿಯಾರಾಮೋ ಮೋಘಂ ಪಾರ್ಥ ಸ ಜೀವತಿ ॥ ೧೬**

ಅರ್ಜುನ, ಹೀಗೆ ಪ್ರವರ್ತಿತವಾದ ಕರ್ಮಚಕ್ರವನ್ನು ಯಾವನು ಅನುಸರಿಸುವುದಿಲ್ಲವೋ ಅಂತಹ ಇಂದ್ರಿಯಸುಖಾಸಕ್ತನ ಆಯುಸ್ಸು ಪಾಪ ಪೂರ್ಣವಾದದ್ದು. ಅವನು ವ್ಯರ್ಥವಾಗಿ ಜೀವಿಸಿರುತ್ತಾನೆ.

**ಯಸ್ತ್ವಾತ್ಮರತಿರೇವ ಸ್ಯಾದಾತ್ಮತೃಪ್ತಶ್ಚ ಮಾನವಃ ।**
**ಆತ್ಮನ್ಯೇವ ಚ ಸಂತುಷ್ಟಸ್ತಸ್ಯ ಕಾರ್ಯಂ ನ ವಿದ್ಯತೇ ॥ ೧೭**

ಇನ್ನು ಯಾವ ಮಾನವನು ಆತ್ಮನಲ್ಲಿಯೇ ರತಿಯುಳ್ಳವನಾಗಿ ಆತ್ಮನಲ್ಲಿಯೇ ತೃಪ್ತನಾಗಿ ಆತ್ಮನಲ್ಲಿಯೇ ಸಂತುಷ್ಟನಾಗಿರುವನೋ ಆ ಜ್ಞಾನನಿಷ್ಠನಿಗೆ ಮಾಡ ಬೇಕಾದ ಕರ್ಮವು ಯಾವುದೂ ಇಲ್ಲ.

**ನೈವ ತಸ್ಯ ಕೃತೇನಾರ್ಥೋ ನಾಕೃತೇನೇಹ ಕಶ್ಚನ ।**
**ನ ಚಾಸ್ಯ ಸರ್ವಭೂತೇಷು ಕಶ್ಚಿದರ್ಥವ್ಯಪಾಶ್ರಯಃ ॥ ೧೮**

ಆ ಜ್ಞಾನನಿಷ್ಠನಿಗೆ ಕರ್ಮವನ್ನಾಚರಿಸುವುದರಿಂದ ಯಾವ ಪ್ರಯೋಜನವೂ ಇಲ್ಲವೇ ಇಲ್ಲ. ಕರ್ಮವನ್ನು ಆಚರಿಸದೇ ಇದ್ದುದರಿಂದ ಇಲ್ಲಿ ಅವನಿಗೆ ಯಾವ ಪಾಪವೂ ಬರುವುದಿಲ್ಲ. ಜ್ಞಾನನಿಷ್ಠನಿಗೆ ಈ ಸಮಸ್ತ ಚರಾಚರವಸ್ತುಗಳಲ್ಲಿ ಪ್ರಯೋಜನಕ್ಕಾಗಿ ಆಶ್ರಯಿಸಬೇಕಾದ ಯಾವ ವಸ್ತುವೂ ಇಲ್ಲ.

**ವಿವರಣೆ :** ಜ್ಞಾನನಿಷ್ಠನಾದ ಸಾಂಖ್ಯಮಾರ್ಗದವನಿಗೆ ಯಾವ ವಿಹಿತ

ಕರ್ಮವೂ ಇಲ್ಲ. ಅಜ್ಞನಾದ ಕರ್ಮಯೋಗಿಗೆ ಕರ್ತವ್ಯಕರ್ಮ ಉಂಟು.

**ತಸ್ಮಾದಸಕ್ತಃ ಸತತಂ ಕಾರ್ಯಂ ಕರ್ಮ ಸಮಾಚರ ।**
**ಅಸಕ್ತೋ ಹ್ಯಾಚರನ್ ಕರ್ಮ ಪರಮಾಪ್ನೋತಿ ಪೂರುಷಃ ॥ ೧೯**

ಆದ್ದರಿಂದ ಫಲದಲ್ಲಿ ಅನಾಸಕ್ತನಾಗಿ ಕರ್ತವ್ಯಕರ್ಮವನ್ನು ಸತತವೂ ಆಚರಿಸುತ್ತಿರು. ಏಕೆಂದರೆ, ಫಲಾಸಕ್ತಿಯಿಲ್ಲದೆ (ಈಶ್ವರಾರ್ಪಣಬುದ್ಧಿಯಿಂದ) ಕರ್ಮವನ್ನಾಚರಿಸುವ ಮನುಷ್ಯನು (ಸತ್ತ್ವಶುದ್ಧಿಯ ಮೂಲಕ) ಮೋಕ್ಷವನ್ನೈದುತ್ತಾನೆ.

**ವಿವರಣೆ :** ಅರ್ಜುನನಿಗೆ ಸತ್ತ್ವಶುದ್ಧಿಯಾಗಿಲ್ಲವಾದ್ದರಿಂದ ಜ್ಞಾನನಿಷ್ಠೆಗೆ ಅರ್ಹತೆ ಬಂದಿಲ್ಲ. ಅವನು ಕರ್ಮಯೋಗದಿಂದ ಅರ್ಹತೆಯನ್ನು ಸಂಪಾದಿಸಿಕೊಳ್ಳಬೇಕೆಂದು ಭಗವಂತನ ಉಪದೇಶ.

**ಕರ್ಮಣೈವ ಹಿ ಸಂಸಿದ್ಧಿಮಾಸ್ಥಿತಾ ಜನಕಾದಯಃ ।**
**ಲೋಕಸಂಗ್ರಹಮೇವಾಪಿ ಸಂಪಶ್ಯನ್ ಕರ್ತುಮರ್ಹಸಿ ॥ ೨೦**

ಜನಕರಾಜನೇ ಮೊದಲಾದವರು ಕರ್ಮದೊಡನೆಯೇ ಸಿದ್ಧಿಯನ್ನು ಪಡೆದರಲ್ಲವೆ ? ಅಲ್ಲದೆ ಲೋಕಸಂಗ್ರಹವನ್ನು ಅನುಲಕ್ಷಿಸಿಯಾದರೂ ನೀನು ಕರ್ಮವನ್ನು ಮಾಡುತ್ತಿರುವುದು ಉಚಿತವಾಗಿದೆ.

**ವಿವರಣೆ :** ಜನಕ, ಅಶ್ವಪತಿ – ಮೊದಲಾದ ರಾಜರು ಸಮ್ಯಗ್ದರ್ಶನವನ್ನು ಪಡೆದ ಜ್ಞಾನಿಗಳಾಗಿದ್ದರೆ ? ಇಲ್ಲವೆ ? ಜ್ಞಾನಿಗಳಾಗಿದ್ದರೆ ಲೋಕಸಂಗ್ರಹಕ್ಕಾಗಿ ಕರ್ಮವನ್ನಾಚರಿಸುತ್ತಿದ್ದರು. ಹಾಗಲ್ಲದೆ ಅವರು ಜ್ಞಾನಿಗಳಲ್ಲವೆಂದಾದರೆ ಕರ್ಮದ್ವಾರಾ ಸತ್ತ್ವಶುದ್ಧಿ, ಜ್ಞಾನಪ್ರಾಪ್ತಿ, ಜ್ಞಾನನಿಷ್ಠೆ – ಈ ಕ್ರಮದಿಂದ ಸಿದ್ಧಿಯನ್ನು ಪಡೆದರು ಎಂದು ಅಭಿಪ್ರಾಯ. ಲೋಕಸಂಗ್ರಹ = ಜನರು ತಪ್ಪು ದಾರಿಗೆ ಹೋಗದಂತೆ ತಡೆಯುವುದು.

**ಯದ್ಯದಾಚರತಿ ಶ್ರೇಷ್ಠಸ್ತತ್ತದೇವೇತರೋ ಜನಃ ।**
**ಸ ಯತ್ ಪ್ರಮಾಣಂ ಕುರುತೇ ಲೋಕಸ್ತದನುವರ್ತತೇ ॥ ೨೧**

ಶ್ರೇಷ್ಠನಾದವನು ಯಾವಯಾವದನ್ನು ಆಚರಿಸುತ್ತಾನೋ ಅದನ್ನೇ ಇತರ ಜನರೂ ಆಚರಿಸುವರು. ಆತನು ಪ್ರಮಾಣವೆಂದು ಅಂಗೀಕರಿಸಿದ್ದನ್ನೇ ಲೋಕವು ಅನುಸರಿಸುತ್ತದೆ.

**ವಿವರಣೆ:** ಬಲ್ಲವನು ಆದರ್ಶಭೂತನಾಗಿ ಲೋಕಸಂಗ್ರಹಕ್ಕೋಸ್ಕರ ಕರ್ಮ

ವನ್ನು ಆಚರಿಸಬೇಕೆಂದು ಅಭಿಪ್ರಾಯ.

**ನ ಮೇ ಪಾರ್ಥಾಸ್ತಿ ಕರ್ತವ್ಯಂ ತ್ರಿಷು ಲೋಕೇಷು ಕಿಂಚನ ।**
**ನಾನವಾಪ್ತಮವಾಪ್ತವ್ಯಂ ವರ್ತ ಏವ ಚ ಕರ್ಮಣಿ ॥ ೨೨**

ಪಾರ್ಥ, ಮೂರು ಲೋಕಗಳಲ್ಲಿಯೂ ನಾನು ಮಾಡಬೇಕಾದ ಕರ್ತವ್ಯ ಕರ್ಮವು ಯಾವುದೂ ಇಲ್ಲ. ಏಕೆಂದರೆ, ನನಗೆ ಅಪ್ರಾಪ್ತವಾದ ಯಾವುದನ್ನೂ ಪಡೆಯಬೇಕಾಗಿಲ್ಲ. ಆದರೂ ನಾನು ಕರ್ಮದಲ್ಲಿ ತೊಡಗಿಯೇ ಇರುತ್ತೇನೆ!

**ಯದಿ ಹ್ಯಹಂ ನ ವರ್ತೇಯ ಜಾತು ಕರ್ಮಣ್ಯತಂದ್ರಿತಃ ।**
**ಮಮ ವರ್ತ್ಮಾನುವರ್ತಂತೇ ಮನುಷ್ಯಾಃ ಪಾರ್ಥ ಸರ್ವಶಃ ॥ ೨೩**

ಒಂದು ವೇಳೆ ನಾನು ಆಲಸ್ಯವಿಲ್ಲದೆ ಕರ್ಮದಲ್ಲಿ ತೊಡಗದೇ ಹೋದರೆ, ಪಾರ್ಥ, ಮನುಷ್ಯರು ಎಲ್ಲ ಪ್ರಕಾರದಲ್ಲಿಯೂ ನನ್ನ ದಾರಿಯನ್ನು ಹಿಡಿದು ಕರ್ಮಾಚರಣೆಯನ್ನು ಬಿಡಬಹುದು.

**ಉತ್ಸೀದೇಯುರಿಮೇ ಲೋಕಾಃ ನ ಕುರ್ಯಾಂ ಕರ್ಮ ಚೇದಹಮ್ ।**
**ಸಂಕರಸ್ಯ ಚ ಕರ್ತಾ ಸ್ಯಾಮುಪಹನ್ಯಾಮಿಮಾಃ ಪ್ರಜಾಃ ॥ ೨೪**

ನಾನು ಕರ್ಮ ಮಾಡದಿದ್ದರೆ ಈ ಲೋಕಗಳೆಲ್ಲವೂ ನಿರ್ಮೂಲವಾದಾವು. (ವರ್ಣಾಶ್ರಮಧರ್ಮಗಳ) ಸಾಂಕರ್ಯಕ್ಕೆ ಕಾರಣನಾದೇನು. ಅದರಿಂದ ಈ ಪ್ರಜೆಗಳನ್ನು ಹಾಳುಮಾಡಿದವನಾದೇನು!

**ಸಕ್ತಾಃ ಕರ್ಮಣ್ಯವಿದ್ವಾಂಸೋ ಯಥಾ ಕುರ್ವಂತಿ ಭಾರತ ।**
**ಕುರ್ಯಾದ್ವಿದ್ವಾನ್ ತಥಾಽಸಕ್ತಶ್ಚಿಕೀರ್ಷುರ್ಲೋಕಸಂಗ್ರಹಮ್ ॥ ೨೫**

ಆತ್ಮಜ್ಞಾನವಾಗದಿರುವ ಅಜ್ಞರು ಕರ್ಮದಲ್ಲಿ ಫಲಾಸಕ್ತರಾಗಿ ಹೇಗೆ ಕರ್ಮವನ್ನಾಚರಿಸುತ್ತಾರೋ, ಹಾಗೆ ಆತ್ಮಜ್ಞಾನಿಯಾದ ವಿದ್ವಾಂಸನೂ ಲೋಕಸಂಗ್ರಹಕ್ಕಾಗಿ ಫಲಾಸಕ್ತಿಯನ್ನು ತೊರೆದು ಕರ್ಮವನ್ನು ಮಾಡಬೇಕು.

**ನ ಬುದ್ಧಿಭೇದಂ ಜನಯೇದಜ್ಞಾನಾಂ ಕರ್ಮಸಂಗಿನಾಮ್ ।**
**ಜೋಷಯೇತ್ ಸರ್ವಕರ್ಮಾಣಿ ವಿದ್ವಾನ್ ಯುಕ್ತಃ ಸಮಾಚರನ್ ॥**

ಕರ್ಮದಲ್ಲಿ ಆಸಕ್ತಿಯುಳ್ಳ ಮೂಢಜನರಿಗೆ ಬುದ್ಧಿಭೇದವನ್ನು ಹುಟ್ಟಿಸಬಾರದು. ಜ್ಞಾನಿಯಾದವನು ಸಮಾಹಿತನಾಗಿ ಸರ್ವಕರ್ಮಗಳನ್ನು ಆಚರಿಸುತ್ತ ಮೂಢಜನರು ಕರ್ಮಗಳನ್ನಾಚರಿಸುವಂತೆ ನೋಡಿಕೊಳ್ಳಬೇಕು.

**ವಿವರಣೆ :** ಜ್ಞಾನಿಯು ಕರ್ಮಗಳನ್ನು ನಿಂದಿಸಿದರೆ ಅಥವಾ ಮಾಡದಿದ್ದರೆ,

ಮೂಢರೂ ಅವನನ್ನನುಸರಿಸಿ ಕರ್ಮತ್ಯಾಗ ಮಾಡುವರು. ಆದರಿಂದ ಅವರು ಪಾಪಿಗಳಾಗಿ ಕೆಟ್ಟುಹೋಗುವರು.

**ಪ್ರಕೃತೇಃ ಕ್ರಿಯಮಾಣಾನಿ ಗುಣೈಃ ಕರ್ಮಾಣಿ ಸರ್ವಶಃ ।**
**ಅಹಂಕಾರವಿಮೂಢಾತ್ಮಾ ಕರ್ತಾಹಮಿತಿ ಮನ್ಯತೇ ॥ ೨೭**

ಸರ್ವಪ್ರಕಾರದಲ್ಲಿಯೂ ಪ್ರಕೃತಿಯ ಸತ್ತ್ವರಜಸ್ತಮೋಗುಣಗಳು ಕರ್ಮಗಳನ್ನು ನಡೆಸುತ್ತವೆ. ಆದರೆ ಅಹಂಕಾರದಿಂದ ಮೂಢಬುದ್ಧಿಯಾದವನು 'ಈ ಕರ್ಮಗಳಿಗೆ ನಾನು ಕರ್ತ' ಎಂದು ತಿಳಿಯುತ್ತಾನೆ.

**ವಿವರಣೆ :** ಲೌಕಿಕಕರ್ಮವಾಗಲಿ ಶಾಸ್ತ್ರೀಯಕರ್ಮವಾಗಲಿ ನಡೆಯುವುದು ಪ್ರಕೃತಿಯ ಗುಣತ್ರಯದಿಂದ, ಆತ್ಮನಿಂದಲ್ಲ. ಮೂಢನು ಪ್ರಕೃತಿಸಂಘಾತವಾದ ದೇಹವನ್ನೇ ಆತ್ಮವೆಂದು ತಿಳಿದು ಕರ್ಮದ ಕರ್ತನು ತಾನೆಂದು ಭ್ರಮಿಸುತ್ತಾನೆ. ದೇಹವನ್ನು 'ಅಹಂ' ಎಂದು ತಿಳಿಯುವುದು ಅಹಂಕಾರ.

ಅಜ್ಞಾನಿಗಳು ತಾವು ಕರ್ತೃಗಳೆಂದು ತಿಳಿದು ಕರ್ಮದಲ್ಲಿ ತೊಡಗುತ್ತಾರೆ. ಫಲದಲ್ಲಿ ಅವರಿಗೆ ಆಸಕ್ತಿ ಇರುತ್ತದೆ. ಲೋಕಸಂಗ್ರಹಕ್ಕಾಗಿ ಜ್ಞಾನಿಯು ಮಾಡುವ ಕರ್ಮವು ಈ ಜಾತಿಯದಲ್ಲ. ತಾನು ಕರ್ತೃವೆಂಬ ಬುದ್ಧಿಯೇ ಇಲ್ಲವಾದ್ದರಿಂದ ಜ್ಞಾನಿಯ ದೃಷ್ಟಿಯಲ್ಲಿ ಅದು ಆತನ ಕರ್ಮವೇ ಅಲ್ಲ.

**ತತ್ತ್ವವಿತ್ತು ಮಹಾಬಾಹೋ ಗುಣಕರ್ಮವಿಭಾಗಯೋಃ ।**
**ಗುಣಾ ಗುಣೇಷು ವರ್ತಂತ ಇತಿ ಮತ್ವಾ ನ ಸಜ್ಜತೇ ॥ ೨೮**

ಮಹಾಬಾಹು–ಅರ್ಜುನ, ಗುಣವಿಭಾಗವನ್ನೂ ಕರ್ಮವಿಭಾಗವನ್ನೂ ಅರಿತ ತತ್ತ್ವಜ್ಞಾನಿಯಾದರೋ (ಇಂದ್ರಿಯರೂಪದಲ್ಲಿ ಪರಿಣತವಾದ) ಗುಣಗಳು (ವಿಷಯರೂಪದಲ್ಲಿ ಪರಿಣತವಾದ) ಗುಣಗಳಲ್ಲಿ ಪ್ರವರ್ತಿಸುತ್ತಿವೆಯೆಂದು ತಿಳಿದು ಅವುಗಳಲ್ಲಿ ಆಸಕ್ತನಾಗುವುದಿಲ್ಲ.

**ವಿವರಣೆ :** ಜ್ಞಾನಿಯು ಆತ್ಮನಾದ ತನಗೆ ಅವುಗಳ ಸಂಬಂಧವಿಲ್ಲವೆಂದು ತಿಳಿದು ತಟಸ್ಥನಾಗಿರುತ್ತಾನೆ.

**ಪ್ರಕೃತೇರ್ಗುಣಸಂಮೂಢಾಃ ಸಜ್ಜಂತೇ ಗುಣಕರ್ಮಸು ।**
**ತಾನಕೃತ್ಸ್ನವಿದೋ ಮಂದಾನ್ ಕೃತ್ಸ್ನವಿನ್ನ ವಿಚಾಲಯೇತ್ ॥ ೨೯**

ಪ್ರಕೃತಿಯ ಗುಣಗಳಿಂದ ಮೂಢರಾದ ಅಜ್ಞರು, ಗುಣಗಳು ನಡೆಸುವ ಕರ್ಮಗಳಲ್ಲಿ ಆಸಕ್ತಿಯನ್ನು ತಳೆದಿರುತ್ತಾರೆ. ಪೂರ್ಣಜ್ಞಾನಿಗಳಾದವರು

ಅಲ್ಪಜ್ಞರಾದ ಆ ಮಂದಮತಿಗಳನ್ನು ಅಲುಗಾಡಿಸಿ ಬುದ್ಧಿಭೇದವನ್ನುಂಟು ಮಾಡಬಾರದು (ಕರ್ಮತ್ಯಾಗಿಗಳನ್ನಾಗಿ ಮಾಡಬಾರದು).

**ಮಯಿ ಸರ್ವಾಣಿ ಕರ್ಮಾಣಿ ಸಂನ್ಯಸ್ಯಾಧ್ಯಾತ್ಮಚೇತಸಾ ।**
**ನಿರಾಶೀರ್ನಿರ್ಮಮೋ ಭೂತ್ವಾ ಯುಧ್ಯಸ್ವ ವಿಗತಜ್ವರಃ ॥ ೩೦**

ಪರಮೇಶ್ವರನಾದ ನನ್ನಲ್ಲಿ ಸರ್ವಕರ್ಮಗಳನ್ನೂ ವಿವೇಕಬುದ್ಧಿಯಿಂದ ಸಮರ್ಪಿಸಿ, ಆಸೆಯನ್ನು ತೊರೆದು, ನನ್ನದೆಂಬ ಭಾವನೆಯನ್ನು ತಳ್ಳಿಹಾಕಿ, ನಿಶ್ಚಿಂತನಾಗಿ ಯುದ್ಧ ಮಾಡು.

**ವಿವರಣೆ :** ವಿವೇಕಬುದ್ಧಿಯೆಂದರೆ ಪ್ರಕೃತದಲ್ಲಿ ಅರ್ಜುನನಿಗೆ 'ನಾನು ಕರ್ಮಗಳನ್ನು ಮಾಡುವವನು. ಸೇವಕನಂತೆ ಈಶ್ವರನಿಗೋಸ್ಕರ ಮಾಡುತ್ತಿದ್ದೇನೆ' ಎಂಬ ಬುದ್ಧಿ. ಜ್ಞಾನಿಗೆ 'ನಾನು ಕರ್ತನಲ್ಲ. ನಿಃಸಂಗನಾದ ಆತ್ಮನೇ ನಾನು' ಎಂಬುದು ವಿವೇಕಬುದ್ಧಿ.

**ಯೇ ಮೇ ಮತಮಿದಂ ನಿತ್ಯಮನುತಿಷ್ಠಂತಿ ಮಾನವಾಃ ।**
**ಶ್ರದ್ಧಾವಂತೋಽನಸೂಯಂತೋ ಮುಚ್ಯಂತೇ ತೇಽಪಿ ಕರ್ಮಭಿಃ ॥ ೩೧**

ಯಾರು ಈ ನನ್ನ ಮತವನ್ನು ನಿತ್ಯವೂ ಅನುಷ್ಠಾನಮಾಡುವರೋ ಪರಮ ಗುರುವಾದ ನನ್ನಲ್ಲಿ ಅಸೂಯೆಯನ್ನಿಡದೆ ಶ್ರದ್ಧಾವಂತರಾಗಿರುವರೋ ಅವರೂ ಸಹ ಕರ್ಮಬಂಧನಗಳಿಂದ ಬಿಡುಗಡೆ ಹೊಂದುವರು.

**ವಿವರಣೆ :** ಜ್ಞಾನನಿಷ್ಠರಿಗೆ ಮುಕ್ತಿ ಇದ್ದೇ ಇದೆ. ಕರ್ಮನಿಷ್ಠರಿಗೂ ಸಹ ಚಿತ್ತಶುದ್ಧಿದ್ವಾರಾ ಮುಕ್ತಿ ಇದ್ದೇ ಇದೆ – ಎಂದು ಸೂಚಿಸುವುದಕ್ಕಾಗಿ 'ತೇಽಪಿ = ಅವರೂ ಸಹ' ಎಂದು ಹೇಳಿದೆ.

**ಯೇ ತ್ವೇತದಭ್ಯಸೂಯಂತೋ ನಾನುತಿಷ್ಠಂತಿ ಮೇ ಮತಮ್ ।**
**ಸರ್ವಜ್ಞಾನವಿಮೂಢಾನ್ ತಾನ್ ವಿದ್ಧಿ ನಷ್ಟಾನಚೇತಸಃ ॥ ೩೨**

ಇನ್ನು ಯಾರು ಈ ನನ್ನ ಮತವನ್ನು ಅಸೂಯೆಯಿಂದ ನಿಂದಿಸುತ್ತ ಆಚರಣೆಗೆ ತರುವುದಿಲ್ಲವೋ ಅವರು ಯಾವ ಜ್ಞಾನವೂ ಇಲ್ಲದ ಮೂಢರು. ಬುದ್ಧಿಹೀನರು. ಅವರು ಹಾಳಾಗಿಹೋದರೆಂದು ತಿಳಿ.

ಅವರು ಏಕೆ ಹಾಗೆ ಧರ್ಮಚ್ಯುತರಾಗಿ ವರ್ತಿಸುತ್ತಾರೆಂದರೆ–

**ಸದೃಶಂ ಚೇಷ್ಟತೇ ಸ್ವಸ್ಯಾಃ ಪ್ರಕೃತೇರ್ಜ್ಞಾನವಾನಪಿ ।**
**ಪ್ರಕೃತಿಂ ಯಾಂತಿ ಭೂತಾನಿ ನಿಗ್ರಹಃ ಕಿಂ ಕರಿಷ್ಯತಿ ॥ ೩೩**

ತಿಳಿದವನೂ ಸಹ ತನ್ನ ಜನ್ಮಾಂತರಸಂಸ್ಕಾರಕ್ಕೆ ಅನುಗುಣವಾಗಿ ನಡೆಯುತ್ತಾನೆ. ಪ್ರಾಣಿಮಾತ್ರಗಳೂ ತಮ್ಮ ತಮ್ಮ ಸಂಸ್ಕಾರವನ್ನನುಸರಿಸಿ ಹೋಗುತ್ತವೆ. ಹೀಗಿರುವಾಗ ಇದನ್ನು ಮಾಡಬೇಡವೆಂಬ ನಿಷೇಧವು ಏನು ಮಾಡೀತು ?

ಎಲ್ಲರೂ ತಮ್ಮ ಸಂಸ್ಕಾರವಿದ್ದಂತೆ ನಡೆಯುವುದಾದರೆ ಶಾಸ್ತ್ರವು ವ್ಯರ್ಥವಾಗುವುದಲ್ಲ! – ಎಂಬ ಶಂಕೆಗೆ ಉತ್ತರವಿದು –

**ಇಂದ್ರಿಯಸ್ಯೇಂದ್ರಿಯಸ್ಯಾರ್ಥೇ ರಾಗದ್ವೇಷೌ ವ್ಯವಸ್ಥಿತೌ ।**
**ತಯೋರ್ನ ವಶಮಾಗಚ್ಛೇತ್ ತೌ ಹ್ಯಸ್ಯ ಪರಿಪಂಥಿನೌ ॥ ೩೪**

ಪ್ರತಿಯೊಂದು ಇಂದ್ರಿಯಕ್ಕೆ ಗೋಚರವಾಗುವ ಶಬ್ದಾದಿವಿಷಯದಲ್ಲಿ ರಾಗದ್ವೇಷಗಳು—ಇಷ್ಟದಲ್ಲಿ ರಾಗ, ಅನಿಷ್ಟದಲ್ಲಿ ದ್ವೇಷವೆಂದು—ವ್ಯವಸ್ಥಿತ ವಾಗಿರುತ್ತವೆ. ಧೀರನು ಅವುಗಳಿಗೆ ವಶನಾಗಬಾರದು. ರಾಗದ್ವೇಷಗಳು ಈತನ ಶತ್ರುಗಳು.

**ವಿವರಣೆ :** ಹಿಂದಿನ ಶ್ಲೋಕದಲ್ಲಿರುವ ನಿಗ್ರಹಶಬ್ದಕ್ಕೆ ನಿಷೇಧ, ಒತ್ತಾಯ – ಎಂದರ್ಥ; ಸಂಯಮವೆಂದಲ್ಲ. ಸಂಸ್ಕಾರವು ಬಲಶಾಲಿಯೆಂದು ತೋರಿ ಸುವುದಕ್ಕಾಗಿ 'ನಿಗ್ರಹಃ ಕಿಂ ಕರಿಷ್ಯತಿ' ಎಂಬ ಮಾತು ಹೊರಟಿದೆ. ಶ್ರೇಯಸ್ಕಾಮನಾದ ಧೀರನು ತನ್ನ ಪೌರುಷದಿಂದ ಕೆಟ್ಟ ಸಂಸ್ಕಾರವನ್ನು ಗೆಲ್ಲಬೇಕು. ತುಂಟಕುದುರೆಗಳನ್ನು ಸಾರಥಿಯು ಬಿಗಿಹಿಡಿದು ಜಗ್ಗುವಂತೆ, ಧೀರನಾದವನು ಇಂದ್ರಿಯಗಳನ್ನು ಬಿಗಿಹಿಡಿದು ರಾಗದ್ವೇಷಗಳನ್ನು ಗೆಲ್ಲಬೇಕು. ಇದೇ ಪುರುಷಕಾರ. ಈ ಪುರುಷಪ್ರಯತ್ನದಿಂದ ಬಲಶಾಲಿಯಾದ ಹಿಂದಿನ ಸಂಸ್ಕಾರವನ್ನು ತಡೆಯುವುದು ಸಾಧ್ಯ. ಆಗ ಮನುಷ್ಯನು ಶಾಸ್ತ್ರದೃಷ್ಟಿ ಯುಳ್ಳವನಾಗುತ್ತಾನೆ – ಎಂದು ಅಭಿಪ್ರಾಯ.

**ಶ್ರೇಯಾನ್ ಸ್ವಧರ್ಮೋ ವಿಗುಣಃ ಪರಧರ್ಮಾತ್ ಸ್ವನುಷ್ಠಿತಾತ್ ।**
**ಸ್ವಧರ್ಮೇ ನಿಧನಂ ಶ್ರೇಯಃ ಪರಧರ್ಮೋ ಭಯಾವಹಃ ॥ ೩೫**

ಸ್ವಧರ್ಮವು ಅಧಿಕಗುಣರಹಿತವಾದರೂ ಚೆನ್ನಾಗಿ ಅನುಷ್ಠಾನ ಮಾಡ ಲಾಗುವ ಪರಧರ್ಮಕ್ಕಿಂತ ಶ್ರೇಯಸ್ಕರ. ಸ್ವಧರ್ಮದಲ್ಲಿ ಮರಣವಾದರೂ ಲೇಸು, ಪರಧರ್ಮವು ಭಯಾವಹವಾದದ್ದು. (ನರಕವೇ ಮುಂತಾದ ಭಯವನ್ನು ತಂದೊಡ್ಡತಕ್ಕದ್ದು.)

**ವಿವರಣೆ :** ಸ್ವಧರ್ಮವೆಂದರೆ ವರ್ಣಾಶ್ರಮವಿಹಿತವಾದ ಧರ್ಮ. ಗುಣ

ಕರ್ಮ ವಿಭಾಗವನ್ನನುಸರಿಸಿ ಚಾತುರ್ವರ್ಣ್ಯದ ವ್ಯವಸ್ಥೆಯನ್ನೂ ಆಶ್ರಮ ವ್ಯವಸ್ಥೆಯನ್ನೂ ಶಾಸ್ತ್ರಕಾರರು ಸಮಾಜದ ಹಿತಕ್ಕಾಗಿ ಪ್ರಚಾರಗೊಳಿಸಿದರು. ಹೊತ್ತುಬಂದಾಗ ನೆವತೆಗೆದು ವಿಹಿತವಾದ ಧರ್ಮವನ್ನು ಬಿಡಕೂಡದೆಂದು ಅಭಿಪ್ರಾಯ.

**ಅರ್ಜುನ ಉವಾಚ –**

**ಅಥ ಕೇನ ಪ್ರಯುಕ್ತೋಽಯಂ ಪಾಪಂ ಚರತಿ ಪೂರುಷಃ ।**
**ಅನಿಚ್ಛನ್ನಪಿ ವಾರ್ಷ್ಣೇಯ ಬಲಾದಿವ ನಿಯೋಜಿತಃ ॥ ೩೬**

**ಅರ್ಜುನನು ಇಂತೆಂದನು :** ಶ್ರೀಕೃಷ್ಣ, ಹಾಗಾದರೆ ಮನುಷ್ಯನು ಯಾವುದರಿಂದ ಪ್ರೇರಿತನಾಗಿ ಪಾಪಕರ್ಮವನ್ನಾಚರಿಸುತ್ತಾನೆ? ತನಗೆ ಇಚ್ಛೆಯಿಲ್ಲದಿದ್ದರೂ ಬಲಾತ್ಕಾರವಾಗಿ ತಳ್ಳಲ್ಪಟ್ಟನೋ ಎಂಬಂತೆ ಪಾಪ ಕರ್ಮವನ್ನು ಆಚರಿಸುವುದೇಕೆ ?

**ಶ್ರೀಭಗವಾನುವಾಚ –**

**ಕಾಮ ಏಷ ಕ್ರೋಧ ಏಷ ರಜೋಗುಣಸಮುದ್ಭವಃ ।**
**ಮಹಾಶನೋ ಮಹಾಪಾಪ್ಮಾ ವಿದ್ಧ್ಯೇನಮಿಹ ವೈರಿಣಮ್ ॥ ೩೭**

**ಭಗವಂತನು ಹೇಳಿದನು :** ಇದೇ ಕಾಮ, ಇದೇ ಕ್ರೋಧ. ಇದು ರಜೋಗುಣದಿಂದ ಹುಟ್ಟಿದ್ದು. ಕಾಮವು ಹೊಟ್ಟೆಬಾಕ (ಎಷ್ಟು ದೊರಕಿದರೂ ತೃಪ್ತಿ ಇಲ್ಲ). ಇದು ಮಹಾಪಾಪಿ. ಇದೇ ಸಂಸಾರದಲ್ಲಿ ವೈರಿಯೆಂದು ತಿಳಿ.

**ವಿವರಣೆ :** ಕಾಮಕ್ಕೆ (ಆಸೆಗೆ) ತಡೆಯಾದರೆ ಅದೇ ಕ್ರೋಧವಾಗಿ ಪರಿಣಮಿಸುತ್ತದೆ. ಮನುಷ್ಯನ ಆಸೆಗೆ ಮಿತಿಯಿಲ್ಲ. ದುಷ್ಕೃತ್ಯಕ್ಕೆ ತಳ್ಳತಕ್ಕದ್ದು ಇದೇ. ಕೆಟ್ಟ ಸಂಸ್ಕಾರವು ಪ್ರಬಲವಾಗಿದ್ದರೆ ಪುರುಷಪ್ರಯತ್ನವು ಸೋಲುವುದೂ ಉಂಟು.

**ಧೂಮೇನಾವ್ರಿಯತೇ ವಹ್ನಿರ್ಯಥಾದರ್ಶೋ ಮಲೇನ ಚ ।**
**ಯಥೋಲ್ಬೇನಾವೃತೋ ಗರ್ಭಸ್ತಥಾ ತೇನೇದಮಾವೃತಮ್ ॥ ೩೮**

ಹೇಗೆ ಹೊಗೆಯಿಂದ ಬೆಂಕಿಯೂ ಕೊಳೆಯಿಂದ ಕನ್ನಡಿಯೂ ಮೇಲ್ಪೊರೆಯಿಂದ ಗರ್ಭವೂ ಮುಚ್ಚಿಕೊಂಡಿರುವುದೋ ಹಾಗೆ ವೈರಿಯಾದ ಆ ಕಾಮದಿಂದ ಇದು ಮುಚ್ಚಿಹೋಗಿದೆ.

ಇದು ಎಂದರೆ ಯಾವುದು ? –

**ಆವೃತಂ ಜ್ಞಾನಮೇತೇನ ಜ್ಞಾನಿನೋ ನಿತ್ಯವೈರಿಣಾ ।**
**ಕಾಮರೂಪೇಣ ಕೌಂತೇಯ ದುಷ್ಪೂರೇಣಾನಲೇನ ಚ ॥ ೩೯**

ಕೌಂತೇಯ, ಜ್ಞಾನಿಗೆ ನಿತ್ಯವೈರಿಯೂ ಇಚ್ಛಾರೂಪವೂ ಆದ ಕಾಮದಿಂದ ಮನುಷ್ಯನ ಜ್ಞಾನವು ಮುಚ್ಚಿಹೋಗಿದೆ. ಕಾಮವು ಪೂರ್ತಿ ಮಾಡಲು ಶಕ್ಯವಿಲ್ಲದ್ದು. ಅದಕ್ಕೆ ಬೆಂಕಿಯಂತೆ ಸಾಕು ಎಂಬುದೇ ಇಲ್ಲ.

**ಇಂದ್ರಿಯಾಣಿ ಮನೋಬುದ್ಧಿರಸ್ಯಾಧಿಷ್ಠಾನಮುಚ್ಯತೇ ।**
**ಏತೈರ್ವಿಮೋಹಯತ್ಯೇಷಃ ಜ್ಞಾನಮಾವೃತ್ಯ ದೇಹಿನಮ್ ॥ ೪೦**

ಇಂದ್ರಿಯಗಳು, ಮನಸ್ಸು, ಬುದ್ಧಿ – ಇವುಗಳು ಕಾಮಕ್ಕೆ ಆಶ್ರಯವಾಗಿವೆ. ಕಾಮವು ಇವುಗಳನ್ನಾಶ್ರಯಿಸಿಕೊಂಡು ಜ್ಞಾನವನ್ನು ಮುಸುಕಿ ಜೀವನನ್ನು ವಿಧವಿಧವಾಗಿ ಮೋಹಗೊಳಿಸುತ್ತದೆ.

**ತಸ್ಮಾತ್ತ್ವಮಿಂದ್ರಿಯಾಣ್ಯಾದೌ ನಿಯಮ್ಯ ಭರತರ್ಷಭ ।**
**ಪಾಪ್ಮಾನಂ ಪ್ರಜಹಿ ಹ್ಯೇನಂ ಜ್ಞಾನವಿಜ್ಞಾನನಾಶನಮ್ ॥ ೪೧**

ಆದ್ದರಿಂದ ಅರ್ಜುನ, ಮೊದಲು ನೀನು ಇಂದ್ರಿಯಗಳನ್ನು ಬಿಗಿಹಿಡಿದು, ಜ್ಞಾನವಿಜ್ಞಾನಗಳನ್ನು ನಾಶಗೊಳಿಸುವ ಈ ಪಾಪಿಯನ್ನು ಸಂಹರಿಸು.

**ವಿವರಣೆ :** ಶಾಸ್ತ್ರದಿಂದಲೂ ಆಚಾರ್ಯರಿಂದಲೂ ಪ್ರಾಪ್ತವಾದದ್ದು ಜ್ಞಾನ. ಅದನ್ನು ತನ್ನ ಅನುಭವಕ್ಕೆ ತಂದುಕೊಳ್ಳುವುದು ವಿಜ್ಞಾನ.

**ಇಂದ್ರಿಯಾಣಿ ಪರಾಣ್ಯಾಹುರಿಂದ್ರಿಯೇಭ್ಯಃ ಪರಂ ಮನಃ ।**
**ಮನಸಸ್ತು ಪರಾ ಬುದ್ಧಿರ್ಯೋ ಬುದ್ಧೇಃ ಪರತಸ್ತು ಸಃ ॥ ೪೨**

ಇಂದ್ರಿಯಗಳು (ಸೂಕ್ಷ್ಮವಾಗಿಯೂ ವ್ಯಾಪಕವಾಗಿಯೂ ಇರುವುದರಿಂದ) ದೇಹಕ್ಕಿಂತ ಹೆಚ್ಚಿನವೆಂದು ಹೇಳುತ್ತಾರೆ. ಇಂದ್ರಿಯಗಳಿಗಿಂತ (ಸಂಕಲ್ಪ ವಿಕಲ್ಪರೂಪವಾಗಿರುವ) ಮನಸ್ಸು ಹೆಚ್ಚಿನದು. ಮನಸ್ಸಿಗಿಂತ (ನಿಶ್ಚಯಾತ್ಮಕವಾದ) ಬುದ್ಧಿ ಹೆಚ್ಚಿನದು. ಬುದ್ಧಿಗಿಂತಲೂ (ಅದನ್ನು ನೋಡುತ್ತಿರುವ) ಆತ್ಮನು ಹೆಚ್ಚಿನವನು.

**ವಿವರಣೆ :** ಮನೋಬುದ್ಧಿಗಳೆರಡೂ ಅಂತಃಕರಣದ ವೃತ್ತಿಗಳು. ಹೀಗೆ ಮಾಡಬೇಕೆಂದು ಆಲೋಚಿಸುವುದು ಸಂಕಲ್ಪ. ಒಂದು ವಸ್ತುವಿನಲ್ಲಿ ವಿಭಿನ್ನವಾದ ಚಿಂತನೆ ವಿಕಲ್ಪ. ಆತ್ಮನಿಂದ ದೃಶ್ಯವಾದ ಬುದ್ಧಿ ಮೊದಲಾದದ್ದೆಲ್ಲವೂ ಅನಾತ್ಮ. ಆತ್ಮನು ಇಂದ್ರಿಯಾದಿಗಳಿಗಿಂತ ಹೆಚ್ಚಿನವನು ಎಂಬುದು ಮುಖ್ಯ

ತಾತ್ಪರ್ಯ. ನಮ್ಮ ಬುದ್ಧಿ ನಮಗೆ ಗೋಚರಿಸುವುದರಿಂದ ಅದು ದೃಶ್ಯವೇ.

**ಏವಂ ಬುದ್ಧೇಃ ಪರಂ ಬುದ್ಧ್ವಾ ಸಂಸ್ತಭ್ಯಾತ್ಮಾನಮಾತ್ಮನಾ ।**
**ಜಹಿ ಶತ್ರುಂ ಮಹಾಬಾಹೋ ಕಾಮರೂಪಂ ದುರಾಸದಮ್ ॥ ೪೩**

**ಇತಿ ಶ್ರೀಮದ್ಭಗವದ್ಗೀತಾಸೂಪನಿಷತ್ಸು ಬ್ರಹ್ಮವಿದ್ಯಾಯಾಂ ಯೋಗಶಾಸ್ತ್ರೇ**
**ಕರ್ಮಯೋಗೋ ನಾಮ ತೃತೀಯೋಽಧ್ಯಾಯಃ**

ಎಲೈ ಮಹಾಬಾಹು, ಹೀಗೆ ಬುದ್ಧಿಗಿಂತಲೂ ಅಧಿಕನಾದವನು ಆತ್ಮನೆಂದರಿತು, ನಿನ್ನ ಮನಸ್ಸನ್ನು ಸಂಸ್ಕಾರಹೊಂದಿದ ಬುದ್ಧಿಯಿಂದ ನಿಯಂತ್ರಿಸಿ, ದುರ್ಧರ್ಷನಾದ ಈ ಕಾಮವೆಂಬ ಶತ್ರುವನ್ನು ಕೊಂದುಹಾಕು.

**ಇಲ್ಲಿಗೆ ಶ್ರೀಮದ್ಭಗವದ್ಗೀತೆಯಲ್ಲಿ ಕರ್ಮಯೋಗವೆಂಬ**
**ಮೂರನೆಯ ಅಧ್ಯಾಯವು ಸಮಾಪ್ತವಾಯಿತು.**

## ೩ನೆಯ ಅಧ್ಯಾಯದ ಸಾರ

ಹಿಂದಿನ ಎರಡು ಅಧ್ಯಾಯಗಳಲ್ಲಿ ಸಾಂಖ್ಯಬುದ್ಧಿ, ಯೋಗಬುದ್ಧಿ – ಎಂಬ ಎರಡು ಬುದ್ಧಿಗಳನ್ನು ಉಪದೇಶಿಸಿದಮೇಲೆ, ಭಗವಂತನು ಜ್ಞಾನನಿಷ್ಠೆಯಿಂದ ಮೋಕ್ಷವಾಗುವುದೆಂದು ಹೇಳಿದನು. ಆದರೆ ಅರ್ಜುನನಿಗೆ ನೀನು ಕರ್ಮವನ್ನೇ ಮಾಡು ಎಂದು ಉಪದೇಶಿಸಿದನು. ಜ್ಞಾನವೇ ಹೆಚ್ಚಿನದಾದರೆ ಕರ್ಮದಲ್ಲಿಯೇ ನನ್ನನ್ನು ತೊಡಗಿಸುವ ಉದ್ದೇಶವೇನೆಂದು ತಿಳಿಯಲಾರದೆ ಅರ್ಜುನನು ಪ್ರಶ್ನೆ ಮಾಡಿದಾಗ ಭಗವಂತನು ಹೇಳಿದ್ದೇನೆಂದರೆ –

ಅರ್ಜುನ, ಜ್ಞಾನನಿಷ್ಠೆಯಿಂದಲೇ ಮೋಕ್ಷವು ದೊರೆಯುತ್ತದೆಯೆಂಬುದು ನನ್ನ ಅಭಿಪ್ರಾಯ. ಜ್ಞಾನನಿಷ್ಠೆಯನ್ನೇರಲು ಚಿತ್ತಶುದ್ಧಿಯಾಗದಿದ್ದರೆ ಸಾಧ್ಯವಿಲ್ಲ. ಚಿತ್ತಶುದ್ಧಿಯನ್ನು ಪಡೆಯುವವರೆಗೆ ಕರ್ಮವನ್ನಾಚರಿಸಲೇಬೇಕೆಂದು ನನ್ನ ಆಶಯ. ಕರ್ಮವನ್ನು ಸುಮ್ಮನೆ ಕೈಬಿಟ್ಟಮಾತ್ರದಿಂದ ಜ್ಞಾನಕ್ಕೆ ಅಧಿಕಾರ ಬರುವುದಿಲ್ಲ. ಅಜ್ಞರಿಗೆ ಕರ್ಮವನ್ನು ಬಿಡಲು ಸಾಧ್ಯವೂ ಇಲ್ಲ. ಕರ್ಮೇಂದ್ರಿಯಗಳನ್ನು ಒಂದು ವೇಳೆ ಬಿಗಿಹಿಡಿದರೂ ಅವರ ಮನಸ್ಸು ವಿಷಯ ಭೋಗವನ್ನು ಚಿಂತಿಸುತ್ತಲೇ ಇರುತ್ತದೆ. ಏಕೆಂದರೆ, ಅವರು ಕಾಮವನ್ನು ಗೆದ್ದಿರುವುದಿಲ್ಲ. ಕರ್ಮದಿಂದಲೇ ಶರೀರಯಾತ್ರೆ ಸಾಗಬೇಕಾಗಿದೆ. ಜಗಚ್ಚಕ್ರವೂ ಕರ್ಮದಿಂದಲೇ ನಡೆಯುತ್ತಿದೆ. ಕರ್ಮದಿಂದ ಕೆಡುಕೇನೂ ಇಲ್ಲ,

ಫಲಾಸಕ್ತಿಯೆಂಬ ಕಾಮದಿಂದ ಮಾತ್ರ ಕೆಡುಕಿದೆ. ಆದ್ದರಿಂದ ಫಲದಲ್ಲಿ ಆಸೆಯನ್ನು ತ್ಯಜಿಸಿ ಈಶ್ವರಾರ್ಪಣಬುದ್ಧಿಯಿಂದ ಸಂಗರಹಿತನಾಗಿ ನೀನು ಕರ್ಮವನ್ನು ಮಾಡುತ್ತಿರಬೇಕು. ಪರಮೇಶ್ವರನಾದ ನಾನೂ ಸಹ ಯಾವ ಫಲಾಪೇಕ್ಷೆ ಇಲ್ಲದೆ ಕರ್ಮವನ್ನು ಮಾಡುತ್ತಲೇ ಇದ್ದೇನೆ. ಇದರಿಂದ ಲೋಕ ಸಂಗ್ರಹವಾಗುತ್ತದೆ. ಜನರು ತಪ್ಪುದಾರಿಗೆ ಹೋಗದಂತೆ ಅವರಿಗೆ ಆದರ್ಶವಾಗಿರುವ ಕರ್ಮವನ್ನು ಮಾಡುತ್ತಿರಬೇಕು. ಹೀಗೆ ಫಲಾಪೇಕ್ಷೆಯನ್ನು ಸಂಪೂರ್ಣವಾಗಿ ತೊರೆದು, ವಿಹಿತಕರ್ಮಗಳನ್ನು ಆಚರಿಸುವುದರಿಂದ ಜ್ಞಾನನಿಷ್ಠೆಗೆ ಅರ್ಹತೆ ಬರುತ್ತದೆ. ಕರ್ಮದಲ್ಲಿ ಫಲಾಪೇಕ್ಷೆಯನ್ನಿಟ್ಟರೆ ಅದು ಬಂಧಕವಾಗಿ ಸಂಸಾರದಿಂದ ಬಿಡುಗಡೆ ಆಗುವುದೇ ಇಲ್ಲ.

ಜನರು ಈ ನನ್ನ ಉಪದೇಶದಂತೆ ನಡೆಯದಿರುವುದಕ್ಕೆ ಅವರ ಮನಸ್ಸಿನಲ್ಲಿ ನೆಟ್ಟಿರುವ ಕಾಮವೇ ಕಾರಣ. ಕಾಮವೆಂದರೆ ಫಲಾಪೇಕ್ಷೆ, ವಿಷಯಭೋಗದಲ್ಲಿ ಆಸಕ್ತಿ. ಅದರಿಂದ ರಜೋಗುಣವು ತಲೆಯೆತ್ತಿ ಯುಕ್ತಾಯುಕ್ತ ವಿವೇಚನೆ ನಷ್ಟವಾಗುತ್ತದೆ. ಅವಿವೇಕದಿಂದ ಕರ್ಮವನ್ನು ಮಾಡತಕ್ಕವನಿಗೆ ಆತ್ಮಜ್ಞಾನ ವಾಗುವ ಸಂಭವವೇ ಇಲ್ಲ. ಮನುಷ್ಯನು ತನ್ನ ದೃಢಸಂಕಲ್ಪದಿಂದ ಇಂದ್ರಿಯ ಗಳನ್ನು ಜಯಿಸಿ, ಬುದ್ಧಿಸಾಕ್ಷಿಯಾದ ಆತ್ಮನ ದರ್ಶನಕ್ಕಾಗಿ ಯತ್ನಿಸಬೇಕು. ಇಲ್ಲದಿದ್ದರೆ ಪ್ರಕೃತಿಯು ಅವನನ್ನು ದಿಕ್ಕುತಪ್ಪಿಸಿ ಎತ್ತಲೋ ತಳ್ಳಿಬಿಡುತ್ತದೆ. ಇಂದ್ರಿಯ, ಮನಸ್ಸು, ಬುದ್ಧಿ – ಇವುಗಳನ್ನಾಶ್ರಯಿಸಿಕೊಂಡು ಕಾಮವು ತಲೆ ಎತ್ತುವುದು. ಆದ್ದರಿಂದ ಇವುಗಳನ್ನು ಕ್ರಮವಾಗಿ ಜಯಿಸಬೇಕು. ಅರ್ಜುನ, ಜನಕಾದಿ ರಾಜರ್ಷಿಗಳೂ ಕರ್ಮವನ್ನು ಮಾಡುತ್ತಲೇ ಸಿದ್ಧಿಯನ್ನು ಪಡೆದಿದ್ದಾರೆ. ಚಿತ್ತಶುದ್ಧಿಯಾಗುವ ಪರ್ಯಂತ, ಕಾಮವನ್ನು ಪೂರ್ತಿಯಾಗಿ ಗೆಲ್ಲುವ ಪರ್ಯಂತ, ನೀನು ವಿಹಿತಕರ್ಮವನ್ನು ಮಾಡುತ್ತಿರು. ಈಶ್ವರಪ್ರೀತ್ಯರ್ಥವೆಂದು ತಿಳಿದು ಮಾಡು. ಇದರಿಂದ ಮುಂದೆ ನಿನಗೆ ಶ್ರೇಯಸ್ಸಾಗುತ್ತದೆ.

## ಅಧ್ಯಾಯ ೪

# ಜ್ಞಾನಯೋಗ

ಹಿಂದಿನ ಎರಡು ಅಧ್ಯಾಯಗಳಲ್ಲಿ ಕರ್ಮಯೋಗವನ್ನೂ ಅದರಿಂದ ಸಿದ್ಧಿಸುವ ಜ್ಞಾನಯೋಗವನ್ನೂ ಹೇಳಿದ್ದಾಯಿತು. ಮುಖ್ಯವಾದ ವೇದಾರ್ಥವೂ ಇಷ್ಟೇ ಆದ್ದರಿಂದ ಹೇಳಬೇಕಾದದ್ದು ಸಮಾಪ್ತವಾಯಿತೆಂದು ಭಾವಿಸಿ, ಇದರ ಸಂಪ್ರದಾಯವನ್ನು ತಿಳಿಸುವುದಕ್ಕಾಗಿ ಭಗವಂತನು ಈಗ ವಂಶಕೀರ್ತನೆಯನ್ನು ಮಾಡುತ್ತಾನೆ. ಸಮಗ್ರ ಗೀತಾತಾತ್ಪರ್ಯವಿರುವುದೂ ಇಷ್ಟೆ. ಆದರೆ ಅರ್ಜುನನು ಮತ್ತೆ ಪ್ರಶ್ನಿಸುವುದರಿಂದ, ಇದೇ ವಿಚಾರವನ್ನು ಮುಂದೆ ವಿಸ್ತರಿಸಲಾಗುತ್ತದೆ.

**ಇಮಂ ವಿವಸ್ವತೇ ಯೋಗಂ ಪ್ರೋಕ್ತವಾನಹಮವ್ಯಯಮ್ ।**
**ವಿವಸ್ವಾನ್ ಮನವೇ ಪ್ರಾಹ ಮನುರಿಕ್ಷ್ವಾಕವೇಽಬ್ರವೀತ್ ॥** ೧

**ಭಗವಂತನು ಹೀಗೆಂದನು –** ಶಾಶ್ವತವಾಗಿರುವ ಈ ಯೋಗವನ್ನು ನಾನು ವಿವಸ್ವಂತನಿಗೆ (ಸೂರ್ಯನಿಗೆ) ಉಪದೇಶಿಸಿದೆನು. ವಿವಸ್ವಂತನು (ತನ್ನ ಮಗನಾದ) ಮನುವಿಗೆ ಬೋಧಿಸಿದನು. ಮನುವು (ತನ್ನ ಮಗನಾದ) ಇಕ್ಷ್ವಾಕುವಿಗೆ ತಿಳಿಸಿದನು.

**ಏವಂ ಪರಂಪರಾಪ್ರಾಪ್ತಮಿಮಂ ರಾಜರ್ಷಯೋ ವಿದುಃ ।**
**ಸ ಕಾಲೇನೇಹ ಮಹತಾ ಯೋಗೋ ನಷ್ಟಃ ಪರಂತಪ ॥** ೨

ಹೀಗೆ ಪರಂಪರೆಯಿಂದ ಬಂದ ಈ ಯೋಗವನ್ನು ರಾಜರ್ಷಿಗಳು ಬಲ್ಲವರಾಗಿದ್ದರು. ಅರ್ಜುನ, ಬಹಳ ಕಾಲವಾದ್ದರಿಂದ ಈಗ ಇದು ನಷ್ಟವಾಗಿದೆ (ಪರಂಪರೆಯು ಕಡಿದುಹೋಗಿದೆ).

**ಸ ಏವಾಯಂ ಮಯಾ ತೇಽದ್ಯ ಯೋಗಃ ಪ್ರೋಕ್ತಃ ಪುರಾತನಃ ।**
**ಭಕ್ತೋಽಸಿ ಮೇ ಸಖಾ ಚೇತಿ ರಹಸ್ಯಂ ಹ್ಯೇತದುತ್ತಮಮ್ ॥** ೩

ನನಗೆ ಪ್ರಿಯನಾದ ಭಕ್ತನೂ ಸಖನೂ ಆಗಿರುವೆಯಾದ್ದರಿಂದ, ಪುರಾತನವಾದ ಅದೇ ಯೋಗವನ್ನು ನಿನಗೆ ನಾನು ಹೇಳಿದ್ದೇನೆ. ಇದು ಶ್ರೇಷ್ಠವಾದ ಒಂದು ರಹಸ್ಯ.

**ಅರ್ಜುನ ಉವಾಚ –**

**ಅಪರಂ ಭವತೋ ಜನ್ಮ ಪರಂ ಜನ್ಮ ವಿವಸ್ವತಃ ।**
**ಕಥಮೇತದ್ವಿಜಾನೀಯಾಂ ತ್ವಮಾದೌ ಪ್ರೋಕ್ತವಾನಿತಿ ॥ ೪**

**ಅರ್ಜುನನು ಹೇಳಿದನು :** ನಿನ್ನ ಜನ್ಮ ಈಚಿನದು. ವಿವಸ್ವಂತನ ಜನ್ಮ ಇನ್ನೊಂದು (ಸೃಷ್ಟಿಯ ಆದಿಕಾಲದಲ್ಲಿ). ನೀನು ಪೂರ್ವದಲ್ಲಿ ವಿವಸ್ವಂತನಿಗೆ ಉಪದೇಶಿಸಿದೆಯೆಂದು ನಾನು ಹೇಗೆ ತಿಳಿದುಕೊಳ್ಳಲಿ? (ಸೂರ್ಯ, ವೈವಸ್ವತಮನುಗಳು ಈಗ ಇದ್ದರೂ ಇಕ್ಷ್ವಾಕುವಿಗೂ ಪೂರ್ವದಲ್ಲಿ ನೀನು ಉಪದೇಶಿಸಿದ್ದು ಹೇಗೆ?)

**ಶ್ರೀಭಗವಾನುವಾಚ –**

**ಬಹೂನಿ ಮೇ ವ್ಯತೀತಾನಿ ಜನ್ಮಾನಿ ತವ ಚಾರ್ಜುನ ।**
**ತಾನ್ಯಹಂ ವೇದ ಸರ್ವಾಣಿ ನ ತ್ವಂ ವೇತ್ಥ ಪರಂತಪ ॥ ೫**

**ಭಗವಂತನು ಹೇಳಿದನು :** ನನಗೂ ನಿನಗೂ ಬಹಳ ಜನ್ಮಗಳು ಆಗಿ ಹೋದವು. ಅವೆಲ್ಲವನ್ನು ನಾನು ಬಲ್ಲೆ – ನೀನು ಮಾತ್ರ ಅವುಗಳನ್ನರಿಯೆ.

**ಅಜೋಽಪಿ ಸನ್ನವ್ಯಯಾತ್ಮಾ ಭೂತಾನಾಮೀಶ್ವರೋಽಪಿ ಸನ್ ।**
**ಪ್ರಕೃತಿಂ ಸ್ವಾಮಧಿಷ್ಠಾಯ ಸಂಭವಾಮ್ಯಾತ್ಮಮಾಯಯಾ ॥ ೬**

ನಾನು ಜನ್ಮರಹಿತನಾಗಿದ್ದರೂ ಅಕ್ಷಯವಾದ ಜ್ಞಾನಶಕ್ತಿ ಸ್ವಭಾವದವನಾದರೂ ಎಲ್ಲ ಪ್ರಾಣಿಗಳಿಗೆ ಈಶ್ವರನಾಗಿದ್ದರೂ ನನ್ನ ವೈಷ್ಣವೀಮಾಯೆಯನ್ನು ವಶೀಕರಿಸಿಕೊಂಡು ನನ್ನ ಮಾಯೆಯಿಂದಲೇ ಹುಟ್ಟುತ್ತೇನೆ. (ದೇಹಧಾರಿಯಾಗಿ ಹುಟ್ಟಿದಂತೆ ಕಾಣಿಸಿಕೊಳ್ಳುತ್ತೇನೆ.)

**ವಿವರಣೆ :** ಅವ್ಯಯಾತ್ಮಾ = ಆತ್ಮ ಎಂದರೆ ಇಲ್ಲಿ ಸ್ವಭಾವ. ಈಶ್ವರನಲ್ಲಿ ಜ್ಞಾನಶಕ್ತಿಯೆಂಬ ಸ್ವಭಾವವು ಕ್ಷೀಣವಾಗುವುದೇ ಇಲ್ಲ.

**ಯದಾ ಯದಾ ಹಿ ಧರ್ಮಸ್ಯ ಗ್ಲಾನಿರ್ಭವತಿ ಭಾರತ ।**
**ಅಭ್ಯುತ್ಥಾನಮಧರ್ಮಸ್ಯ ತದಾತ್ಮಾನಂ ಸೃಜಾಮ್ಯಹಮ್ ॥ ೭**

ಭರತವಂಶೋತ್ಪನ್ನ–ಅರ್ಜುನ, ಯಾವಯಾವಾಗ ಧರ್ಮಕ್ಕೆ ಕ್ಷೀಣತೆಯೂ ಅಧರ್ಮಕ್ಕೆ ಉತ್ಥಿತಿಯೂ ಉಂಟಾಗುವುದೋ ಆಗ ನನ್ನನ್ನು ನಾನು ಸೃಜಿಸಿಕೊಳ್ಳುತ್ತೇನೆ. (ಅವತಾರ ಮಾಡುತ್ತೇನೆ.)

**ಪರಿತ್ರಾಣಾಯ ಸಾಧೂನಾಂ ವಿನಾಶಾಯ ಚ ದುಷ್ಕೃತಾಮ್ ।**
**ಧರ್ಮಸಂಸ್ಥಾಪನಾರ್ಥಾಯ ಸಂಭವಾಮಿ ಯುಗೇ ಯುಗೇ ॥ ೮**

ಸಜ್ಜನರನ್ನು ರಕ್ಷಿಸುವುದಕ್ಕಾಗಿಯೂ ದುರ್ಜನರನ್ನು ನಾಶ ಮಾಡುವುದಕ್ಕಾಗಿಯೂ ಧರ್ಮವನ್ನು ಸರಿಯಾಗಿ ಸ್ಥಾಪಿಸುವುದಕ್ಕಾಗಿಯೂ ನಾನು ಯುಗಯುಗಗಳಲ್ಲಿ ಜನ್ಮವನ್ನು ತೆಗೆದುಕೊಳ್ಳುತ್ತಿದ್ದೇನೆ.

**ಜನ್ಮ ಕರ್ಮ ಚ ಮೇ ದಿವ್ಯಮೇವಂ ಯೋ ವೇತ್ತಿ ತತ್ತ್ವತಃ ।**
**ತ್ಯಕ್ತ್ವಾ ದೇಹಂ ಪುನರ್ಜನ್ಮ ನೈತಿ ಮಾಮೇತಿ ಸೋಽರ್ಜುನ ॥ ೯**

ಈ ರೀತಿಯಾಗಿರುವ ನನ್ನ ಜನ್ಮವನ್ನೂ ಕರ್ಮವನ್ನೂ ತತ್ತ್ವರೀತಿಯಿಂದ ಯಾವನು ತಿಳಿದುಕೊಳ್ಳುತ್ತಾನೋ ಅವನು ದೇಹವನ್ನು ತ್ಯಜಿಸಿದಮೇಲೆ ಮತ್ತೆ ಜನ್ಮವನ್ನು ಪಡೆಯುವುದಿಲ್ಲ. ಅರ್ಜುನ, ಅವನು ನನ್ನಲ್ಲಿ ಸೇರಿಹೋಗುತ್ತಾನೆ.

**ವಿವರಣೆ :** ಅವ್ಯಕ್ತನಾದ ಪರಮಾತ್ಮನು ಮಾಯೆಯಿಂದ ಸಗುಣನಾಗುವುದೆಂತು ? ಜನ್ಮವೆಂದರೇನು ? ಎಂಬುದನ್ನರಿತರೆ ಅಧ್ಯಾತ್ಮಜ್ಞಾನವಾಗುತ್ತದೆ. ಅವತರಿಸಿದಾಗ ಪರಮಾತ್ಮನ ಕರ್ಮ ಹೇಗಿತ್ತು ? ಎಂದು ವಿಚಾರಿಸಿ ತಿಳಿದರೆ ಕರ್ಮಯೋಗದ ಅರಿವಾಗುತ್ತದೆ. ಕರ್ಮಯೋಗ ಮತ್ತು ಅಧ್ಯಾತ್ಮಜ್ಞಾನ – ಇವೆರಡು ಮೋಕ್ಷಕ್ಕೆ ಕಾರಣ. ಈಶ್ವರಜ್ಞಾನವೇ ಆತ್ಮಜ್ಞಾನ.

**ವೀತರಾಗಭಯಕ್ರೋಧಾ ಮನ್ಮಯಾ ಮಾಮುಪಾಶ್ರಿತಾಃ ।**
**ಬಹವೋ ಜ್ಞಾನತಪಸಾ ಪೂತಾ ಮದ್ಭಾವಮಾಗತಾಃ ॥ ೧೦**

ಪ್ರೀತಿ ಭೀತಿ ಕ್ರೋಧಗಳನ್ನು ತ್ಯಜಿಸಿ ಮನ್ಮಯರಾಗಿ ನನ್ನನ್ನು ಆಶ್ರಯಿಸಿದ ಬಹಳ ಜನರು ಜ್ಞಾನವೆಂಬ ತಪಸ್ಸಿನಿಂದ ಪೂತರಾಗಿ ನನ್ನ ಸ್ವರೂಪವನ್ನು– ಎಂದರೆ ಮೋಕ್ಷವನ್ನು ಪಡೆದಿದ್ದಾರೆ.

**ವಿವರಣೆ :** ಈ ಮೋಕ್ಷಮಾರ್ಗವು ಬಹಳ ಹಿಂದಿನಿಂದ ಇತ್ತು ಎಂದು ಶ್ಲೋಕದ ತಾತ್ಪರ್ಯ. ಮನ್ಮಯರು=ಈಶ್ವರಾಭೇದದರ್ಶಿಗಳಾದ ಬ್ರಹ್ಮವಿದರು.

**ಯೇ ಯಥಾ ಮಾಂ ಪ್ರಪದ್ಯಂತೇ ತಾಂಸ್ತಥೈವ ಭಜಾಮ್ಯಹಮ್ ।**
**ಮಮ ವರ್ತ್ಮಾನುವರ್ತಂತೇ ಮನುಷ್ಯಾಃ ಪಾರ್ಥ ಸರ್ವಶಃ ॥ ೧೧**

ಯಾರು ಯಾವ ಪ್ರಕಾರದಿಂದ (ಯಾವ ಫಲಾಪೇಕ್ಷೆಯಿಂದ) ನನ್ನನ್ನು ಸೇವಿಸುತ್ತಾರೋ ಆ ಪ್ರಕಾರದಲ್ಲಿಯೇ (ಆ ಫಲವನ್ನಿತ್ತು) ಅವರನ್ನು ಅನುಗ್ರಹಿಸುತ್ತೇನೆ. ಪಾರ್ಥ, (ಆಯಾ ಧರ್ಮದಲ್ಲಿ ಅಧಿಕೃತರಾದ) ಮನುಷ್ಯರು

ಎಲ್ಲ ವಿಧದಲ್ಲಿಯೂ ನಾನು ಹಾಕಿಕೊಟ್ಟ ಮಾರ್ಗವನ್ನನುಸರಿಸುತ್ತಾರೆ. (ಫಲಕ್ಕಾಗಿ ನನ್ನನ್ನು ಭಜಿಸುತ್ತಾರೆ.)

**ವಿವರಣೆ :** ಫಲಾಪೇಕ್ಷಿಗಳಿಗೆ ಆಯಾ ಫಲವನ್ನೂ ಕರ್ಮಯೋಗಿಗಳಿಗೆ ಜ್ಞಾನವನ್ನೂ ಜ್ಞಾನನಿಷ್ಠರಿಗೆ ಮೋಕ್ಷವನ್ನೂ ಕೊಡುತ್ತೇನೆ. ಭಕ್ತರ ಅಪೇಕ್ಷೆಗೆ ತಕ್ಕ ಫಲ ದೊರೆಯುತ್ತದೆ. ನನಗೆ ಪಕ್ಷಪಾತವೇನೂ ಇಲ್ಲ. ಕರ್ಮದಿಂದ ದೊರಕುವ ಫಲ ನನ್ನ ಮೂಲಕವಾಗಿಯೇ, ಸ್ವತಂತ್ರವಾಗಿ ಅಲ್ಲ. ನಾನು ಸರ್ವದೇವತಾ ಸ್ವರೂಪನಾದ್ದರಿಂದ ಯಾರನ್ನು ಭಜಿಸಿದರೂ ನನಗೆ ಸಲ್ಲುತ್ತದೆ – ಎಂದು ಅಭಿಪ್ರಾಯ.

**ಕಾಂಕ್ಷಂತಃ ಕರ್ಮಣಾಂ ಸಿದ್ಧಿಂ ಯಜಂತ ಇಹ ದೇವತಾಃ ।**
**ಕ್ಷಿಪ್ರಂ ಹಿ ಮಾನುಷೇ ಲೋಕೇ ಸಿದ್ಧಿರ್ಭವತಿ ಕರ್ಮಜಾ ॥ ೧೨**

ಈ ಲೋಕದಲ್ಲಿ ಕರ್ಮಗಳಿಗೆ ಫಲಸಿದ್ಧಿಯನ್ನಪೇಕ್ಷಿಸತಕ್ಕವರು ದೇವತೆಗಳನ್ನು ಪೂಜಿಸುತ್ತಾರೆ. ಏಕೆಂದರೆ, ಮನುಷ್ಯಲೋಕದಲ್ಲಿ ಕರ್ಮಾನುಷ್ಠಾನದ ಫಲಸಿದ್ಧಿಯು ಬೇಗನೆ ಲಭಿಸುತ್ತದೆ.

**ವಿವರಣೆ :** ಕರ್ಮಗಳ ಲೌಕಿಕಫಲವು ಬೇಗನೆ ದೊರೆಯುತ್ತದೆ. ಮೋಕ್ಷವು ಹಾಗೆ ಸುಲಭವಾಗಿ ದೊರಕತಕ್ಕದ್ದಲ್ಲ. 'ಮಾನುಷೇ ಲೋಕೇ' ಎಂದು ಹೇಳಿದ್ದು ವರ್ಣಾಶ್ರಮಧರ್ಮವು ಮನುಷ್ಯಲೋಕದಲ್ಲಿ ಮಾತ್ರ ಎಂದು ಸೂಚಿಸುವುದಕ್ಕಾಗಿ.

**ಚಾತುರ್ವರ್ಣ್ಯಂ ಮಯಾ ಸೃಷ್ಟಂ ಗುಣಕರ್ಮವಿಭಾಗಶಃ ।**
**ತಸ್ಯ ಕರ್ತಾರಮಪಿ ಮಾಂ ವಿದ್ಧ್ಯಕರ್ತಾರಮವ್ಯಯಮ್ ॥ ೧೩**

ಸತ್ತ್ವಾದಿಗುಣಗಳ ಮತ್ತು ತಪಸ್ಸು ಮುಂತಾದ ಕರ್ಮಗಳ ವಿಂಗಡದಿಂದ ಈ ಚಾತುರ್ವರ್ಣ್ಯವನ್ನು ನಾನು ಸೃಷ್ಟಿಸಿದ್ದೇನೆ. ಇದಕ್ಕೆ ನಾನು (ಮಾಯೆಯ ವ್ಯವಹಾರದಿಂದ) ಕರ್ತೃವಾಗಿದ್ದರೂ ನಿಜವಾಗಿ ಕರ್ತೃವಲ್ಲವೆಂದೂ ಆದ್ದರಿಂದಲೇ ಅವ್ಯಯ – ಎಂದರೆ – ಸಂಸಾರಿಯಲ್ಲವೆಂದೂ ತಿಳಿ.

**ವಿವರಣೆ :** ವ್ಯಯವೆಂದರೆ ವಿಕಾರ. ಸಂಸಾರವೇ ವಿಕಾರ. ಅವ್ಯಯ = ಸಂಸಾರವೆಂಬ ವಿಕಾರದಿಂದ ರಹಿತ. ಕರ್ತೃವಾದರೆ ಸಂಸಾರಿಯೇ ಆಗಿಬಿಡುತ್ತಾನಾದ್ದರಿಂದ, ಹೀಗೆ ಅರ್ಥ ಮಾಡುವುದು ಪ್ರಕೃತದಲ್ಲಿ ಉಚಿತ.

**ನ ಮಾಂ ಕರ್ಮಾಣಿ ಲಿಂಪಂತಿ ನ ಮೇ ಕರ್ಮಫಲೇ ಸ್ಪೃಹಾ ।**
**ಇತಿ ಮಾಂ ಯೋಽಭಿಜಾನಾತಿ ಕರ್ಮಭಿರ್ನ ಸ ಬಧ್ಯತೇ ॥ ೧೪**

ನನಗೆ ಕರ್ಮಗಳು ಅಂಟುವುದಿಲ್ಲ. ನನಗೆ ಕರ್ಮಫಲದಲ್ಲಿ ಆಸೆ ಇಲ್ಲ. ಹೀಗೆಂದು ಯಾವನು ನನ್ನನ್ನು ಅರಿತುಕೊಳ್ಳುವನೋ ಅವನು ಕರ್ಮಗಳಿಂದ ಬದ್ಧನಾಗುವುದಿಲ್ಲ.

**ವಿವರಣೆ :** ಪರಮಾತ್ಮನಾದ ನನ್ನ ಸ್ವರೂಪವೇ ತಾನೆಂದು ತಿಳಿದು ಯಾವನು 'ತಾನು ಕರ್ತನಲ್ಲವೆಂದೂ ತನಗೆ ಫಲದ ಆಸೆಯಿಲ್ಲ'ವೆಂದೂ ತಿಳಿಯುತ್ತಾನೋ ಅವನಿಗೆ ಸಂಸಾರಬಂಧನವಿಲ್ಲ – ಎಂದು ಅಭಿಪ್ರಾಯ.

**ಏವಂ ಜ್ಞಾತ್ವಾ ಕೃತಂ ಕರ್ಮ ಪೂರ್ವೈರಪಿ ಮುಮುಕ್ಷುಭಿಃ ।**
**ಕುರು ಕರ್ಮೈವ ತಸ್ಮಾತ್ತ್ವಂ ಪೂರ್ವೈಃ ಪೂರ್ವತರಂ ಕೃತಮ್ ॥ ೧೫**

ಈ ರೀತಿಯಲ್ಲಿ 'ನಾನು ಕರ್ತನಲ್ಲ, ನನಗೆ ಕರ್ಮಫಲದಲ್ಲಿ ಆಸೆ ಇಲ್ಲ' ಎಂದು ಭಾವಿಸಿಕೊಂಡು ಹಿಂದಿನ ಮುಮುಕ್ಷುಗಳಾದ ಕರ್ಮಯೋಗಿಗಳು ಕರ್ಮವನ್ನು ಆಚರಿಸಿದ್ದಾರೆ. ಆದ್ದರಿಂದ ನೀನೂ ಸಹ ಹಿಂದಿನವರು ಮಾಡಿದ ಬಲುಹಿಂದಿನದಾದ (ನಿಷ್ಕಾಮ) ಕರ್ಮವನ್ನು ಮಾಡು.

**ವಿವರಣೆ :** ಆತ್ಮಜ್ಞಾನಿಯಲ್ಲದಿದ್ದರೆ ಚಿತ್ತಶುದ್ಧಿಗಾಗಿ, ಆತ್ಮಜ್ಞಾನಿಯಾದರೆ ಲೋಕಸಂಗ್ರಹಕ್ಕಾಗಿ ಕರ್ಮವನ್ನು ಮಾಡು.

**ಕಿಂ ಕರ್ಮ ಕಿಮಕರ್ಮೇತಿ ಕವಯೋಽಪ್ಯತ್ರ ಮೋಹಿತಾಃ ।**
**ತತ್ತೇ ಕರ್ಮ ಪ್ರವಕ್ಷ್ಯಾಮಿ ಯಜ್ಜ್ಞಾತ್ವಾ ಮೋಕ್ಷ್ಯಸೇಽಶುಭಾತ್ ॥ ೧೬**

ಯಾವುದು ಕರ್ಮ, ಯಾವುದು ಅಕರ್ಮ – ಎಂಬ ವಿಷಯದಲ್ಲಿ ಬುದ್ಧಿಶಾಲಿಗಳೂ ಮೋಹಗೊಂಡಿದ್ದಾರೆ. ಆದ್ದರಿಂದ ಕರ್ಮದ ವಿಷಯವನ್ನು ನಿನಗೆ ಹೇಳುವೆನು. ಇದನ್ನರಿತುಕೊಂಡರೆ, ಅಶುಭವಾದ ಸಂಸಾರದಿಂದ ಬಿಡುಗಡೆ ಹೊಂದುವೆ.

**ಕರ್ಮಣೋ ಹ್ಯಪಿ ಬೋದ್ಧವ್ಯಂ ಬೋದ್ಧವ್ಯಂ ಚ ವಿಕರ್ಮಣಃ ।**
**ಅಕರ್ಮಣಶ್ಚ ಬೋದ್ಧವ್ಯಂ ಗಹನಾ ಕರ್ಮಣೋ ಗತಿಃ ॥ ೧೭**

(ಶಾಸ್ತ್ರವಿಹಿತವಾದ) ಕರ್ಮದ ವಿಷಯವನ್ನೂ ತಿಳಿಯಬೇಕಾದ್ದಿದೆ. (ಪ್ರತಿಷಿದ್ಧವಾದ) ವಿಕರ್ಮದ ವಿಷಯವಾಗಿಯೂ ಅರಿತುಕೊಳ್ಳಬೇಕಾದ್ದಿದೆ. (ಕರ್ಮತ್ಯಾಗವೆಂಬ) ಅಕರ್ಮದ ವಿಚಾರವಾಗಿಯೂ ಅರಿಯಬೇಕಾದ್ದಿದೆ.

ಕರ್ಮಕ್ಕೆ ಸಂಬಂಧಿಸಿದ ಜ್ಞಾನವು ಕ್ಲಿಷ್ಟವಾದದ್ದು.

**ಕರ್ಮಣ್ಯಕರ್ಮ ಯಃ ಪಶ್ಯೇದಕರ್ಮಣಿ ಚ ಕರ್ಮ ಯಃ ।**
**ಸ ಬುದ್ಧಿಮಾನ್ ಮನುಷ್ಯೇಷು ಸ ಯುಕ್ತಃ ಕೃತ್ಸ್ನಕರ್ಮಕೃತ್ ॥ ೧೮**

ಕರ್ಮದಲ್ಲಿ ಅಕರ್ಮವನ್ನೂ ಅಕರ್ಮದಲ್ಲಿ ಕರ್ಮವನ್ನೂ ಯಾವಾತನು ಶೋಧಿಸಿ ಕಂಡುಕೊಳ್ಳುವನೋ ಅವನು ಮನುಷ್ಯರಲ್ಲಿ ಬುದ್ಧಿಶಾಲಿ. ಅವನು ಯೋಗಿ, ಅವನು ಸರ್ವಕರ್ಮಗಳನ್ನೂ ಮಾಡಿದವನು (ಕೃತಕೃತ್ಯ).

ವಿವರಣೆ : ಈ ಶ್ಲೋಕದಲ್ಲಿ ಕರ್ಮವೆಂದರೆ ಕ್ರಿಯಾಸಾಮಾನ್ಯವೆಂದರ್ಥ. ನೋಡುವುದು, ಕೇಳುವುದು, ಹೋಗುವುದು – ಇದೆಲ್ಲ ಕರ್ಮವೇ. ನಾವು ಮಾಡುವ ಕ್ರಿಯೆ ದೇಹೇಂದ್ರಿಯಗಳಿಗೆ ಸೇರಿದ್ದು. ಆತ್ಮನಲ್ಲಿ ಯಾವ ಕ್ರಿಯೆಯೂ ಇಲ್ಲ – ಎಂಬುದು ಸಿದ್ಧಾಂತ. ದೇಹೇಂದ್ರಿಯಗಳು ಕೆಲಸ ಮಾಡುತ್ತಿದ್ದರೂ 'ಆತ್ಮನಾದ ನಾನು ಕರ್ಮವನ್ನು ಮಾಡುತ್ತಿಲ್ಲ' ಎಂದು ತಿಳಿದರೆ ಕರ್ಮದಲ್ಲಿ ಅಕರ್ಮವನ್ನು ಕಂಡಂತಾಯಿತು. 'ಏನೂ ಕೆಲಸ ಮಾಡದೆ ಸುಮ್ಮನೆ ಇದ್ದೇನೆ' ಎಂದು ಆತ್ಮನಲ್ಲಿ ಅಕರ್ಮವನ್ನು ಆರೋಪಿಸಿಕೊಂಡಾಗಲೂ ಅದು 'ನಾನು ಸುಮ್ಮನಿದ್ದೇನೆ' ಎಂಬ ಅಹಂಕಾರರೂಪಕರ್ಮವೇ ಆಗಿಬಿಡುತ್ತದೆ. ಆತ್ಮನಲ್ಲಿ ಪ್ರವೃತ್ತಿ, ನಿವೃತ್ತಿಗಳೆರಡೂ ಇಲ್ಲವೆಂದು ಅಭಿಪ್ರಾಯ. ಇದನ್ನರಿಯುವುದೇ ಕೂಟಸ್ಥನಾದ ಆತ್ಮನ ಜ್ಞಾನ.

**ಯಸ್ಯ ಸರ್ವೇ ಸಮಾರಂಭಾಃ ಕಾಮಸಂಕಲ್ಪವರ್ಜಿತಾಃ ।**
**ಜ್ಞಾನಾಗ್ನಿದಗ್ಧಕರ್ಮಾಣಂ ತಮಾಹುಃ ಪಂಡಿತಂ ಬುಧಾಃ ॥ ೧೯**

ಯಾವಾತನ ಎಲ್ಲ ಕಾರ್ಯಗಳೂ ಆಸೆಯಿಂದ ಮತ್ತು ಆಸೆಗೆ ಕಾರಣವಾದ ಸಂಕಲ್ಪದಿಂದ ವರ್ಜಿತವಾಗಿರುತ್ತವೆಯೋ ಆತನನ್ನು ವಿದ್ವಾಂಸರು ಪಂಡಿತ–ಜ್ಞಾನಿ ಎಂದು ಕರೆಯುತ್ತಾರೆ. ಅವನ ಎಲ್ಲ ಕರ್ಮಗಳೂ ಮೇಲೆ ಹೇಳಿದ ಕರ್ಮಾಕರ್ಮಜ್ಞಾನದಿಂದ ಸುಟ್ಟು ನಾಶವಾಗಿರುತ್ತವೆ.

ವಿವರಣೆ : ಒಂದು ವಸ್ತುವನ್ನು ಮನಸ್ಸಿನಲ್ಲಿ ಮತ್ತೆಮತ್ತೆ ಚಿಂತಿಸುವುದು ಸಂಕಲ್ಪ. ಅದರಿಂದ ಆಸೆ ಹುಟ್ಟುತ್ತದೆ. ಜ್ಞಾನಿಯು ಪ್ರವೃತ್ತಿ ಮಾರ್ಗವನ್ನವಲಂಬಿಸಿದರೆ ಲೋಕಸಂಗ್ರಹಕ್ಕಾಗಿಯೂ ನಿವೃತ್ತಿಮಾರ್ಗವನ್ನು ಹಿಡಿದರೆ ಬದುಕಿರುವ ಮಟ್ಟಿಗೂ ಕರ್ಮವನ್ನು ಮಾಡುತ್ತಾನೆ. ಅದರ ಲೇಪ ಜ್ಞಾನಿಗೆ ಇಲ್ಲ. ತಾನು ಆರಂಭಿಸಿದ ಕರ್ಮವನ್ನು ಆತ್ಮಜ್ಞಾನಿಯಾದ ಮೇಲೂ ಮುಂದುವರಿಸಬಹುದು. ಮುಂದುವರಿಸಕೂಡದೆಂಬ ನಿರ್ಬಂಧವಿಲ್ಲ.

**ತ್ಯಕ್ತ್ವಾ ಕರ್ಮಫಲಾಸಂಗಂ ನಿತ್ಯತೃಪ್ತೋ ನಿರಾಶ್ರಯಃ ।**
**ಕರ್ಮಣ್ಯಭಿಪ್ರವೃತ್ತೋಽಪಿ ನೈವ ಕಿಂಚಿತ್ ಕರೋತಿ ಸಃ ॥ ೨೦**

ಕರ್ಮಫಲದಲ್ಲಿ ಆಸಕ್ತಿಯನ್ನು ತೊರೆದು ನಿತ್ಯತೃಪ್ತನೂ ನಿರಾಶ್ರಯನೂ ಆದವನು ಕರ್ಮದಲ್ಲಿ ತೊಡಗಿದ್ದರೂ (ನಿಜವಾಗಿ) ಅವನು ಏನನ್ನೂ ಮಾಡುತ್ತಿರುವುದಿಲ್ಲ.

**ವಿವರಣೆ :** ನಿರಾಶ್ರಯ = ಯಾವ ಪದಾರ್ಥವನ್ನಾಶ್ರಯಿಸಿ ಫಲವನ್ನು ಸಾಧಿಸಬೇಕೋ ಅದನ್ನು ತೊರೆದವನು. ನಿಷ್ಕ್ರಿಯನಾದ ಆತ್ಮನೇ ತಾನೆಂಬ ಜ್ಞಾನವಿರುವುದರಿಂದ ಜ್ಞಾನಿಯ ದೇಹದಿಂದ ನಡೆಯುವ ಕರ್ಮವು ಆತನ ದೃಷ್ಟಿಯಲ್ಲಿ ಕರ್ಮವೇ ಅಲ್ಲ.

**ನಿರಾಶೀರ್ಯತಚಿತ್ತಾತ್ಮಾ ತ್ಯಕ್ತಸರ್ವಪರಿಗ್ರಹಃ ।**
**ಶಾರೀರಂ ಕೇವಲಂ ಕರ್ಮ ಕುರ್ವನ್ನಾಪ್ನೋತಿ ಕಿಲ್ಬಿಷಮ್ ॥ ೨೧**

ಆಸೆಯನ್ನು ಬಿಟ್ಟವನೂ ಮನಸ್ಸು ಮತ್ತು ಇಂದ್ರಿಯಗಳನ್ನು ನಿಗ್ರಹಿಸಿದವನೂ ತನ್ನದೆಂಬ ಎಲ್ಲ ಪರಿಗ್ರಹವನ್ನು ಬಿಟ್ಟವನೂ ಆದ ಪುರುಷನು ಕೇವಲ ಶರೀರಸ್ಥಿತಿಗೆ ಬೇಕಾದ ಕರ್ಮವನ್ನಾಚರಿಸುತ್ತಿದ್ದರೆ ಅವನಿಗೆ ಯಾವ ಪಾಪವೂ ತಗಲುವುದಿಲ್ಲ. (ಅವನು ಮುಕ್ತನಾಗುತ್ತಾನೆ.)

**ವಿವರಣೆ :** ಹೀಗಿರತಕ್ಕವನಿಗೆ ಪಾಪಪುಣ್ಯಗಳೆರಡೂ ತಗುಲುವುದಿಲ್ಲ. ಮುಮುಕ್ಷುವಿಗೆ ಪುಣ್ಯವೂ ಬಂಧಕವಾದ್ದರಿಂದ ಕಿಲ್ಬಿಷವೇ ಆಗುತ್ತದೆ.

**ಯದೃಚ್ಛಾಲಾಭಸಂತುಷ್ಟೋ ದ್ವಂದ್ವಾತೀತೋ ವಿಮತ್ಸರಃ ।**
**ಸಮಃ ಸಿದ್ಧಾವಸಿದ್ಧೌ ಚ ಕೃತ್ವಾಽಪಿ ನ ನಿಬಧ್ಯತೇ ॥ ೨೨**

ತಾನಾಗಿ ಲಭಿಸಿದ ವಸ್ತುವಿನಿಂದ ಸಂತೃಪ್ತನೂ, ಶೀತೋಷ್ಣಾದಿದ್ವಂದಗಳಿಂದ ವ್ಯಥೆಪಡದವನೂ ನಿರ್ವೈರನೂ, ಯದೃಚ್ಛಾಲಾಭವು ಸಿದ್ಧಿಸಲಿ ಸಿದ್ಧಿಸದಿರಲಿ ಸಮಬುದ್ಧಿಯೂ ಆದ ಆತ್ಮಜ್ಞಾನನಿಷ್ಠನು ಶಾರೀರಕರ್ಮವನ್ನು ಮಾಡಿದರೂ ಬದ್ಧನಾಗುವುದಿಲ್ಲ.

**ಗತಸಂಗಸ್ಯ ಮುಕ್ತಸ್ಯ ಜ್ಞಾನಾವಸ್ಥಿತಚೇತಸಃ ।**
**ಯಜ್ಞಾಯಾಚರತಃ ಕರ್ಮ ಸಮಗ್ರಂ ಪ್ರವಿಲೀಯತೇ ॥ ೨೩**

ಯಾವುದೇ ಲೌಕಿಕವಿಷಯದಲ್ಲಿ ಆಸಕ್ತಿಯಿಲ್ಲದೆ, ಧರ್ಮಾಧರ್ಮಗಳ ಕರ್ಮಬಂಧನದಿಂದ ಬಿಡುಗಡೆಹೊಂದಿ, ಜ್ಞಾನನಿಷ್ಠನಾಗಿರತಕ್ಕವನು ಯಜ್ಞ

ಕ್ಕಾಗಿ ಕರ್ಮವನ್ನು ಮಾಡುತ್ತಿದ್ದರೆ, ಆ ಕರ್ಮವೆನ್ನುವುದು ಫಲಸಹಿತವಾಗಿ ಅಡಗಿಹೋಗುವುದು.

ಏಕೆ ಅಡಗಿಹೋಗುವುದೆಂದರೆ –

**ಬ್ರಹ್ಮಾರ್ಪಣಂ ಬ್ರಹ್ಮ ಹವಿಃ ಬ್ರಹ್ಮಾಗ್ನೌ ಬ್ರಹ್ಮಣಾ ಹುತಮ್ ।**
**ಬ್ರಹ್ಮೈವ ತೇನ ಗಂತವ್ಯಂ ಬ್ರಹ್ಮಕರ್ಮಸಮಾಧಿನಾ ॥** ೨೪

(ಆ ಬ್ರಹ್ಮವಿದನ ಯಜ್ಞದಲ್ಲಿ) ಅರ್ಪಣವಮಾಡುವ ಸ್ರುಕ್, ಸ್ರುವ ಮೊದಲಾದ ಸಾಧನವು ಬ್ರಹ್ಮವೇ. ಹವಿಸ್ಸೂ ಬ್ರಹ್ಮವೇ. ಬ್ರಹ್ಮವೆಂಬ ಅಗ್ನಿಯಲ್ಲಿ ಬ್ರಹ್ಮದಿಂದ ನಡೆದ ಹವನಕ್ರಿಯೆಯೂ ಬ್ರಹ್ಮವೇ. ಬ್ರಹ್ಮವೆಂಬ ಕರ್ಮದಲ್ಲಿ ಚಿತ್ತವನ್ನಿಟ್ಟ ಆತನು ಸೇರಬೇಕಾದದ್ದೂ ಬ್ರಹ್ಮವೇ.

**ವಿವರಣೆ :** ಲೋಕಸಂಗ್ರಹವನ್ನು ಮಾಡುವವನಿಗೆ ಕರ್ಮವು ಅಕರ್ಮವೇ. ಕರ್ಮವೂ ಬ್ರಹ್ಮವೆಂಬ ಬುದ್ಧಿ ಅವನಿಗಿರುತ್ತದೆ. ಸಂನ್ಯಾಸಿಗೆ ಜ್ಞಾನವೇ ಸರ್ವ ಕರ್ಮವೂ ಆಗಿದೆ. ಈ ಶ್ಲೋಕದಲ್ಲಿ ಜ್ಞಾನವೇ ಯಜ್ಞವೆಂದು ರೂಪಿಸಲಾಗಿದೆ.

ಹೀಗೆ ಸಮ್ಯಗ್ದರ್ಶನಕ್ಕೆ ಯಜ್ಞತ್ವವನ್ನು ರೂಪಿಸಿ ಅದನ್ನು ಸ್ತುತಿಸುವುದಕ್ಕಾಗಿ ಇನ್ನೂ ಕೆಲವು ಯಜ್ಞಗಳನ್ನು ಇಲ್ಲಿ ತಿಳಿಸಲಾಗುತ್ತದೆ –

**ದೈವಮೇವಾಪರೇ ಯಜ್ಞಂ ಯೋಗಿನಃ ಪರ್ಯುಪಾಸತೇ ।**
**ಬ್ರಹ್ಮಾಗ್ನಾವಪರೇ ಯಜ್ಞಂ ಯಜ್ಞೇನೈವೋಪಜುಹ್ವತಿ ॥** ೨೫

ಕೆಲವು ಕರ್ಮಯೋಗಿಗಳು ದೇವತೆಗಳನ್ನುದ್ದೇಶಿಸಿ ಮಾಡುವ ದೈವ ಯಜ್ಞವನ್ನಾಚರಿಸುತ್ತಾರೆ. ಇನ್ನು ಕೆಲವು ಬ್ರಹ್ಮಜ್ಞಾನಿಗಳು ಯಜ್ಞವನ್ನು – ಉಪಾಧಿವಿಶಿಷ್ಟವಾದ ಜೀವಾತ್ಮವನ್ನು, ಯಜ್ಞದಿಂದಲೇ – ಬ್ರಹ್ಮರೂಪ ಆತ್ಮನಿಂದಲೇ ಬ್ರಹ್ಮವೆಂಬ ಅಗ್ನಿಯಲ್ಲಿ ಹೋಮ ಮಾಡುತ್ತಾರೆ.

**ವಿವರಣೆ :** ಯಜ್ಞಶಬ್ದಕ್ಕೆ ಆತ್ಮನೆಂಬ ಅರ್ಥವೂ ಇದೆ (ನಿರುಕ್ತಪರಿಶಿಷ್ಟ ೧೪–೧೧) ಜೀವಾತ್ಮನನ್ನು ಪರಬ್ರಹ್ಮರೂಪದಿಂದ ಕಾಣುವುದೂ ಹೋಮವೇ.

**ಶ್ರೋತ್ರಾದೀನೀಂದ್ರಿಯಾಣ್ಯನ್ಯೇ ಸಂಯಮಾಗ್ನಿಷು ಜುಹ್ವತಿ ।**
**ಶಬ್ದಾದೀನ್ ವಿಷಯಾನನ್ಯೇ ಇಂದ್ರಿಯಾಗ್ನಿಷು ಜುಹ್ವತಿ ॥** ೨೬

ಕೆಲವರು ಶ್ರೋತ್ರವೇ ಮುಂತಾದ ಇಂದ್ರಿಯಗಳನ್ನು ಸಂಯಮಾಗ್ನಿಗಳಲ್ಲಿ ಹೋಮಿಸುತ್ತಾರೆ. (ಇಂದ್ರಿಯನಿಗ್ರಹವೆಂಬ ಯಜ್ಞವನ್ನಾಚರಿಸುತ್ತಾರೆ.) ಹಲವರು ಶಬ್ದಾದಿವಿಷಯಗಳನ್ನೇ ಇಂದ್ರಿಯಾಗ್ನಿಗಳಲ್ಲಿ ಹೋಮಿಸುತ್ತಾರೆ

(ಧರ್ಮವಿರುದ್ಧವಲ್ಲದ ಶಬ್ದಾದಿವಿಷಯಗಳನ್ನು ಮಾತ್ರ ಸೇವಿಸುತ್ತಾರೆ.)

**ಸರ್ವಾಣೀಂದ್ರಿಯಕರ್ಮಾಣಿ ಪ್ರಾಣಕರ್ಮಾಣಿ ಚಾಪರೇ ।**
**ಆತ್ಮಸಂಯಮಯೋಗಾಗ್ನೌ ಜುಹ್ವತಿ ಜ್ಞಾನದೀಪಿತೇ ॥** ೨೭

ಇನ್ನು ಇತರರು ಶ್ರೋತ್ರವೇ ಮೊದಲಾದ ಇಂದ್ರಿಯಗಳ ಶ್ರವಣಾದಿಕರ್ಮಗಳನ್ನೂ ಪ್ರಾಣವಾಯುವಿನಿಂದಾಗುವ ದೈಹಿಕಕರ್ಮಗಳನ್ನೂ ವಿವೇಕವಿಜ್ಞಾನದಿಂದ ಉಜ್ವಲವಾದ ಯೋಗಾಗ್ನಿಯಲ್ಲಿ ಹವನ ಮಾಡುತ್ತಾರೆ. ಆತ್ಮನಲ್ಲಿ ಮನೋನಿಯಮನವೇ ಯೋಗ.

**ವಿವರಣೆ :** ಹಿಂದಿನ ಶ್ಲೋಕದಲ್ಲಿ ಮನಸ್ಸನ್ನು ಏಕಾಗ್ರವಾಗಿ ನಿಲ್ಲಿಸುವ ಯೋಗವನ್ನು ಹೇಳಿದೆ. ಇಲ್ಲಿ ಇಂದ್ರಿಯಪ್ರಾಣಗಳನ್ನೂ ಆತ್ಮರೂಪವಾಗಿ ತಿಳಿದು ಅವನ್ನು ಜಯಿಸುವ ಯೋಗವನ್ನು ಹೇಳಿದೆ.

**ದ್ರವ್ಯಯಜ್ಞಾಸ್ತಪೋಯಜ್ಞಾ ಯೋಗಯಜ್ಞಾಸ್ತಥಾಪರೇ ।**
**ಸ್ವಾಧ್ಯಾಯಜ್ಞಾನಯಜ್ಞಾಶ್ಚ ಯತಯಃ ಸಂಶಿತವ್ರತಾಃ ॥** ೨೮

ಇನ್ನು ಕೆಲವರು ದ್ರವ್ಯಯಜ್ಞರು; ಕೆಲವರು ತಪೋಯಜ್ಞರು; ಹಾಗೆಯೇ ಯೋಗಯಜ್ಞರಿದ್ದಾರೆ. ಸ್ವಾಧ್ಯಾಯಯಜ್ಞರೂ ಜ್ಞಾನಯಜ್ಞರೂ ಇದ್ದಾರೆ. ಇವರೆಲ್ಲರೂ ತೀಕ್ಷ್ಣವ್ರತಧಾರಿಗಳಾದ ಪ್ರಯತ್ನಶೀಲರು.

**ವಿವರಣೆ :** ಕ್ರಿಯೆಯು ಯಜ್ಞವೆಂಬ ಭಾವನೆ ಮುಂದೆ ಉಕ್ತರಾದ ಎಲ್ಲರಲ್ಲಿಯೂ ಇರಬೇಕು. ಯೋಗ್ಯಪಾತ್ರಗಳಲ್ಲಿ ದಾನ ಮಾಡತಕ್ಕವರು ದ್ರವ್ಯಯಜ್ಞರು. ತಪೋನಿಷ್ಠರಾದವರು ತಪೋಯಜ್ಞರು. ಪ್ರಾಣಾಯಾಮಾದಿ ಯೋಗಮಾರ್ಗನಿಷ್ಠರು ಯೋಗಯಜ್ಞರು. ವೇದಾಧ್ಯಯನವನ್ನು ನಿಯತವಾಗಿ ಮಾಡತಕ್ಕವರು ಸ್ವಾಧ್ಯಾಯಯಜ್ಞರು. ವ್ಯಾಕರಣಾದಿಶಾಸ್ತ್ರಜ್ಞಾನದಲ್ಲಿ ನಿರತರಾದವರು ಜ್ಞಾನಯಜ್ಞರು. ಯತಿ=ಪ್ರಯತ್ನಶೀಲ.

**ಅಪಾನೇ ಜುಹ್ವತಿ ಪ್ರಾಣಂ ಪ್ರಾಣೇಽಪಾನಂ ತಥಾಪರೇ ।**
**ಪ್ರಾಣಾಪಾನಗತೀ ರುದ್ಧ್ವಾ ಪ್ರಾಣಾಯಾಮಪರಾಯಣಾಃ ॥** ೨೯

ಪ್ರಾಣಾಯಾಮದಲ್ಲಿ ಆಸಕ್ತರಾದ ಕೆಲವರು ಪ್ರಾಣವಾಯುವನ್ನು ಅಪಾನವಾಯುವಿನಲ್ಲಿ ಹೋಮಮಾಡುತ್ತಾರೆ (ಇದು ಪೂರಕವೆಂಬ ಪ್ರಾಣಾಯಾಮ). ಕೆಲವರು ಅಪಾನವನ್ನು ಪ್ರಾಣದಲ್ಲಿ ಹೋಮಿಸುತ್ತಾರೆ (ಇದು ರೇಚಕ). ಹಲವರು ಪ್ರಾಣಾಪಾನವಾಯುಗಳೆರಡರ ಗತಿಯನ್ನೂ ತಡೆಯು

ತ್ತಾರೆ (ಇದು ಕುಂಭಕ).

**ವಿವರಣೆ :** ಪ್ರಾಣಾಯಾಮವು ಪೂರಕ, ರೇಚಕ, ಕುಂಭಕ – ಎಂದು ಮೂರು ವಿಧ. ಉಸಿರನ್ನು ದೀರ್ಘವಾಗಿ ಒಳಗೆ ತೆಗೆದುಕೊಳ್ಳುವುದು ಪೂರಕ. ಉಸಿರನ್ನು ಹೊರಗೆ ಬಿಡುವುದು ರೇಚಕ. ಈ ಉಚ್ಛ್ವಾಸನಿಃಶ್ವಾಸಗಳನ್ನು ತಡೆದು ನಿಲ್ಲಿಸುವುದು ಕುಂಭಕ. ದೇಹದಿಂದ ಊರ್ಧ್ವಗಾಮಿಯಾಗಿ ಉಸಿರನ್ನು ಮೂಗಿನ ಮೂಲಕ ಹೊರಗೆ ಬಿಡುವುದು ಪ್ರಾಣದ ಗತಿಯೆಂದೂ ಉಸಿರನ್ನು ದೇಹದಲ್ಲಿ ಅಧೋಗಾಮಿಯಾಗಿ ಒಳಗೆ ತೆಗೆದುಕೊಳ್ಳುವುದು ಅಪಾನದ ಗತಿಯೆಂದೂ ತಿಳಿಯಬೇಕು. ಹಾಗೆಯೇ ಅಧೋಗಾಮಿಯಾಗಿ ಗುದದ್ವಾರದಿಂದ ವಾಯುವು ಹೊರಗೆ ಹೋಗುವುದೂ ಅಪಾನದ ವ್ಯಾಪಾರವೇ. ಪೂರಕದಲ್ಲಿ ಒಳಗೆ ತೆಗೆದುಕೊಳ್ಳುವ ವಾಯು ಅಧೋಗಾಮಿಯಾದ್ದರಿಂದ ಅಪಾನವೆನಿಸುತ್ತದೆ. ಇಲ್ಲಿ ಬಹಿರ್ಗಮನವು ಪೂರ್ತಿಯಾಗಿ ನಿಂತಿರುವುದರಿಂದ ಪ್ರಾಣವನ್ನು ಅಪಾನದಲ್ಲಿ ಸೇರಿಸಿದಂತಾಯಿತು. ಅಪಾನವು ಅಗ್ನಿಸ್ಥಾನದಲ್ಲಿಯೂ ಪ್ರಾಣವು ಹವಿಸ್ಸಿನ ಸ್ಥಾನದಲ್ಲಿಯೂ ಇದೆಯೆಂದು ತಿಳಿಯಬೇಕು. ಇದು ಪೂರಕ. ರೇಚಕದಲ್ಲಾದರೋ ಇದಕ್ಕೆ ವಿರುದ್ಧವಾಗಿ ಊರ್ಧ್ವಗತಿಯಲ್ಲಿರುವ ಪ್ರಾಣದಲ್ಲಿ ಅಪಾನವನ್ನು ಹೋಮ ಮಾಡಿದಂತಾಗುತ್ತದೆ. ಇವೆಲ್ಲವೂ ಹಠಯೋಗಿಗಳಿಗೆ ಮಾತ್ರ ಗೊತ್ತಿರುವ ರಹಸ್ಯಗಳು. ಪ್ರಕೃತದಲ್ಲಿ ಇವೆಲ್ಲವೂ ಯಜ್ಞಗಳೆಂದು ತಿಳಿದುಕೊಂಡರೆ ಸಾಕಾಗುತ್ತದೆ.

**ಅಪರೇ ನಿಯತಾಹಾರಾಃ ಪ್ರಾಣಾನ್ ಪ್ರಾಣೇಷು ಜುಹ್ವತಿ ।**
**ಸರ್ವೇಽಪ್ಯೇತೇ ಯಜ್ಞವಿದೋ ಯಜ್ಞಕ್ಷಪಿತಕಲ್ಮಷಾಃ ॥ ೩೦**

ಇನ್ನು ಕೆಲವರು ಆಹಾರನಿಯಮವನ್ನು ಪಾಲಿಸುತ್ತ ಪ್ರಾಣಗಳೆಂಬ ಈ ಪಂಚವಾಯುಗಳನ್ನು ವಿಭಿನ್ನ ಪಂಚಪ್ರಾಣಗಳಲ್ಲಿ ಹೋಮ ಮಾಡುತ್ತಾರೆ. ಇವರೆಲ್ಲರೂ ಯಜ್ಞಗಳನ್ನು ಬಲ್ಲವರು. ಯಜ್ಞಗಳಿಂದ ಕಲ್ಮಷಗಳನ್ನು ಕಳೆದುಕೊಂಡಿರತಕ್ಕವರು.

**ವಿವರಣೆ :** ಪ್ರಾಣ, ಅಪಾನ, ವ್ಯಾನ, ಉದಾನ, ಸಮಾನ – ಎಂಬ ಐದು ವಾಯುಗಳಿವೆ. ಈ ಪಂಚವಾಯುಗಳಿಗೆ ಪ್ರಾಣ ಎಂಬ ವ್ಯಾಪಕವಾದ ಹೆಸರೂ ಇದೆ. ಆಯಾ ವಾಯುಗತಿಯನ್ನು ತಡೆಯುವುದೇ ವಾಯುಜಯ. ಜಿತವಾದ ವಾಯುವಿನಲ್ಲಿ ಇತರ ವಾಯುಗಳನ್ನು ಹೋಮಮಾಡಿದ ಹಾಗೆಂದು ತಿಳಿಯಬೇಕು.

**ಯಜ್ಞಶಿಷ್ಟಾಮೃತಭುಜೋ ಯಾಂತಿ ಬ್ರಹ್ಮ ಸನಾತನಮ್ ।**
**ನಾಯಂ ಲೋಕೋಽಸ್ತ್ಯಯಜ್ಞಸ್ಯ ಕುತೋಽನ್ಯಃ ಕುರುಸತ್ತಮ ॥ ೩೧**

ಯಜ್ಞವನ್ನು ಮಾಡಿ ಉಳಿದ ಯಾವ ಅಮೃತ ಉಂಟೋ ಅದನ್ನು ಭುಂಜಿಸತಕ್ಕ ಜನರು ಸನಾತನವಾದ ಬ್ರಹ್ಮವನ್ನೈದುತ್ತಾರೆ. ಯಜ್ಞವಿಲ್ಲದವನಿಗೆ ಈ ಲೋಕವೇ ಇಲ್ಲ. ಕುರುಶ್ರೇಷ್ಠ–ಅರ್ಜುನ, ಅಂಥವನಿಗೆ ಪರಲೋಕ ದೊರಕೀತೆ ?

**ವಿವರಣೆ :** 'ಯಜ್ಞಶೇಷಮಥಾಮೃತಂ' (ಮನು. ೩–೨೮೫) ಎಂಬ ವಚನದಂತೆ ಯಜ್ಞಶಿಷ್ಟವಾದದ್ದು ಅಮೃತವೆನಿಸುತ್ತದೆ. ಕರ್ಮರೂಪವಾದ ಯಜ್ಞವನ್ನಾಚರಿಸತಕ್ಕವರು ಮುಮುಕ್ಷುಗಳಾಗಿದ್ದರೆ, ಚಿತ್ತಶುದ್ಧಿಯಾಗಿ ಬ್ರಹ್ಮ ಜ್ಞಾನವಾದಮೇಲೆ ಮೋಕ್ಷವು ಲಭಿಸುತ್ತದೆಯೆಂದೂ ಇಲ್ಲದಿದ್ದರೆ ಸ್ವರ್ಗಾದಿ ಲೋಕವು ದೊರೆಯುತ್ತದೆಯೆಂದೂ ತಿಳಿಯಬೇಕು.

**ಏವಂ ಬಹುವಿಧಾ ಯಜ್ಞಾ ವಿತತಾ ಬ್ರಹ್ಮಣೋ ಮುಖೇ ।**
**ಕರ್ಮಜಾನ್ ವಿದ್ಧಿ ತಾನ್ ಸರ್ವಾನೇವಂ ಜ್ಞಾತ್ವಾ ವಿಮೋಕ್ಷ್ಯಸೇ ॥ ೩೨**

ಈ ಪ್ರಕಾರದಲ್ಲಿ ಬಹುವಿಧವಾದ ಯಜ್ಞಗಳು ವೇದದ್ವಾರಾ ಪ್ರಕಟವಾಗಿವೆ. ಆ ಎಲ್ಲ ಯಜ್ಞಗಳೂ ಕರ್ಮಜನ್ಯವಾದವು (ಆತ್ಮಜನ್ಯವಲ್ಲ. ಆತ್ಮನು ನಿಷ್ಕ್ರಿಯ) ಎಂಬುದಾಗಿ ನೀನು ತಿಳಿದರೆ ಮುಕ್ತನಾಗುವೆ. ಏಕೆಂದರೆ,

**ಶ್ರೇಯಾನ್ ದ್ರವ್ಯಮಯಾದ್ಯಜ್ಞಾತ್ ಜ್ಞಾನಯಜ್ಞಃ ಪರಂತಪ ।**
**ಸರ್ವಂ ಕರ್ಮಾಖಿಲಂ ಪಾರ್ಥ ಜ್ಞಾನೇ ಪರಿಸಮಾಪ್ಯತೇ ॥ ೩೩**

ದ್ರವ್ಯವೆಂಬ ಸಾಧನದಿಂದ ಆಗುವ ಯಜ್ಞಕ್ಕಿಂತ ಜ್ಞಾನಯಜ್ಞವು ಶ್ರೇಯಸ್ಕರ ವಾದದ್ದು. ಹೇಗೆಂದರೆ, ಪಾರ್ಥ, ಸಮಸ್ತಕರ್ಮವೂ (ಮೋಕ್ಷಸಾಧನವಾದ) ಜ್ಞಾನದಲ್ಲಿ ಸಮಾಪ್ತವಾಗುತ್ತದೆ (ಜ್ಞಾನದಲ್ಲಿ ಅಡಕವಾಗುತ್ತದೆ).

**ತದ್ವಿದ್ಧಿ ಪ್ರಣಿಪಾತೇನ ಪರಿಪ್ರಶ್ನೇನ ಸೇವಯಾ ।**
**ಉಪದೇಕ್ಷ್ಯಂತಿ ತೇ ಜ್ಞಾನಂ ಜ್ಞಾನಿನಸ್ತತ್ತ್ವದರ್ಶಿನಃ ॥ ೩೪**

(ಆಚಾರ್ಯರ ಬಳಿಗೆ ಹೋಗಿ) ದೀರ್ಘದಂಡನಮಸ್ಕಾರ ಮಾಡಿ, ಪ್ರಶ್ನೆ ಗಳನ್ನು ಹಾಕಿ, ಗುರುಶುಶ್ರೂಷೆ ಮಾಡಿ ಆತ್ಮಜ್ಞಾನಸಾಧನವೇನೆಂಬುದನ್ನು ತಿಳಿದುಕೊ. ತತ್ತ್ವದರ್ಶಿಗಳಾದ ಆತ್ಮಜ್ಞಾನಿಗಳು ಜ್ಞಾನವೇನೆಂಬುದನ್ನು ನಿನಗೆ ತಿಳಿಸಿಕೊಡುವರು.

**ಯಜ್ಜ್ಞಾತ್ವಾ ನ ಪುನರ್ಮೋಹಮೇವಂ ಯಾಸ್ಯಸಿ ಪಾಂಡವ ।**
**ಯೇನ ಭೂತಾನ್ಯಶೇಷೇಣ ದ್ರಕ್ಷ್ಯಸ್ಯಾತ್ಮನ್ಯಥೋ ಮಯಿ ॥ ೩೫**

ಪಾಂಡವ, ಅದನ್ನು ಅರಿತುಕೊಂಡರೆ ಮತ್ತೆ ಹೀಗೆ ನೀನು ಮೋಹವನ್ನು ಹೊಂದುವುದಿಲ್ಲ. ಆ ಬ್ರಹ್ಮಜ್ಞಾನದಿಂದ (ಬ್ರಹ್ಮನಿಂದ ಹಿಡಿದು ಸ್ಥಾವರಾಂತವಾದ) ಸಮಸ್ತ ಭೂತಗಳು ನಿನ್ನಲ್ಲಿ, ಹಾಗೆಯೇ ಪರಮೇಶ್ವರನಾದ ನನ್ನಲ್ಲಿ, ಇವೆಯೆಂಬುದನ್ನು ಕಾಣುವೆ.

**ವಿವರಣೆ :** ಕ್ಷೇತ್ರಜ್ಞನಾದ ಜೀವನೂ ಪರಮೇಶ್ವರನೂ ಒಂದೇ ತತ್ತ್ವವೆಂಬುದು ಇದರಿಂದ ಗೊತ್ತಾಗುತ್ತದೆ. ಜೀವಾತ್ಮನೆಂದರೆ ಅಂತಃಕರಣವೆಂಬ ಉಪಾಧಿಗೆ ಒಳಗಾದ ಚೈತನ್ಯ. ಪರಮಾತ್ಮನೆಂದರೆ ಮಾಯೆಯೆಂಬ ಉಪಾಧಿಯನ್ನಾಶ್ರಯಿಸಿದ ಚೈತನ್ಯ. ಈ ಎರಡು ಉಪಾಧಿಗಳನ್ನೂ ಕಳೆದರೆ ಉಳಿಯತಕ್ಕದ್ದು ಬ್ರಹ್ಮವೆಂಬ ಒಂದೇ ಚೈತನ್ಯ.

**ಅಪಿ ಚೇದಸಿ ಪಾಪೇಭ್ಯಃ ಸರ್ವೇಭ್ಯಃ ಪಾಪಕೃತ್ತಮಃ ।**
**ಸರ್ವಂ ಜ್ಞಾನಪ್ಲವೇನೈವ ವೃಜಿನಂ ಸಂತರಿಷ್ಯಸಿ ॥ ೩೬**

ಒಂದು ವೇಳೆ ನೀನು ಪಾಪಿಗಳಿಗಿಂತಲೂ ಹೆಚ್ಚಿನ ಪರಮಪಾಪಿಯಾಗಿದ್ದರೂ ಸಹ, ಆ ಎಲ್ಲ ಪಾಪವನ್ನೂ ಜ್ಞಾನವೆಂಬ ದೋಣಿಯಿಂದ ದಾಟಿಬಿಡುತ್ತೀಯೆ !

**ಯಥೈಧಾಂಸಿ ಸಮಿದ್ಧೋಽಗ್ನಿರ್ಭಸ್ಮಸಾತ್ ಕುರುತೇಽರ್ಜುನ ।**
**ಜ್ಞಾನಾಗ್ನಿಃ ಸರ್ವಕರ್ಮಾಣಿ ಭಸ್ಮಸಾತ್ಕುರುತೇ ತಥಾ ॥ ೩೭**

ಪ್ರಜ್ವಲಿತವಾದ ಅಗ್ನಿಯು ಕಟ್ಟಿಗೆಗಳನ್ನು ಹೇಗೆ ಸುಟ್ಟು ಬೂದಿ ಮಾಡುವುದೋ ಹಾಗೆ ಜ್ಞಾನಾಗ್ನಿಯು ಸಮಸ್ತಕರ್ಮಗಳನ್ನೂ ಸುಟ್ಟು ಬೂದಿ ಮಾಡುವುದು.

**ವಿವರಣೆ :** ಜ್ಞಾನಾಗ್ನಿಯು ಕರ್ಮಗಳನ್ನು ಸುಡುತ್ತದೆಯೆಂದರೆ, ಕರ್ಮಗಳಿಗೆ ಫಲವಿಲ್ಲದಂತೆ ಮಾಡುತ್ತದೆಯೆಂದರ್ಥ. ಆಗ ಯಾವ ಕರ್ಮವೂ ಮತ್ತೆ ಶರೀರವನ್ನುಂಟುಮಾಡುವುದಿಲ್ಲ.

**ನ ಹಿ ಜ್ಞಾನೇನ ಸದೃಶಂ ಪವಿತ್ರಮಿಹ ವಿದ್ಯತೇ ।**
**ತತ್ ಸ್ವಯಂ ಯೋಗಸಂಸಿದ್ಧಃ ಕಾಲೇನಾತ್ಮನಿ ವಿಂದತಿ ॥ ೩೮**

ಜ್ಞಾನಕ್ಕೆ ಸಮವಾಗಿ ಶುದ್ಧಿಕರವಾದ ಇನ್ನೊಂದು ಪವಿತ್ರ ವಸ್ತು ಇಲ್ಲ. ಕರ್ಮಯೋಗ ಧ್ಯಾನಯೋಗಗಳಿಂದ ಸಂಸ್ಕಾರಹೊಂದಿ ಯೋಗ್ಯತೆಯನ್ನು

ಪಡೆದವನು ಕಾಲಾಂತರದಲ್ಲಿ ಜ್ಞಾನವನ್ನು ತನ್ನಲ್ಲಿ ತಾನೇ ಪಡೆದುಕೊಳ್ಳುವನು.

**ಶ್ರದ್ಧಾವಾನ್ ಲಭತೇ ಜ್ಞಾನಂ ತತ್ಪರಃ ಸಂಯತೇಂದ್ರಿಯಃ ।**
**ಜ್ಞಾನಂ ಲಬ್ಧ್ವಾ ಪರಾಂ ಶಾಂತಿಮಚಿರೇಣಾಧಿಗಚ್ಛತಿ ॥ ೩೯**

ಶ್ರದ್ಧಾಳುವೂ ಜ್ಞಾನಪ್ರಾಪ್ತಿಗಾಗಿ ತತ್ಪರನೂ ಜಿತೇಂದ್ರಿಯನೂ ಆದ ಮನುಷ್ಯನು ಜ್ಞಾನವನ್ನು ಪಡೆಯುತ್ತಾನೆ. ಜ್ಞಾನವನ್ನು ಪಡೆದಮೇಲೆ ಪರಮ ಶಾಂತಿಯೆಂಬ ಮೋಕ್ಷವನ್ನು ಶೀಘ್ರದಲ್ಲಿಯೇ ಪಡೆಯುವನು.

**ಅಜ್ಞಶ್ಚಾಶ್ರದ್ದಧಾನಶ್ಚ ಸಂಶಯಾತ್ಮಾ ವಿನಶ್ಯತಿ ।**
**ನಾಯಂ ಲೋಕೋಽಸ್ತಿ ನ ಪರೋ ನ ಸುಖಂ ಸಂಶಯಾತ್ಮನಃ ॥ ೪೦**

ಅಜ್ಞನೂ ಶ್ರದ್ಧೆಯಿಲ್ಲದವನೂ ಸಂಶಯಾತ್ಮನೂ ನಾಶಹೊಂದುತ್ತಾರೆ. ಸಂಶಯಾತ್ಮನಿಗಂತೂ ಇಹವೂ ಇಲ್ಲ, ಪರವೂ ಇಲ್ಲ, ಯಾವ ಸುಖವೂ ಇಲ್ಲ.

**ವಿವರಣೆ :** ಅಜ್ಞನೂ ಶ್ರದ್ಧೆಯಿಲ್ಲದವನೂ ಹಾಳಾಗುವುದು ನಿಜ. ಆದರೆ ಸಂಶಯಾತ್ಮನು ಕೆಡುವಷ್ಟು ಅವರು ಕೆಡುವುದಿಲ್ಲ. ಸಂಶಯವು ಸರ್ವರಿಗೂ ಕೆಟ್ಟದು. ಅಜ್ಞನಿಗೂ ಶ್ರದ್ಧೆ ಇಲ್ಲದವನಿಗೂ ಇಹವಾದರೂ ಇರುತ್ತದೆ.

**ಯೋಗಸಂನ್ಯಸ್ತಕರ್ಮಾಣಂ ಜ್ಞಾನಸಂಛಿನ್ನಸಂಶಯಮ್ ।**
**ಆತ್ಮವಂತಂ ನ ಕರ್ಮಾಣಿ ನಿಬಧ್ನಂತಿ ಧನಂಜಯ ॥ ೪೧**

ಜ್ಞಾನಯೋಗದಿಂದ ಕರ್ಮಗಳನ್ನು ಪರಿತ್ಯಜಿಸಿ, ಆತ್ಮಜ್ಞಾನದಿಂದ ಸಂಶಯವನ್ನು ಕತ್ತರಿಸಿಕೊಂಡಿರುವ ಆತ್ಮವಂತನನ್ನು (ಪ್ರಮಾದರಹಿತನನ್ನು), ಅರ್ಜುನ, ಕರ್ಮಗಳು ಎಂದಿಗೂ ಬಂಧಿಸುವುದಿಲ್ಲ.

**ತಸ್ಮಾದಜ್ಞಾನಸಂಭೂತಂ ಹೃತ್‌ಸ್ಥಂ ಜ್ಞಾನಾಸಿನಾತ್ಮನಃ ।**
**ಛಿತ್ತ್ವೈನಂ ಸಂಶಯಂ ಯೋಗಮಾತಿಷ್ಠೋತ್ತಿಷ್ಠ ಭಾರತ ॥ ೪೨**

**ಇತಿ ಶ್ರೀಮದ್ಭಗವದ್ಗೀತಾಸೂಪನಿಷತ್ಸು ಬ್ರಹ್ಮವಿದ್ಯಾಯಾಂ ಯೋಗಶಾಸ್ತ್ರೇ**
**ಜ್ಞಾನಯೋಗೋ ನಾಮ ಚತುರ್ಥೋಽಧ್ಯಾಯಃ**

ಆದಕಾರಣ ನಿನ್ನ ಹೃದಯದಲ್ಲಿರುವ ಅಜ್ಞಾನಜನ್ಯವಾದ ಈ ನಿನ್ನ ಆತ್ಮವಿಷಯದ ಸಂಶಯವನ್ನು ಜ್ಞಾನಖಡ್ಗದಿಂದ ಕತ್ತರಿಸಿಹಾಕು. ಅರ್ಜುನ, ಕರ್ಮಯೋಗವನ್ನಾಚರಿಸು. ಎದ್ದು ನಿಲ್ಲು!

ಇಲ್ಲಿಗೆ ಶ್ರೀಮದ್ಭಗವದ್ಗೀತೆಯಲ್ಲಿ ಜ್ಞಾನಯೋಗವೆಂಬ
ನಾಲ್ಕನೆಯ ಅಧ್ಯಾಯವು ಸಮಾಪ್ತವಾಯಿತು.

## ೪ನೆಯ ಅಧ್ಯಾಯದ ಸಾರ

ಎರಡನೆಯ ಮತ್ತು ಮೂರನೆಯ ಅಧ್ಯಾಯಗಳಲ್ಲಿ ಕರ್ಮಯೋಗವನ್ನೂ ಅದರಿಂದ ಸಿದ್ಧಿಸುವ ಜ್ಞಾನಯೋಗವನ್ನೂ ತಿಳಿಸಲಾಯಿತು. ಅವೆರಡನ್ನೂ ಸಂಕ್ಷಿಪ್ತವಾಗಿ ಹೇಳಿದ್ದರಿಂದ ಅರ್ಜುನನ ಪ್ರಶ್ನೆಗೆ ಅನುಗುಣವಾಗಿ ಮುಂದಿನ ಅಧ್ಯಾಯಗಳಲ್ಲಿ ವಿಸ್ತರಿಸಲಾಗುತ್ತದೆ. ಈ ಯೋಗವು ಭಗವಂತನಿಂದ ಪ್ರಾರಂಭವಾಗಿದ್ದು ಬಹಳ ಕಾಲದವರೆಗೆ ಸಂಪ್ರದಾಯವನ್ನನುಸರಿಸಿ ಪ್ರಚಲಿತವಾಗಿತ್ತು. ಆನಂತರ ಸಮರ್ಥರಾದವರು ಬಾರದೇ ಇದ್ದುದರಿಂದ ದೀರ್ಘಕಾಲ ಲುಪ್ತವಾಯಿತೆಂದೂ ಅದನ್ನು ಮತ್ತೆ ಅರ್ಜುನನಿಗೆ ತಿಳಿಸಿರುವುದಾಗಿಯೂ ಶ್ರೀಕೃಷ್ಣನು ಹೇಳಿದ್ದಾನೆ –

ಸಜ್ಜನರ ರಕ್ಷಣೆ, ದುರ್ಜನರ ನಾಶಗಳಿಗಾಗಿ ಮತ್ತು ಧರ್ಮವನ್ನು ಉದ್ಧರಿಸುವುದಕ್ಕಾಗಿ ಪರಮಾತ್ಮನು ತನ್ನ ಮಾಯಾಶಕ್ತಿಯಿಂದ ಆಗಾಗ ಅವತಾರಗಳನ್ನು ಮಾಡುತ್ತಾನೆ. ಜ್ಞಾನವೈರಾಗ್ಯಸಂಪನ್ನರಾಗಿ ಮೋಕ್ಷವನ್ನು ಪಡೆಯಲು ಅರ್ಹತೆಯಿದ್ದರೂ ಜನರು ವರ್ಣಾಶ್ರಮವಿಹಿತಕರ್ಮಗಳನ್ನು ಮಾಡಿ ಕರ್ಮಫಲಭೋಗಗಳನ್ನು ಪಡೆಯುವುದಕ್ಕೇ ಹೆಚ್ಚಾಗಿ ಅಪೇಕ್ಷಿಸುತ್ತಾರೆ. ಏಕೆಂದರೆ, ಕರ್ಮಫಲವು ಬೇಗ ದೊರೆಯುತ್ತದೆ. ಫಲಾಸಕ್ತಿ ಇಲ್ಲದೆ ಕರ್ಮವನ್ನಾಚರಿಸಿದರೆ ಮಾತ್ರ ಜ್ಞಾನನಿಷ್ಠೆಗೆ ದಾರಿಯಾಗುವುದು. ಭಗವಂತನು ಕರ್ಮಗಳನ್ನು ಮಾಡುತ್ತಿದ್ದರೂ ಫಲಾಪೇಕ್ಷೆಯಿಲ್ಲದ್ದರಿಂದ ಅವನಿಗೆ ಕರ್ಮಬಂಧವಿರುವುದಿಲ್ಲ. ಕರ್ಮದ ವಿಷಯವನ್ನರಿಯುವುದು ಬಹುಕಷ್ಟ. ಜನರು "ನಾವು ಕರ್ಮವನ್ನು ಮಾಡುತ್ತೇವೆ" ಎಂದು ತಿಳಿದುಕೊಂಡಿರುತ್ತಾರೆ. ಆದರೆ ಅವರ ಸ್ವರೂಪನಾದ ಆತ್ಮನು ಯಾವ ಕರ್ಮವನ್ನೂ ಮಾಡುವುದಿಲ್ಲ. ಕರ್ಮದಲ್ಲಿ ಅಕರ್ಮವನ್ನು ನೋಡುವುದೆಂದರೆ ಇದೇ. "ನಾನು ಕರ್ಮವನ್ನು ಮಾಡದೆ ಸುಮ್ಮನೆ ಕುಳಿತಿದ್ದೇನೆ" ಎನ್ನುವುದೂ ತಪ್ಪು. ಏಕೆಂದರೆ, ಅದರಲ್ಲಿ ನಾನು ಎಂಬ ಅಹಂಕಾರವಿರುವುದರಿಂದ ಅದು ಮನಸ್ಸಿನ ಕರ್ಮವೇ ಆಗಿರುತ್ತದೆ. ಅಕರ್ಮದಲ್ಲಿ ಕರ್ಮವನ್ನು ಕಾಣುವುದೆಂದರೆ ಇದೇ. ಹೀಗೆ ಜನರು ಕರ್ಮವನ್ನು ಅಕರ್ಮವೆಂದೂ ಅಕರ್ಮವನ್ನು ಕರ್ಮವೆಂದೂ ತಿಳಿಯುತ್ತ ಭ್ರಾಂತರಾಗಿದ್ದಾರೆ.

ಆತ್ಮಜ್ಞಾನಿಯಾದವನು ಲೋಕಸಂಗ್ರಹಕ್ಕಾಗಿ ಕರ್ಮವನ್ನು ಮಾಡುತ್ತಲೇ ಇದ್ದರೂ ಇರಬಹುದು. ಜ್ಞಾನಿಯ ದೃಷ್ಟಿಯಲ್ಲಿ ಅದು ಕರ್ಮವಲ್ಲ, ಬ್ರಹ್ಮವೇ.

ದೇಹೇಂದ್ರಿಯಗಳು ಮಾಡುತ್ತಿವೆ, ನಾನಲ್ಲ–ಎಂದು ಅವನಿಗೆ ಬೋಧವಿರುತ್ತದೆ. ಶರೀರಸ್ಥಿತಿಗೆ ಬೇಕಾದಷ್ಟು ಕರ್ಮವನ್ನು ಜ್ಞಾನಿಯು ಮಾಡಿದರೂ ಅದು ಬಂಧಕವಾಗುವುದಿಲ್ಲ. ಅಂತಹ ಕರ್ಮದಿಂದ ಅವನಿಗೆ ಯಾವ ಪ್ರಯೋಜನವೂ ಇಲ್ಲ. ಲೋಕದೃಷ್ಟಿಯಿಂದ ಅದು ಕರ್ಮವಾಗಿ ತೋರಬಹುದು. ಯಜ್ಞವೆನ್ನುವುದು ನಾನಾ ವಿಧ. ಇಂದ್ರಿಯಗಳನ್ನು ಜಯಿಸುವುದು ಸಂಯಮಯಜ್ಞ. ಯೋಗ್ಯವಾದ ವಿಷಯಗಳನ್ನು ಮಾತ್ರ ಸೇವಿಸುವುದು ಇಂದ್ರಿಯಯಜ್ಞ. ಮನಸ್ಸನ್ನೂ ಇಂದ್ರಿಯಕರ್ಮಗಳನ್ನೂ ಪ್ರಾಣಕರ್ಮಗಳನ್ನೂ ಹಿಡಿತದಲ್ಲಿರಿಸುವುದು ಆತ್ಮಸಂಯಮಯಜ್ಞ. ಚಾಂದ್ರಾಯಣಾದಿ ವ್ರತಗಳನ್ನಾಚರಿಸುವುದು ತಪೋಯಜ್ಞ. ವೇದಾಧ್ಯಯನ ಮಾಡುವುದು ಸ್ವಾಧ್ಯಾಯಯಜ್ಞ. ರೇಚಕ, ಪೂರಕ, ಕುಂಭಕಗಳನ್ನು ಮಾಡುವುದು ಪ್ರಾಣಾಯಾಮಯಜ್ಞ. ದೇವತೆಗಳಿಗೋಸ್ಕರ ಹವಿಸ್ಸನ್ನು ಅಗ್ನಿಯಲ್ಲರ್ಪಿಸುವುದು ದ್ರವ್ಯಯಜ್ಞ. ಸೋಪಾಧಿಕನಾದ ಜೀವಾತ್ಮನನ್ನು ನಿರುಪಾಧಿಕವಾದ ಬ್ರಹ್ಮದಲ್ಲಿ ಅರ್ಪಿಸುವುದು – ಎಂದರೆ – ಏಕಾತ್ಮದರ್ಶನವು ಜ್ಞಾನಯಜ್ಞ. ಈ ಯಜ್ಞಗಳಲ್ಲಿ ಜ್ಞಾನಯಜ್ಞವೇ ಶ್ರೇಷ್ಠವಾದದ್ದು. ಯಾವ ಯಜ್ಞವನ್ನು ಮಾಡಿದರೂ ಪಾಪನಿವೃತ್ತಿಯುಂಟು. ಯಜ್ಞ ಮಾಡತಕ್ಕವನು ತಿನ್ನುವ ಆಹಾರವು ಅಮೃತವೆನಿಸುತ್ತದೆ. ಮನುಷ್ಯನು ಯಾವುದಾದರೊಂದು ಯಜ್ಞವನ್ನು ನಡೆಸುತ್ತಿರಬೇಕು. ಜ್ಞಾನಯಜ್ಞವು ಕರ್ಮದಲ್ಲಿ ಸೇರುವುದಿಲ್ಲ. ಉಳಿದ ಯಜ್ಞಗಳೆಲ್ಲವೂ ಕರ್ಮಕಾಂಡಕ್ಕೆ ಸೇರಿದವು.

ಜ್ಞಾನಯಜ್ಞದಲ್ಲಿ ಇಚ್ಛೆಯುಂಟಾದವನು ಸದ್ಗುರುವನ್ನು ಆಶ್ರಯಿಸಿ ಆತನ ಸೇವೆಯನ್ನು ಮಾಡುತ್ತಿರಬೇಕು. ಗುರುವಾಕ್ಯದಲ್ಲಿಯೂ ಶಾಸ್ತ್ರದಲ್ಲಿಯೂ ಯಾರಿಗೆ ಶ್ರದ್ಧೆಯಿಲ್ಲವೋ, ಅವನಿಗೆ ಸಂಶಯವು ತಪ್ಪದು. ಸಂಶಯಾತ್ಮನು ಇಹಪರಗಳೊಂದೂ ದೊರಕದೆ ಹಾಳಾಗಿ ಹೋಗುತ್ತಾನೆ. ಜ್ಞಾನದಿಂದ ಸಂಶಯಗಳನ್ನು ಪರಿಹರಿಸಿಕೊಂಡು ಜಾಗ್ರತನಾಗಿರತಕ್ಕವನಿಗೆ ಕರ್ಮದಿಂದ ಯಾವ ಬಾಧೆಯೂ ಆಗುವುದಿಲ್ಲ. ಜ್ಞಾನವೆಂಬ ಕತ್ತಿಯಿಂದ ಅಜ್ಞಾನವನ್ನು ಕತ್ತರಿಸಿಹಾಕಬೇಕು. ಈ ಜ್ಞಾನಪ್ರಾಪ್ತಿಗಾಗಿ, ಅರ್ಜುನ, ನೀನು ನಿಷ್ಕಾಮ ಕರ್ಮವನ್ನು ಮಾಡುತ್ತಿರು, ಚಿಂತಿಸಬೇಡ. ನಿನ್ನ ಸ್ವಧರ್ಮವನ್ನು ಪಾಲಿಸುವುದಕ್ಕಾಗಿ ಯುದ್ಧ ಮಾಡು. ಎದ್ದು ನಿಲ್ಲು.

## ಅಧ್ಯಾಯ ೫

# ಸಂನ್ಯಾಸಯೋಗ

ಹಿಂದಿನ ಅಧ್ಯಾಯದಲ್ಲಿ 'ಕರ್ಮಣ್ಯಕರ್ಮ ಯಃ ಪಶ್ಯೇತ್' (೪–೧೮), 'ಜ್ಞಾನಾಗ್ನಿಃ ಸರ್ವಕರ್ಮಾಣಿ' (೪–೩೭) ಇತ್ಯಾದಿ ಶ್ಲೋಕಗಳಿಂದ ಸರ್ವಕರ್ಮ ಸಂನ್ಯಾಸವನ್ನೂ 'ಛಿತ್ತ್ವೈನಂ ಸಂಶಯಂ ಯೋಗಮಾತಿಷ್ಠ' (೪–೪) ಎಂದು ಕರ್ಮಾನುಷ್ಠಾನವನ್ನೂ ಭಗವಂತನು ಬೋಧಿಸಿದ್ದಾನೆ. ಕರ್ಮಸಂನ್ಯಾಸ, ಕರ್ಮಾನುಷ್ಠಾನಗಳು ಪರಸ್ಪರ ವಿರುದ್ಧವಾದ್ದರಿಂದ ಏಕಕಾಲದಲ್ಲಿ ಒಬ್ಬನು ನಡೆಸಲಾರನು. ಆದ್ದರಿಂದ ಇವುಗಳಲ್ಲಿ ತನಗೆ ಹೆಚ್ಚು ಪ್ರಶಸ್ತವಾದದ್ದು ಯಾವುದು ಎಂದು ತಿಳಿಯಲು ಅರ್ಜುನನು ಪ್ರಶ್ನೆ ಮಾಡುತ್ತಾನೆ.

**ಅರ್ಜುನ ಉವಾಚ –**

**ಸಂನ್ಯಾಸಂ ಕರ್ಮಣಾಂ ಕೃಷ್ಣ ಪುನರ್ಯೋಗಂ ಚ ಶಂಸಸಿ ।**
**ಯಚ್ಛ್ರೇಯ ಏತಯೋರೇಕಂ ತನ್ಮೇ ಬ್ರೂಹಿ ಸುನಿಶ್ಚಿತಮ್ ॥ ೧**

**ಅರ್ಜುನನು ಹೀಗೆಂದನು –** ಶ್ರೀಕೃಷ್ಣ, ಕರ್ಮಸಂನ್ಯಾಸವನ್ನೂ ಹೊಗಳುತ್ತೀಯೆ. ಕರ್ಮಯೋಗವನ್ನೂ ಹೊಗಳುತ್ತೀಯೆ. ಇವುಗಳಲ್ಲಿ ಯಾವುದು ನನಗೆ ಪ್ರಶಸ್ತವಾದದ್ದೆಂದು ನಿಶ್ಚಿತವಾಗಿ ಹೇಳು.

**ಶ್ರೀಭಗವಾನುವಾಚ –**

**ಸಂನ್ಯಾಸಃ ಕರ್ಮಯೋಗಶ್ಚ ನಿಃಶ್ರೇಯಸಕರಾವುಭೌ ।**
**ತಯೋಸ್ತು ಕರ್ಮಸಂನ್ಯಾಸಾತ್ ಕರ್ಮಯೋಗೋ ವಿಶಿಷ್ಯತೇ ॥ ೨**

**ಭಗವಂತನು ಹೇಳಿದನು :** ಕರ್ಮಸಂನ್ಯಾಸ, ಕರ್ಮಯೋಗ–ಇವೆರಡೂ ಮೋಕ್ಷದಾಯಕಗಳೇ ಹೌದು. ಆದರೆ ಅವುಗಳಲ್ಲಿ ಕರ್ಮಸಂನ್ಯಾಸಕ್ಕಿಂತ ಕರ್ಮಯೋಗವು ಉತ್ತಮವಾದದ್ದು.

**ವಿವರಣೆ :** ಆತ್ಮಜ್ಞಾನಿಗೆ ಕರ್ತವ್ಯಕರ್ಮವೇ ಇಲ್ಲದ್ದರಿಂದ ಆತ್ಮಜ್ಞಾನಿಯಲ್ಲದವನಿಗೆ ಹೇಳುವ ವಿಷಯವಿದು. ಆತ್ಮಜ್ಞಾನವಾಗದವನು, ನಿಜವಾದ ವೈರಾಗ್ಯ ಶಮದಮಾದಿಗುಣಗಳಿಲ್ಲದವನು, ಸಂನ್ಯಾಸಾಶ್ರಮವನ್ನು ತೆಗೆದುಕೊಳ್ಳುವುದಕ್ಕಿಂತ, ಚಿತ್ತಶುದ್ಧಿಯಾಗುವವರೆಗೆ ಕರ್ಮಯೋಗವನ್ನಾಚರಿಸುವುದು ಶ್ರೇಷ್ಠವೆಂದು ಅಭಿಪ್ರಾಯ.

**ಜ್ಞೇಯಃ ಸ ನಿತ್ಯಸಂನ್ಯಾಸೀ ಯೋ ನ ದ್ವೇಷ್ಟಿ ನ ಕಾಂಕ್ಷತಿ ।**
**ನಿರ್ದ್ವಂದ್ವೋ ಹಿ ಮಹಾಬಾಹೋ ಸುಖಂ ಬಂಧಾತ್ ಪ್ರಮುಚ್ಯತೇ ॥**

ಯಾವನು (ಯಾವುದನ್ನೂ) ದ್ವೇಷಿಸುವುದಿಲ್ಲವೋ (ಯಾವುದನ್ನೂ) ಆಶಿಸುವುದಿಲ್ಲವೋ ಆ ಕರ್ಮಯೋಗಿಯು ನಿತ್ಯಸಂನ್ಯಾಸಿಯೆಂದು ತಿಳಿಯತಕ್ಕದ್ದು. ಹೇ ಮಹಾಬಾಹು, (ಸುಖದುಃಖಾದಿ) ದ್ವಂದ್ವರಹಿತನಾದವನು ಸುಖವಾಗಿ – ಯಾವ ಆಯಾಸವೂ ಇಲ್ಲದೆ ಸಂಸಾರಬಂಧದಿಂದ ಬಿಡುಗಡೆ ಹೊಂದುತ್ತಾನೆ.

**ವಿವರಣೆ :** ರಾಗದ್ವೇಷಗಳಿಲ್ಲದೆ ದ್ವಂದ್ವಾತೀತನಾದವನು ನಿತ್ಯಸಂನ್ಯಾಸಿಯಂತೆಯೇ ಸರಿ – ಎಂದು ಹೊಗಳಿಕೆಯ ಮಾತು ಇದು.

**ಸಾಂಖ್ಯಯೋಗೌ ಪೃಥಗ್ಬಾಲಾಃ ಪ್ರವದಂತಿ ನ ಪಂಡಿತಾಃ ।**
**ಏಕಮಪ್ಯಾಸ್ಥಿತಃ ಸಮ್ಯಗುಭಯೋರ್ವಿಂದತೇ ಫಲಮ್ ॥** ೪

ಸಾಂಖ್ಯ ಮತ್ತು ಕರ್ಮಯೋಗಗಳು ಬೇರೆ ಬೇರೆ – ಭಿನ್ನಫಲಗಳನ್ನು ಕೊಡತಕ್ಕವೆಂದು ಬಾಲಕರು ಹೇಳಬಹುದು – ಪಂಡಿತರು ಹೇಳುವುದಿಲ್ಲ! ಇವುಗಳಲ್ಲಿ ಯಾವುದೇ ಒಂದನ್ನು ಚೆನ್ನಾಗಿ ಇಟ್ಟುಕೊಂಡವನು ಇವೆರಡರ ಫಲವನ್ನೂ ಪಡೆಯುತ್ತಾನೆ.

**ವಿವರಣೆ :** ಕರ್ಮಸಂನ್ಯಾಸಕ್ಕೆ ಜ್ಞಾನವು ಸೇರಿದರೆ ಸಾಂಖ್ಯಮಾರ್ಗವೆನಿಸುವುದು. ಕರ್ಮಾನುಷ್ಠಾನಕ್ಕೆ ಸಮತ್ವಬುದ್ಧಿ, ಫಲನಿರಪೇಕ್ಷತೆ, ಈಶ್ವರಾರ್ಪಣ – ಇವು ಸೇರಿದರೆ ಕರ್ಮಯೋಗವೆನಿಸುವುದು. ಕರ್ಮಯೋಗವೂ ಜ್ಞಾನನಿಷ್ಠೆಯ ಮೂಲಕ ಮೋಕ್ಷವನ್ನೀಯುತ್ತದೆಯಾದ್ದರಿಂದ, ಇವೆರಡರ ಫಲವೂ ಒಂದೇ ಎಂದು ಶ್ಲೋಕದಲ್ಲಿ ಹೇಳಿದೆ.

**ಯತ್ ಸಾಂಖ್ಯೈಃ ಪ್ರಾಪ್ಯತೇ ಸ್ಥಾನಂ ತದ್ಯೋಗೈರಪಿ ಗಮ್ಯತೇ ।**
**ಏಕಂ ಸಾಂಖ್ಯಂ ಚ ಯೋಗಂ ಚ ಯಃ ಪಶ್ಯತಿ ಸ ಪಶ್ಯತಿ ॥** ೫

ಸಾಂಖ್ಯರಿಗೆ ಎಂದರೆ ಜ್ಞಾನನಿಷ್ಠರಾದ ಸಂನ್ಯಾಸಿಗಳಿಗೆ ದೊರೆಯುವ ಮೋಕ್ಷಸ್ಥಾನವು ಕರ್ಮಯೋಗಿಗಳಿಗೂ ದೊರೆಯುತ್ತದೆ. ಆದ್ದರಿಂದ ಸಾಂಖ್ಯವೆಂಬ ಸಂನ್ಯಾಸವನ್ನೂ ಕರ್ಮಯೋಗವನ್ನೂ ಒಂದಾಗಿ ಕಾಣತಕ್ಕವನೇ ಸರಿಯಾಗಿ ಕಾಣತಕ್ಕವನು.

**ವಿವರಣೆ :** ಜ್ಞಾನವಿಲ್ಲದ ಬರಿಯ ಸಂನ್ಯಾಸಕ್ಕಿಂತ ಕರ್ಮಯೋಗವು

ಉತ್ತಮವೆಂದು ಹಿಂದೆ ಹೇಳಿದೆ. ಜ್ಞಾನದಿಂದ ಸಹಿತವಾದ ಸಂನ್ಯಾಸವು ಸಾಂಖ್ಯ. ಇದಕ್ಕಿಂತ ಕರ್ಮಯೋಗವು ಉತ್ತಮವೆಂದು ಅಭಿಪ್ರಾಯವಲ್ಲ. ಕರ್ಮಯೋಗಿಯನ್ನು ಹಿಂದೆ 'ನಿತ್ಯಸಂನ್ಯಾಸಿ' ಎಂದು ಹೇಳಿದ್ದು ನಿಜವಾದ ಸಂನ್ಯಾಸಕ್ಕೆ ಕರ್ಮಯೋಗವು ಸಾಧನವೆಂಬ ಕಾರಣದಿಂದ. ಕರ್ಮಯೋಗಿಯು ಕರ್ಮಫಲವನ್ನು ತ್ಯಜಿಸಿರುವುದರಿಂದ ಅವನು ಸಂನ್ಯಾಸಿಯಾದಂತೆಯೇ ಎಂದು ಅಭಿಪ್ರಾಯ.

**ಸಂನ್ಯಾಸಸ್ತು ಮಹಾಬಾಹೋ ದುಃಖಮಾಪ್ತುಮಯೋಗತಃ ।**
**ಯೋಗಯುಕ್ತೋ ಮುನಿರ್ಬ್ರಹ್ಮ ನ ಚಿರೇಣಾಧಿಗಚ್ಛತಿ ॥** ೬

(ಜ್ಞಾನಯುಕ್ತವಾದ) ಪರಮಾರ್ಥಸಂನ್ಯಾಸವಾದರೋ, ಅರ್ಜುನ, ಕರ್ಮಯೋಗವಿಲ್ಲದೆ ದೊರೆಯುವುದು ಕಷ್ಟ. ಕರ್ಮಯೋಗವನ್ನಾಚರಿಸುವ ಮುನಿಯು ಶೀಘ್ರದಲ್ಲಿಯೇ ಬ್ರಹ್ಮವನ್ನು ಪಡೆಯುವನು. (ಬ್ರಹ್ಮವನ್ನು = ಸಂನ್ಯಾಸವನ್ನು)

**ವಿವರಣೆ :** ಈ ಶ್ಲೋಕದಲ್ಲಿ ಬ್ರಹ್ಮವೆಂದರೆ ಸಂನ್ಯಾಸವೆಂದು ಶ್ರೀಶಂಕರಾಚಾರ್ಯರು ಅರ್ಥ ಹೇಳಿದ್ದಾರೆ. "ನ್ಯಾಸ ಇತಿ ಬ್ರಹ್ಮಾ ಬ್ರಹ್ಮಾ ಹಿ ಪರಃ" (ತೈ.ನಾ. ೭೮) ಎಂಬ ಶ್ರುತಿಯನ್ನು ಪ್ರಮಾಣವಾಗಿ ಉದಾಹರಿಸಿದ್ದಾರೆ. ಬ್ರಹ್ಮಜ್ಞಾನಕ್ಕೆ ಕಾರಣವಾದ್ದರಿಂದ ಲಾಕ್ಷಣಿಕವಾಗಿ ಬ್ರಹ್ಮವೆಂದರೆ ಸಂನ್ಯಾಸವೆಂದು ಅವರ ಅಭಿಪ್ರಾಯವಿದೆ. ಒಂದೇ ಸಲಕ್ಕೆ ಸಂನ್ಯಾಸವು ಕಠಿಣವಾದ್ದರಿಂದ ಅದಕ್ಕೆ ಸಾಧನವಾಗಿರುವ ಕರ್ಮಯೋಗವನ್ನು ಆಶ್ರಯಿಸುವುದು ಉತ್ತಮವೆಂದು ಭಗವಂತನ ಹೃದಯ.

**ಯೋಗಯುಕ್ತೋ ವಿಶುದ್ಧಾತ್ಮಾ ವಿಜಿತಾತ್ಮಾ ಜಿತೇಂದ್ರಿಯಃ ।**
**ಸರ್ವಭೂತಾತ್ಮಭೂತಾತ್ಮಾ ಕುರ್ವನ್ನಪಿ ನ ಲಿಪ್ಯತೇ ॥** ೭

ಯೋಗಯುಕ್ತನಾದವನು ವಿಶುದ್ಧಚಿತ್ತನೂ ವಿಜಿತದೇಹನೂ ಜಿತೇಂದ್ರಿಯನೂ ಸರ್ವಭೂತಾತ್ಮಭೂತಾತ್ಮನೂ ಆಗಿ (ಲೋಕಸಂಗ್ರಹಕ್ಕಾಗಿ) ಕರ್ಮವನ್ನು ಮಾಡುತ್ತಿದ್ದರೂ ಅವನಿಗೆ ಕರ್ಮಲೇಪವಿರುವುದಿಲ್ಲ.

**ವಿವರಣೆ :** ಸರ್ವಭೂತಾತ್ಮಭೂತಾತ್ಮಾ = ಬ್ರಹ್ಮಾದಿಸ್ತಂಬಪರ್ಯಂತವಾದ ಸಮಸ್ತಭೂತಗಳಿಗೆ ಆತ್ಮಭೂತವಾದ ಆತ್ಮವುಳ್ಳವನು. ಸಮಸ್ತಭೂತಗಳಿಗೂ ಆತ್ಮಭೂತನಾದವನೇ ತನ್ನ ಪ್ರತ್ಯಗಾತ್ಮನೆಂದು ತಿಳಿದವನೆಂದರ್ಥ. ಈತನೇ ಸಮ್ಯಗ್‌ದರ್ಶಿ–ಜ್ಞಾನಿ.

**ನೈವ ಕಿಂಚಿತ್ಕರೋಮೀತಿ ಯುಕ್ತೋ ಮನ್ಯೇತ ತತ್ತ್ವವಿತ್ ।**
**ಪಶ್ಯನ್ ಶೃಣ್ವನ್ ಸ್ಪೃಶನ್ ಜಿಘ್ರನ್ ಅಶ್ನನ್ ಗಚ್ಛನ್ ಸ್ವಪನ್ ಶ್ವಸನ್ ॥**
**ಪ್ರಲಪನ್ ವಿಸೃಜನ್ ಗೃಹ್ಣನ್ ಉನ್ಮಿಷನ್ನಿಮಿಷನ್ನಪಿ ।**
**ಇಂದ್ರಿಯಾಣೀಂದ್ರಿಯಾರ್ಥೇಷು ವರ್ತಂತ ಇತಿ ಧಾರಯನ್ ॥ ೯**

ಯುಕ್ತನಾದ ಎಂದರೆ ಬ್ರಹ್ಮತತ್ತ್ವದಲ್ಲಿಯೇ ಸಮಾಹಿತನಾದ ತತ್ತ್ವಜ್ಞಾನಿಯು ತಾನು ನೋಡುತ್ತಿರಲಿ – ಕೇಳುತ್ತಿರಲಿ – ಮುಟ್ಟುತ್ತಿರಲಿ – ಮೂಸುತ್ತಿರಲಿ – ತಿನ್ನುತ್ತಿರಲಿ – ನಡೆಯುತ್ತಿರಲಿ – ಮಲಗಿರಲಿ – ಉಸಿರಾಡುತ್ತಿರಲಿ – ಮಾತಾಡುತ್ತಿರಲಿ – (ಮಲಮೂತ್ರಾದಿಗಳನ್ನು) ವಿಸರ್ಜಿಸುತ್ತಿರಲಿ – ಏನನ್ನಾದರೂ ತೆಗೆದುಕೊಳ್ಳುತ್ತಿರಲಿ – ಕಣ್ಣುಬಿಡುತ್ತಿರಲಿ – ಕಣ್ಣುಮುಚ್ಚಲಿ 'ನಾನು ಏನನ್ನೂ ಮಾಡುತ್ತಿಲ್ಲ' ಎಂದು ತಿಳಿಯಬೇಕು. 'ಕೇವಲ ಇಂದ್ರಿಯಗಳು ತಮ್ಮ ತಮ್ಮ ವಿಷಯಗಳಲ್ಲಿ ತೊಡಗಿವೆ' ಎಂದು ಭಾವಿಸಬೇಕು.

**ವಿವರಣೆ :** ಆತ್ಮನು ಯಾವ ಕ್ರಿಯೆಯನ್ನೂ ಮಾಡುವುದಿಲ್ಲ. ಅವನು ನಿಷ್ಕ್ರಿಯ; ನಿರ್ಲಿಪ್ತ.

ಆದರೆ ಯಾವನು ತತ್ತ್ವವನ್ನರಿತುಕೊಳ್ಳದೆ ಕರ್ಮಯೋಗದಲ್ಲಿ ತೊಡಗಿರುವನೋ ಅವನ ವಿಷಯವೇನೆಂದರೆ –

**ಬ್ರಹ್ಮಣ್ಯಾಧಾಯ ಕರ್ಮಾಣಿ ಸಂಗಂ ತ್ಯಕ್ತ್ವಾ ಕರೋತಿ ಯಃ ।**
**ಲಿಪ್ಯತೇ ನ ಸ ಪಾಪೇನ ಪದ್ಮಪತ್ರಮಿವಾಂಭಸಾ ॥ ೧೦**

ಯಾವಾತನು ಎಲ್ಲ ಕರ್ಮಗಳನ್ನೂ ಪರಮೇಶ್ವರನಿಗೆ ಅರ್ಪಿಸಿ, ಯಾವ ಫಲಾಸಕ್ತಿಯೂ ಇಲ್ಲದೆ ಕರ್ಮವನ್ನಾಚರಿಸುತ್ತಾನೋ ಆತನಿಗೆ, ತಾವರೆ ಎಲೆಗೆ ನೀರಿನ ಲೇಪವಾಗದಿರುವಂತೆ, ಪಾಪದ ಲೇಪವಾಗುವುದಿಲ್ಲ.

**ವಿವರಣೆ :** ಅವನಿಗೆ ಸತ್ತ್ವಶುದ್ಧಿಯೆಂಬ ಫಲವು ತಾನಾಗಿಯೇ ಆಗುತ್ತದೆ.

**ಕಾಯೇನ ಮನಸಾ ಬುದ್ಧ್ಯಾ ಕೇವಲೈರಿಂದ್ರಿಯೈರಪಿ ।**
**ಯೋಗಿನಃ ಕರ್ಮ ಕುರ್ವಂತಿ ಸಂಗಂ ತ್ಯಕ್ತ್ವಾಽತ್ಮಶುದ್ಧಯೇ ॥ ೧೧**

ಕರ್ಮಯೋಗಿಗಳು ಫಲಾಸಕ್ತಿಯನ್ನು ತೊರೆದು, (ಮಮತ್ವರಹಿತರಾಗಿ) ಕೇವಲ ದೇಹ ಮನಸ್ಸು ಬುದ್ಧಿ ಮತ್ತು ಇಂದ್ರಿಯಗಳಿಂದ ಸತ್ತ್ವಶುದ್ಧಿಗಾಗಿ ಕರ್ಮವನ್ನು ಮಾಡುತ್ತಿರುವರು.

**ಯುಕ್ತಃ ಕರ್ಮಫಲಂ ತ್ಯಕ್ತ್ವಾ ಶಾಂತಿಮಾಪ್ನೋತಿ ನೈಷ್ಠಿಕೀಮ್ ।**
**ಅಯುಕ್ತಃ ಕಾಮಕಾರೇಣ ಫಲೇ ಸಕ್ತೋ ನಿಬಧ್ಯತೇ ॥ ೧೨**

(ಪರಮೇಶ್ವರಪ್ರೀತಿಗಾಗಿ ಕರ್ಮವನ್ನು ಮಾಡುತ್ತೇನೆ, ನನ್ನ ಫಲಕ್ಕಾಗಿ ಅಲ್ಲ) ಎಂದು ಯುಕ್ತನಾಗಿ – ಎಂದರೆ – ಸಮಾಹಿತನಾಗಿ ಕರ್ಮಫಲದ ಆಸೆಯನ್ನು ತ್ಯಜಿಸಿ ಕರ್ಮವನ್ನಾಚರಿಸತಕ್ಕವನು ಈ ನಿಷ್ಠೆಯಿಂದಾಗುವ ಮೋಕ್ಷವನ್ನು ಪಡೆಯುತ್ತಾನೆ. ಹಾಗಲ್ಲದೆ ಮನಸ್ಸಮಾಧಾನವಿಲ್ಲದೆ ಕಾಮನೆಯಿಂದ ಪ್ರೇರಿತ ನಾಗಿ ಫಲದಲ್ಲಿ ಆಸಕ್ತಿಯನ್ನಿಟ್ಟವನು ಸಂಸಾರಕ್ಕೆ ಕಟ್ಟುಬೀಳುತ್ತಾನೆ.

**ಸರ್ವಕರ್ಮಾಣಿ ಮನಸಾ ಸಂನ್ಯಸ್ಯಾಸ್ತೇ ಸುಖಂ ವಶೀ ।**
**ನವದ್ವಾರೇ ಪುರೇ ದೇಹೀ ನೈವ ಕುರ್ವನ್ ನ ಕಾರಯನ್ ॥ ೧೩**

(ಪರಮಾರ್ಥದರ್ಶಿಯಾಗಿ) ಜಿತೇಂದ್ರಿಯನಾದ ದೇಹಿಯಾದರೋ ವಿವೇಕಬುದ್ಧಿಯಿಂದ ಸರ್ವಕರ್ಮಗಳನ್ನು ಸಂನ್ಯಾಸಮಾಡಿ, ನವದ್ವಾರವುಳ್ಳ ಪುರದಲ್ಲಿ (ದೇಹದಲ್ಲಿ) ತಾನು ಏನನ್ನೂ ಮಾಡದೆ ಏನನ್ನೂ ಮಾಡಿಸದೆ ಸುಖವಾಗಿ ನೆಲೆಸಿರುತ್ತಾನೆ.

**ವಿವರಣೆ :** ಎರಡು ಕಣ್ಣುಗಳು, ಎರಡು ಕಿವಿಗಳು, ಮೂಗಿನ ಎರಡು ಹೊರಳೆಗಳು, ಬಾಯಿ ಮತ್ತು ಮಲಮೂತ್ರಗಳನ್ನು ವಿಸರ್ಜಿಸುವ ಎರಡು – ಹೀಗೆ ಒಂಬತ್ತು ರಂಧ್ರಗಳೇ ನವದ್ವಾರಗಳು. ಇವುಗಳಿರುವ ನಗರವೇ ದೇಹ. ಇದಕ್ಕೆ ಒಡೆಯ ಆತ್ಮ, ಇಂದ್ರಿಯಗಳು ಸೇವಕರು.

**ನ ಕರ್ತೃತ್ವಂ ನ ಕರ್ಮಾಣಿ ಲೋಕಸ್ಯ ಸೃಜತಿ ಪ್ರಭುಃ ।**
**ನ ಕರ್ಮಫಲಸಂಯೋಗಂ ಸ್ವಭಾವಸ್ತು ಪ್ರವರ್ತತೇ ॥ ೧೪**

ಪ್ರಭುವಾದ ಆತ್ಮನು ಜನರಿಗೆ ಕರ್ತೃತ್ವವನ್ನಾಗಲಿ ಕರ್ಮಗಳನ್ನಾಗಲಿ ಎಂದರೆ ಕ್ರಿಯೆಯಿಂದ ಲಭ್ಯವಾಗುವ ಗಡಿಗೆ, ಬಂಡಿ – ಮುಂತಾದ ವಸ್ತುಗಳನ್ನಾಗಲಿ ನಿರ್ಮಿಸುವುದಿಲ್ಲ. ಅಂತಹ ಕರ್ಮಗಳಿಂದಾಗುವ ಫಲದೊಡನೆ ಸಂಬಂಧವನ್ನು ನಿರ್ಮಿಸುವುದಿಲ್ಲ. ಪ್ರಕೃತಿಯು – ವೈಷ್ಣವೀಮಾಯೆಯು – ಅವಿದ್ಯೆಯು ಕೆಲಸ ಮಾಡುತ್ತದೆ.

**ವಿವರಣೆ :** ಕರ್ತೃತ್ವದಲ್ಲಿಯೇ ಕ್ರಿಯೆಯು ಸೇರಿಹೋಗುವುದರಿಂದ ಕರ್ಮಶಬ್ದಕ್ಕೆ ಇರುವ ಇನ್ನೊಂದು ಅರ್ಥವನ್ನು ಇಲ್ಲಿ ಸ್ವೀಕರಿಸಿದೆ. ಇಲ್ಲಿ ಕರ್ಮಶಬ್ದಕ್ಕೆ ಕ್ರಿಯಾಜನ್ಯ (Object) ಎಂದರ್ಥ. ವ್ಯವಹಾರವೆಲ್ಲವೂ ಅವಿದ್ಯಾಕಾರ್ಯವೆಂದು ಶ್ಲೋಕದ ತಾತ್ಪರ್ಯ.

**ನಾದತ್ತೇ ಕಸ್ಯಚಿತ್ ಪಾಪಂ ನ ಚೈವ ಸುಕೃತಂ ವಿಭುಃ ।**
**ಅಜ್ಞಾನೇನಾವೃತಂ ಜ್ಞಾನಂ ತೇನ ಮುಹ್ಯಂತಿ ಜಂತವಃ ॥ ೧೫**

ಸರ್ವವ್ಯಾಪಿಯಾದ ಪರಮಾತ್ಮನು ಯಾವನೊಬ್ಬನ-ಭಕ್ತನ ಪಾಪವನ್ನಾಗಲಿ ಪುಣ್ಯವನ್ನಾಗಲಿ ಹೊತ್ತುಕೊಳ್ಳುವುದಿಲ್ಲ. ಜ್ಞಾನವನ್ನು ಅಜ್ಞಾನವು ಕವಿದು ಮುಚ್ಚಿಬಿಟ್ಟಿದೆ: ಆದ್ದರಿಂದ ಜನರು ತಪ್ಪುತಿಳಿದು ಭ್ರಾಂತರಾಗಿದ್ದಾರೆ.

**ವಿವರಣೆ :** ಈಶ್ವರನು ತಮ್ಮ ಪಾಪವನ್ನು ಹೋಗಲಾಡಿಸಿ ಪುಣ್ಯಫಲವನ್ನು ಕೊಡುತ್ತಾನೆ – ಎಂದು ಭಕ್ತರು ಪೂಜಾದಿಗಳನ್ನು ಮಾಡುತ್ತಾರೆ. ಪೂಜ್ಯ–ಪೂಜಕವ್ಯವಹಾರವು ಭೇದಭ್ರಮೆಯಿದ್ದಾಗ ಮಾತ್ರ ನಡೆಯುತ್ತದೆ. ಅಭೇದವೆಂಬ ತತ್ತ್ವಜ್ಞಾನವನ್ನು ಭೇದವೆಂಬ ಅಜ್ಞಾನವು ಮುಚ್ಚಿಬಿಟ್ಟಿದೆಯಾದ್ದರಿಂದ ಈ ಲೋಕವ್ಯವಹಾರವು ನಡೆಯುತ್ತಿದೆ. ಇದು ಪಾರಮಾರ್ಥಿಕವಲ್ಲವೆಂದು ತಾತ್ಪರ್ಯ.

**ಜ್ಞಾನೇನ ತು ತದಜ್ಞಾನಂ ಯೇಷಾಂ ನಾಶಿತಮಾತ್ಮನಃ ।**
**ತೇಷಾಮಾದಿತ್ಯವಜ್ಜ್ಞಾನಂ ಪ್ರಕಾಶಯತಿ ತತ್ಪರಮ್ ॥ ೧೬**

ಆದರೆ ಯಾರಿಗೆ ಈ ಆತ್ಮವಿಷಯಕವಾದ ಅಜ್ಞಾನವು ಯಥಾರ್ಥವಾದ ಆತ್ಮಜ್ಞಾನದಿಂದ ನಾಶವಾಗಿದೆಯೋ ಅವರಿಗೆ ಈ ಆತ್ಮಜ್ಞಾನವು, ಪರಮಾರ್ಥವೇನೆಂಬುದನ್ನು ಸೂರ್ಯನಂತೆ ಬೆಳಗಿಸಿ ತೋರಿಸುತ್ತದೆ.

**ತದ್ಬುದ್ಧಯಸ್ತದಾತ್ಮಾನಸ್ತನ್ನಿಷ್ಠಾಸ್ತತ್ಪರಾಯಣಾಃ ।**
**ಗಚ್ಛಂತ್ಯಪುನರಾವೃತ್ತಿಂ ಜ್ಞಾನನಿರ್ಧೂತಕಲ್ಮಷಾಃ ॥ ೧೭**

ಆ ಪರಮಾರ್ಥವಾದ ಬ್ರಹ್ಮವಸ್ತುವಿನಲ್ಲಿಯೇ ಯಾರು ಬುದ್ಧಿಯನ್ನಿಟ್ಟು, ಆ ಬ್ರಹ್ಮವೇ ತನ್ನ ಆತ್ಮನೆಂದು ತಿಳಿದು, ಅದರಲ್ಲಿಯೇ ನೆಲೆನಿಂತು, ಅದೇ ಪರಮಗತಿಯೆಂದು ಆತ್ಮಾರಾಮರಾಗಿರುತ್ತಾರೋ ಅವರು ತಮ್ಮ ವಿವೇಕಜ್ಞಾನದಿಂದ (ಪಾಪಪುಣ್ಯಗಳೆಂಬ ಕರ್ಮಜನ್ಯ ಕಿಲ್ಬಿಷವನ್ನು ಧ್ವಂಸಮಾಡಿದವರಾಗಿ) ಪುನರಾವೃತ್ತಿಯಿಲ್ಲದ ಮೋಕ್ಷವನ್ನೈದುತ್ತಾರೆ.

**ವಿವರಣೆ :** ಪುಣ್ಯವೂ ದೇಹಾರಂಭಕವಾದ್ದರಿಂದ ಮುಮುಕ್ಷುವಿಗೆ ಕಿಲ್ಬಿಷವೇ ಸರಿ.

**ವಿದ್ಯಾವಿನಯಸಂಪನ್ನೇ ಬ್ರಾಹ್ಮಣೇ ಗವಿ ಹಸ್ತಿನಿ ।**
**ಶುನಿ ಚೈವ ಶ್ವಪಾಕೇ ಚ ಪಂಡಿತಾಃ ಸಮದರ್ಶಿನಃ ॥ ೧೮**

ವಿದ್ಯಾವಿನಯಗಳಿಂದ ಕೂಡಿದ ಬ್ರಾಹ್ಮಣನಲ್ಲಿ, ಗೋವಿನಲ್ಲಿ, ಆನೆಯಲ್ಲಿ, ನಾಯಿಯಲ್ಲಿ ಹಾಗೆಯೇ ಚಂಡಾಲನಲ್ಲಿ ಸಹ ಪಂಡಿತರು ಸಮದರ್ಶಿಗಳಾಗಿರುತ್ತಾರೆ.

**ವಿವರಣೆ :** ವಿದ್ಯಾವಿನಯಸಂಪನ್ನನಾದ ಬ್ರಾಹ್ಮಣನಲ್ಲಿ ಸತ್ತ್ವಗುಣವೂ ಗೋವಿನಲ್ಲಿ ರಜೋಗುಣವೂ ಆನೆ ಮೊದಲಾದವುಗಳಲ್ಲಿ ತಮೋಗುಣವೂ ಪ್ರಧಾನವಾಗಿರುತ್ತವೆ. ಈ ಗುಣಗಳ ಸೋಂಕೇ ಇಲ್ಲದೆ ಏಕವೂ ನಿರ್ವಿಕಾರವೂ ಆದ ಬ್ರಹ್ಮವೇ ಸಮವೆನಿಸುತ್ತದೆ. ಸಮದರ್ಶಿ = ಬ್ರಹ್ಮದರ್ಶಿ.

**ಇಹೈವ ತೈರ್ಜಿತಃ ಸರ್ಗೋ ಯೇಷಾಂ ಸಾಮ್ಯೇ ಸ್ಥಿತಂ ಮನಃ ।**
**ನಿರ್ದೋಷಂ ಹಿ ಸಮಂ ಬ್ರಹ್ಮ ತಸ್ಮಾದ್ ಬ್ರಹ್ಮಣಿ ತೇ ಸ್ಥಿತಾಃ ॥ ೧೯**

ಯಾರ ಮನಸ್ಸು ಸಮತ್ವದಲ್ಲಿ – ಸರ್ವಭೂತಗಳಲ್ಲಿರುವ ಬ್ರಹ್ಮ ಒಂದೇ ಎಂಬ ಸಮಭಾವದಲ್ಲಿ ನಿಶ್ಚಲವಾಗಿ ನಿಂತಿರುವುದೋ ಅವರು ಇಲ್ಲಿಯೇ – ಜೀವಂತವಾಗಿರುವಾಗಲೇ ಜನ್ಮವನ್ನು ಗೆದ್ದವರು. ನಿರ್ದೋಷವಾದ ಬ್ರಹ್ಮವು (ಏಕವಾಗಿ) ಸರ್ವತ್ರ ಸಮರೂಪದಲ್ಲಿದೆ. ಆದ್ದರಿಂದ ಸಮಭಾವವನ್ನು ಕಾಣತಕ್ಕ ಅವರು ಬ್ರಹ್ಮದಲ್ಲಿ ನೆಲೆನಿಂತವರು.

**ನ ಪ್ರಹೃಷ್ಯೇತ್ ಪ್ರಿಯಂ ಪ್ರಾಪ್ಯ ನೋದ್ವಿಜೇತ್ ಪ್ರಾಪ್ಯ ಚಾಪ್ರಿಯಮ್ ।**
**ಸ್ಥಿರಬುದ್ಧಿರಸಂಮೂಢೋ ಬ್ರಹ್ಮವಿದ್ ಬ್ರಹ್ಮಣಿ ಸ್ಥಿತಃ ॥ ೨೦**

ಸ್ಥಿರಬುದ್ಧಿಯಾಗಿ ಅಸಂಮೂಢನಾಗಿ ಬ್ರಹ್ಮವನ್ನು ತಿಳಿದು ಬ್ರಹ್ಮದಲ್ಲಿ ನಿಂತವನು ಪ್ರಿಯವಾದದ್ದು ದೊರಕಿದಾಗ ಹಿಗ್ಗಲಾರ; ಅಪ್ರಿಯವಾದದ್ದು ಬಂದಾಗ ಕುಗ್ಗಲಾರ.

**ಬಾಹ್ಯಸ್ಪರ್ಶೇಷ್ವಸಕ್ತಾತ್ಮಾ ವಿಂದತ್ಯಾತ್ಮನಿ ಯತ್ಸುಖಮ್ ।**
**ಸ ಬ್ರಹ್ಮಯೋಗಯುಕ್ತಾತ್ಮಾ ಸುಖಮಕ್ಷಯ್ಯಮಶ್ನುತೇ ॥ ೨೧**

ಆ ಬ್ರಹ್ಮವಿದನು ಬಾಹ್ಯವಾದ ಶಬ್ದಾದಿವಿಷಯಗಳಲ್ಲಿ ಅನಾಸಕ್ತನಾಗಿ, ಸುಖವೆಂಬುದೇನುಂಟೋ ಅದನ್ನು ಆತ್ಮನಲ್ಲಿಯೇ ಪಡೆದುಕೊಳ್ಳುತ್ತಾನೆ. ಆತನು ಬ್ರಹ್ಮದಲ್ಲಿ ಚಿತ್ತಸಮಾಧಿಯನ್ನು ಹೊಂದಿ ಅಕ್ಷಯವಾದ ಮೋಕ್ಷ ಸುಖವನ್ನು ಪಡೆಯುತ್ತಾನೆ.

**ಯೇ ಹಿ ಸಂಸ್ಪರ್ಶಜಾ ಭೋಗಾ ದುಃಖಯೋನಯ ಏವ ತೇ ।**
**ಆದ್ಯಂತವಂತಃ ಕೌಂತೇಯ ನ ತೇಷು ರಮತೇ ಬುಧಃ ॥ ೨೨**

ವಿಷಯೇಂದ್ರಿಯಗಳ ಸಂಸ್ಪರ್ಶದಿಂದ ಯಾವ ಯಾವ ಭೋಗಗಳು ಕಂಡುಬರುತ್ತವೆಯೋ ಅವೆಲ್ಲವೂ ಮುಂದಿನ ದುಃಖಕ್ಕೆ ಕಾರಣಗಳಾಗಿರುತ್ತವೆ. ಆ ಭೋಗಗಳಿಗೆ ಆದ್ಯಂತಗಳೂ ಇವೆ (ಆದ್ದರಿಂದ ಅನಿತ್ಯ). ಕೌಂತೇಯ, ವಿವೇಕಿಗಳು ಅವುಗಳಲ್ಲಿ ಮನಸ್ಸಿಡುವುದಿಲ್ಲ.

**ಶಕ್ನೋತೀಹೈವ ಯಃ ಸೋಢುಂ ಪ್ರಾಕ್ ಶರೀರವಿಮೋಕ್ಷಣಾತ್ ।**
**ಕಾಮಕ್ರೋಧೋದ್ಭವಂ ವೇಗಂ ಸ ಯುಕ್ತಃ ಸ ಸುಖೀ ನರಃ ॥ ೨೩**

ಇಲ್ಲಿ ಬದುಕಿರುವಾಗಲೇ ಶರೀರತ್ಯಾಗಪರ್ಯಂತವೂ ಯಾವಾತನು ಕಾಮಕ್ರೋಧಗಳಿಂದಾಗುವ ಒತ್ತಡವನ್ನು ಸಹಿಸಲು ಸಮರ್ಥನಾಗುವನೋ ಅವನು ಯೋಗಿ; ಅವನು ಸುಖಿ.

**ಯೋಽನ್ತಃಸುಖೋಽನ್ತರಾರಾಮಸ್ತಥಾಂತರ್ಜ್ಯೋತಿರೇವ ಯಃ ।**
**ಸ ಯೋಗೀ ಬ್ರಹ್ಮನಿರ್ವಾಣಂ ಬ್ರಹ್ಮಭೂತೋಽಧಿಗಚ್ಛತಿ ॥ ೨೪**

ಯಾವಾತನು ತನ್ನೊಳಗಿರುವ ಆತ್ಮನಲ್ಲಿಯೇ ಸುಖಪಡುವನೋ ಆತ್ಮನಲ್ಲಿಯೇ ಕ್ರೀಡಿಸುವನೋ ಅಂತರಾತ್ಮವೇ ಯಾರಿಗೆ ಪ್ರಕಾಶವಾಗಿರುವುದೋ ಆ ಯೋಗಿಯು ಬ್ರಹ್ಮಸ್ವರೂಪನೇ ಆಗಿ ಬ್ರಹ್ಮದಲ್ಲಿ ಲೀನನಾಗುವನು.

**ಲಭಂತೇ ಬ್ರಹ್ಮನಿರ್ವಾಣಮೃಷಯಃ ಕ್ಷೀಣಕಲ್ಮಷಾಃ ।**
**ಛಿನ್ನದ್ವೈಧಾ ಯತಾತ್ಮಾನಃ ಸರ್ವಭೂತಹಿತೇ ರತಾಃ ॥ ೨೫**

ಪಾಪರಹಿತರಾಗಿ ಸಂಶಯವನ್ನು ಪರಿಹರಿಸಿಕೊಂಡಿರುವವರೂ ಜಿತೇಂದ್ರಿಯರೂ ಸರ್ವಭೂತಗಳ ಹಿತದಲ್ಲಿ ನಿರತರಾದ ಎಂದರೆ ಹಿಂಸಾವರ್ಜಿತರಾದ ಋಷಿಗಳು (ಜ್ಞಾನಿಗಳು) ಮೋಕ್ಷವನ್ನು ಪಡೆಯುತ್ತಾರೆ.

**ಟಿಪ್ಪಣಿ :** ದ್ವೈಧ = ಸಂಶಯ.

**ಕಾಮಕ್ರೋಧವಿಯುಕ್ತಾನಾಂ ಯತೀನಾಂ ಯತಚೇತಸಾಮ್ ।**
**ಅಭಿತೋ ಬ್ರಹ್ಮನಿರ್ವಾಣಂ ವರ್ತತೇ ವಿದಿತಾತ್ಮನಾಮ್ ॥ ೨೬**

ಕಾಮಕ್ರೋಧಗಳಿಲ್ಲದವರೂ ಜಿತಮನಸ್ಕರೂ ಆತ್ಮಜ್ಞಾನಿಗಳೂ ಆದ ಯತಿಗಳಿಗೆ ಎರಡು ಪಾರ್ಶ್ವಗಳಲ್ಲಿಯೂ ಎಂದರೆ ಬದುಕಿರುವಾಗ ಮತ್ತು ಮೃತರಾದಮೇಲೆ ಮೋಕ್ಷವು ಇದ್ದುಕೊಂಡಿರುವುದು.

**ಸ್ಪರ್ಶಾನ್ ಕೃತ್ವಾ ಬಹಿರ್ಬಾಹ್ಯಾನ್ ಚಕ್ಷುಶ್ಚೈವಾಂತರೇ ಭ್ರುವೋಃ ।**
**ಪ್ರಾಣಾಪಾನೌ ಸಮೌ ಕೃತ್ವಾ ನಾಸಾಭ್ಯಂತರಚಾರಿಣೌ ॥ ೨೭**

**ಯತೇಂದ್ರಿಯಮನೋಬುದ್ಧಿರ್ಮುನಿರ್ಮೋಕ್ಷಪರಾಯಣಃ ।**
**ವಿಗತೇಚ್ಛಾಭಯಕ್ರೋಧೋ ಯಃ ಸದಾ ಮುಕ್ತ ಏವ ಸಃ ॥ ೨೮**

ಶಬ್ದಾದಿವಿಷಯುಗಳನ್ನು ಹೊರಗಿಟ್ಟು (ಅವುಗಳನ್ನು ಚಿಂತಿಸದೆ), ದೃಷ್ಟಿಯನ್ನು ಹುಬ್ಬುಗಳ ನಡುವೆ ನಿಲ್ಲಿಸಿ, ಮೂಗಿನೊಳಗೆ ಸರಿದಾಡುವ ಪ್ರಾಣಾಪಾನವಾಯುಗಳನ್ನು ಸಮಗತಿಯಲ್ಲಿಟ್ಟು, ಇಂದ್ರಿಯಮನೋಬುದ್ಧಿಗಳನ್ನು ಜಯಿಸಿ, ಆಸೆ ಹೆದರಿಕೆ ಸಿಟ್ಟುಗಳಿಂದ ರಹಿತನಾಗಿ ಯಾವ ಮುನಿಯು ಮೋಕ್ಷವೇ ಪರಮ ಗತಿಯೆಂದು ತಿಳಿದಿರುವನೋ ಅವನು ಯಾವಾಗಲೂ ಮುಕ್ತನೇ ಸರಿ (ಆತನು ಇನ್ನು ಮಾಡಬೇಕಾದದ್ದು ಏನೂ ಇಲ್ಲ).

**ಭೋಕ್ತಾರಂ ಯಜ್ಞತಪಸಾಂ ಸರ್ವಲೋಕಮಹೇಶ್ವರಮ್ ।**
**ಸುಹೃದಂ ಸರ್ವಭೂತಾನಾಂ ಜ್ಞಾತ್ವಾ ಮಾಂ ಶಾಂತಿಮೃಚ್ಛತಿ ॥ ೨೯**

**ಇತಿ ಶ್ರೀಮದ್ಭಗವದ್ಗೀತಾಸೂಪನಿಷತ್ಸು ಬ್ರಹ್ಮವಿದ್ಯಾಯಾಂ ಯೋಗಶಾಸ್ತ್ರೇ ಸಂನ್ಯಾಸಯೋಗೋ ನಾಮ ಪಂಚಮೋಽಧ್ಯಾಯಃ**

ಸಮಸ್ತ ಯಜ್ಞತಪಸ್ಸುಗಳಿಗೆ ಭೋಕ್ತೃವೂ ಸರ್ವಲೋಕಮಹೇಶ್ವರನೂ ಎಲ್ಲ ಪ್ರಾಣಿಗಳ ಸಖನೂ ಆದ ನನ್ನನ್ನು ಅರಿತುಕೊಂಡರೆ ಪರಮ ಶಾಂತಿಯನ್ನೈದುತ್ತಾನೆ. (ಇದು ಸಗುಣನಾದ ಈಶ್ವರನಿಗೆ ಸಂಬಂಧಿಸಿದ ವ್ಯಾವಹಾರಿಕ ಸತ್ಯ)

**ವಿವರಣೆ :** ಭೋಕ್ತೃ = ಯಜ್ಞತಪಸ್ಸುಗಳಿಗೆ ಕರ್ತೃವಾಗಿಯೂ ದೇವತೆಯಾಗಿಯೂ ಭೋಕ್ತೃ. ಸುಹೃತ್ (ಸಖ) = ಪ್ರತ್ಯುಪಕಾರದ ಬಯಕೆಯಿಲ್ಲದೆ ಉಪಕಾರ ಮಾಡತಕ್ಕವನು. ಮಾಂ = ಶ್ರೀಮನ್ನಾರಾಯಣನಾದ ನನ್ನನ್ನು.

**ಇಲ್ಲಿಗೆ ಶ್ರೀಮದ್ಭಗವದ್ಗೀತೆಯಲ್ಲಿ ಸಂನ್ಯಾಸಯೋಗವೆಂಬ ಐದನೆಯ ಅಧ್ಯಾಯವು ಸಮಾಪ್ತವಾಯಿತು.**

## ೫ನೆಯ ಅಧ್ಯಾಯದ ಸಾರ

ಅರ್ಜುನನು ಶ್ರೀಕೃಷ್ಣನಿಗೆ "ಕರ್ಮವನ್ನು ಮಾಡುತ್ತಿರಬೇಕೆಂದು ಒಮ್ಮೆ ಹೇಳುತ್ತೀಯೆ. ಇನ್ನೊಂದು ಸಲ ಅದನ್ನು ಬಿಡಬೇಕೆಂದು ಹೇಳುತ್ತೀಯೆ! ಇವುಗಳಲ್ಲಿ ಶ್ರೇಯಸ್ಕರವಾದದ್ದು ಯಾವುದೆಂಬುದನ್ನು ಹೇಳಿಬಿಡು" ಎಂದು

ಕೇಳಿದನು. ಆಗ ಭಗವಂತನು ಹೇಳಿದ್ದೇನೆಂದರೆ: ಸಂನ್ಯಾಸವೂ ಕರ್ಮ ಯೋಗವೂ ಎರಡೂ ಮೋಕ್ಷಕ್ಕೆ ದಾರಿಗಳೇ. ಅವುಗಳಲ್ಲಿ ನಿನಗೆ ಕರ್ಮ ಯೋಗವೇ ಉತ್ತಮವಾದದ್ದು. ರಾಗದ್ವೇಷಗಳಿಲ್ಲದೆ ಕರ್ಮವನ್ನು ಮಾಡ ತಕ್ಕವನನ್ನು ನಿತ್ಯಸಂನ್ಯಾಸಿ ಎನ್ನಬಹುದು. ಈತನಿಗೆ ಕರ್ಮಬಂಧವು ಇಲ್ಲ.

ಆದರೆ ಇವೆರಡೂ ಸ್ವತಂತ್ರವಾದ ಮಾರ್ಗಗಳಲ್ಲ. ಕರ್ಮವನ್ನು ರಾಗ ದ್ವೇಷಗಳಿಲ್ಲದೆ ಆಚರಿಸತಕ್ಕವನಿಗೆ ಜ್ಞಾನನಿಷ್ಠೆಯು ಪ್ರಾಪ್ತವಾಗಿ ಜ್ಞಾನಯೋಗವು ಸಿದ್ಧಿಸಿ ಮೋಕ್ಷವು ನಿಶ್ಚಯವಾಗಿ ದೊರಕುತ್ತದೆ. ಜ್ಞಾನ ವೈರಾಗ್ಯಗಳಿಲ್ಲದೆ ಸಂನ್ಯಾಸವನ್ನು ತೆಗೆದುಕೊಳ್ಳುವುದಕ್ಕಿಂತ ಕರ್ಮಯೋಗವೇ ಉತ್ತಮ. ಜ್ಞಾನ ವೈರಾಗ್ಯಾದಿಗಳು ಬಂದಮೇಲೆ ಸಂನ್ಯಾಸಿಯಾದರೆ, ಆಗ ಜ್ಞಾನಯೋಗದಿಂದ ನೇರವಾಗಿ ಮೋಕ್ಷ ದೊರಕುವುದು.

ತತ್ತ್ವದೃಷ್ಟಿಯಿಂದ ನೋಡಿದಾಗ ಜ್ಞಾನಿಯು ಯಾವ ಕರ್ಮವನ್ನೂ ಮಾಡುವುದಿಲ್ಲವೆಂದೇ ಹೇಳಬೇಕು. ನಡೆಯುವುದು, ನೋಡುವುದು, ಕೇಳುವುದು, ತಿನ್ನುವುದು ಮುಂತಾದ ಕ್ರಿಯೆಗಳು ಶುದ್ಧಾತ್ಮನಾದ ತನಗೆ ಇಲ್ಲ– ಎಂದು ಅವನು ನಿಶ್ಚಯಿಸಿಕೊಂಡಿರುತ್ತಾನೆ. ಕರ್ಮವೇನಿದ್ದರೂ ದೇಹೇಂದ್ರಿಯ ಗಳಿಂದ ನಡೆಯುತಕ್ಕದ್ದು. ಕರ್ಮಕ್ಕೂ ತನಗೂ ಸಂಬಂಧವಿಲ್ಲವೆಂದು ನಿಶ್ಚಯಿಸಿ ಕೊಂಡಾಗ ಅವುಗಳು ನಡೆಸುವ ಕರ್ಮಗಳ ಫಲವು ಜೀವಾತ್ಮನಿಗೆ ಅಂಟುವುದೇ ಇಲ್ಲ. ಕರ್ಮಯೋಗಿಯು ಈಶ್ವರಾರ್ಪಣ ಬುದ್ಧಿಯಿಂದ ಕರ್ಮವನ್ನಾಚರಿಸು ತ್ತಾನೆ. ಆ ನಿಷ್ಕಾಮಕರ್ಮದಿಂದ ಆತನಿಗೆ ಯಾವ ಕರ್ಮವೂ ಬಂಧಕ ವಾಗುವುದಿಲ್ಲ. ಅವನಿಗೆ ಆತ್ಮಜ್ಞಾನವಾಗಿರದಿದ್ದರೂ ಚಿತ್ತಶುದ್ಧಿಯೆಂಬ ಫಲವು ತಾನಾಗಿ ದೊರಕುತ್ತದೆ.

ಜ್ಞಾನಿಯು ಇತರ ಜನರಲ್ಲಿರುವ ಆತ್ಮವೂ ತನ್ನಲ್ಲಿರುವ ಆತ್ಮವೂ ಒಂದೇ ಎಂದು ತಿಳಿದಿರುತ್ತಾನೆ. ತಾನು ಏನನ್ನೂ ಮಾಡದ, ಇತರರಿಂದಲೂ ಮಾಡಿಸದ ಅಸಂಗನಾದ ಆತ್ಮನೆಂದು ತಿಳಿದಿರುತ್ತಾನೆ. ಆದ್ದರಿಂದ ಅವನೇ ನಿಜವಾದ ಸಂನ್ಯಾಸಿ. ಎಲ್ಲ ಕರ್ಮಗಳನ್ನೂ ಬಿಟ್ಟವನೆಂದರೆ ಆತನೇ.

ಜ್ಞಾನಿಗಳ ದೃಷ್ಟಿಯಲ್ಲಿ ಸಕಲವೂ ಬ್ರಹ್ಮವೇ ಆಗಿರುವುದರಿಂದ ಅವರಿಗೆ ಲೌಕಿಕ ಸುಖದುಃಖಗಳ ಕಲ್ಪನೆಯೇ ಇರುವುದಿಲ್ಲ. ಅವರಿಗೆ ಸುಖವೆಂದರೆ ಆತ್ಮನೇ. ಮೋಕ್ಷವನ್ನು ಬಯಸತಕ್ಕವನು ವಿಚಾರದಿಂದ ಸಂದೇಹಗಳನ್ನು ಪರಿಹರಿಸಿಕೊಂಡು ನಿಜವಾದ ತತ್ತ್ವವೇನೆಂಬುದನ್ನು ವಿಮರ್ಶಿಸಿ ನಿಶ್ಚಯಿಸಿ ಕೊಳ್ಳತಕ್ಕದ್ದು. ಮನಸ್ಸನ್ನೂ ಇಂದ್ರಿಯಗಳನ್ನೂ ಅಂಕೆಗೆ ಒಳಪಡಿಸಿ ಸಕಲ

ಭೂತಗಳಿಗೂ ಹಿತವನ್ನೇ ಬಯಸುತ್ತಿರಬೇಕು. ಕಾಮಕ್ರೋಧಗಳನ್ನು ಗೆದ್ದು ಸದಾ ಸಂತುಷ್ಟಚಿತ್ತನಾಗಿರುವ ಆತ್ಮಜ್ಞಾನಿಯು ಜೀವನ್ಮುಕ್ತನೇ ಸರಿ. ದೇಹವು ಕಳಚಿಹೋದಮೇಲೂ ಅವನು ಆತ್ಮಸ್ವರೂಪವಾಗಿಯೇ ಇರುತ್ತಾನೆ.

ಆತ್ಮಜ್ಞಾನಕ್ಕೆ ಆತ್ಮಧ್ಯಾನವೇ ಹತ್ತಿರದ ಸಾಧನ. ಧ್ಯಾನಯೋಗಿಯು ಏಕಾಂತ ದಲ್ಲಿ ಕುಳಿತು, ಬಾಹ್ಯವಿಷಯಗಳೊಂದನ್ನೂ ಗಮನಿಸದೆ, ಆತ್ಮಧ್ಯಾನದಲ್ಲಿ ನಿರತನಾಗಿರಬೇಕು. ಈ ರೀತಿಯಾದ ದೀರ್ಘಕಾಲದ ಸಾಧನೆಯಿಂದ ಅವನು ಸಕಲವೂ ಬ್ರಹ್ಮವೇ ಎಂಬುದನ್ನು ಅರಿತುಕೊಳ್ಳುತ್ತಾನೆ. ಈಶ್ವರನೇ ಪ್ರಾಣಿಗಳ ಹೃದಯದಲ್ಲಿದ್ದು ಕರ್ಮಗಳ ಫಲಕ್ಕೆ ಒಡೆಯನೂ ಕರ್ತನೂ ಭೋಕ್ತನೂ ಎಂದರಿತು ಶಾಂತಿಯನ್ನು ಪಡೆಯುತ್ತಾನೆ.

## ಅಧ್ಯಾಯ ೬

# ಧ್ಯಾನಯೋಗ

ಹಿಂದಿನ ಅಧ್ಯಾಯದಲ್ಲಿ ಸೂತ್ರರೂಪವಾಗಿ ಹೇಳಿದ ಧ್ಯಾನದ ವಿವರಣೆ ಇಲ್ಲಿದೆ. ಸಮ್ಯಗ್ದರ್ಶನಕ್ಕೆ ಧ್ಯಾನಯೋಗವು ಅಂತರಂಗ. ಇದರಲ್ಲಿ ಆತ್ಮಚಿಂತನೆಯೇ ಇರುವುದರಿಂದ ಕರ್ಮಯೋಗಕ್ಕಿಂತ ಇದು ಹತ್ತಿರದ ಕಾರಣ.

**ಶ್ರೀಭಗವಾನುವಾಚ –**

**ಅನಾಶ್ರಿತಃ ಕರ್ಮಫಲಂ ಕಾರ್ಯಂ ಕರ್ಮ ಕರೋತಿ ಯಃ ।**
**ಸ ಸಂನ್ಯಾಸೀ ಚ ಯೋಗೀ ಚ ನ ನಿರಗ್ನಿರ್ನ ಚಾಕ್ರಿಯಃ ॥ ೧**

**ಭಗವಂತನು ಹೀಗೆಂದನು–** ಕರ್ಮಫಲವನ್ನು ಆಶ್ರಯಿಸದೆ ಮಾಡಬೇಕಾದ ಕರ್ಮವನ್ನು ಯಾವನು ಮಾಡುತ್ತಿರುವನೋ ಅವನು ಸಂನ್ಯಾಸಿಯೆಂದೂ ಯೋಗಿಯೆಂದೂ ತಿಳಿಯಬೇಕು. ಕೇವಲ ನಿರಗ್ನಿಯೂ ಅಕ್ರಿಯನೂ ಆದವನಲ್ಲ.

**ವಿವರಣೆ :** ನಿರಗ್ನಿ = ಗಾರ್ಹಪತ್ಯ, ಆಹವನೀಯ, ಅನ್ವಾಹಾರ್ಯ – ಎಂಬ ತ್ರೇತಾಗ್ನಿಗಳನ್ನು ತ್ಯಜಿಸಿದವನು. ಅಕ್ರಿಯ = ದಾನ, ಅಧ್ಯಾಪನಾದಿಕ್ರಿಯೆಗಳನ್ನು ಬಿಟ್ಟವನು. ಸಂನ್ಯಾಸಾಶ್ರಮಿಯು ನಿರಗ್ನಿಯೂ ಅಕ್ರಿಯನೂ ಆಗಿರುತ್ತಾನೆಂಬುದು ಶಾಸ್ತ್ರಸಿದ್ಧವಾಗಿದೆ. ಆದ್ದರಿಂದ 'ನ ನಿರಗ್ನಿರ್ನಚಾಕ್ರಿಯಃ' ಎಂದು ಹೇಳಿದ್ದು ಕರ್ಮಯೋಗವನ್ನು ಹೊಗಳುವುದಕ್ಕಾಗಿ ಮಾತ್ರ. ಕರ್ಮನಿಷ್ಠನು ಕರ್ಮಫಲದ ಸಂನ್ಯಾಸ ಮಾಡಿರುವುದರಿಂದ ಸಂನ್ಯಾಸಿಯೆಂದೂ ಫಲೇಚ್ಛೆಯಿಲ್ಲದಾಗ ಚಿತ್ತವಿಕ್ಷೇಪವಿರುವುದಿಲ್ಲವಾದ್ದರಿಂದ ಯೋಗಿಯೆಂದೂ ಇಲ್ಲಿ ವರ್ಣಿಸಿದೆ.

**ಯಂ ಸಂನ್ಯಾಸಮಿತಿ ಪ್ರಾಹುರ್ಯೋಗಂ ತಂ ವಿದ್ಧಿ ಪಾಂಡವ ।**
**ನ ಹ್ಯಸಂನ್ಯಸ್ತಸಂಕಲ್ಪೋ ಯೋಗೀ ಭವತಿ ಕಶ್ಚನ ॥ ೨**

ಪಾಂಡವ, ಯಾವುದನ್ನು (ಪರಮಾರ್ಥ) ಸಂನ್ಯಾಸವೆಂದು ಶಾಸ್ತ್ರಜ್ಞರು ಹೇಳುತ್ತಾರೋ ಅದು ಯೋಗವೆಂದು ತಿಳಿ. ಏಕೆಂದರೆ, ಫಲವಿಷಯಕವಾಗಿ ಅಭಿಲಾಷೆಯನ್ನು ಯಾವನು ಸಂನ್ಯಾಸಮಾಡಿಲ್ಲವೋ ಅವನು ಯಾವನೂ ಯೋಗಿಯಾಗಲಾರನು.

**ವಿವರಣೆ :** ಪರಮಾರ್ಥಸಂನ್ಯಾಸಿಯು ಕರ್ಮವನ್ನೂ ಅದರ ಫಲವನ್ನೂ ತ್ಯಜಿಸಿರುತ್ತಾನೆ. ಈ ಕರ್ಮನಿಷ್ಠನು ಕರ್ಮವನ್ನು ಮಾಡುತ್ತಲೇ ಅದರ ಫಲವನ್ನು ತ್ಯಜಿಸಿರುತ್ತಾನೆ. ಫಲಾಶೆಯನ್ನು ತ್ಯಜಿಸಿದ್ದರಿಂದ ಚಿತ್ತಸಮಾಧಾನ ಉಂಟಾಗುತ್ತದೆ. ಚಿತ್ತಸಮಾಧಾನವಿರತಕ್ಕವನು ಯೋಗಿಯೆನ್ನಲಡ್ಡಿಯಿಲ್ಲ.

**ಆರುರುಕ್ಷೋರ್ಮುನೇರ್ಯೋಗಂ ಕರ್ಮ ಕಾರಣಮುಚ್ಯತೇ ।**
**ಯೋಗಾರೂಢಸ್ಯ ತಸ್ಯೈವ ಶಮಃ ಕಾರಣಮುಚ್ಯತೇ ॥** ೩

(ಧ್ಯಾನ)ಯೋಗವನ್ನು ಏರಲೆಳಸುವ ಮುನಿಗೆ ಕರ್ಮವು ಸಾಧನವೆನಿಸುತ್ತದೆ. ಧ್ಯಾನಯೋಗಾರೂಢನಾದ ಅವನಿಗೆ ಕರ್ಮಗಳ ಶಮವು (ತ್ಯಾಗವು) ಯೋಗಾರೂಢನಾಗಿರುವುದಕ್ಕೆ ಸಾಧನವೆನಿಸುತ್ತದೆ.

**ವಿವರಣೆ :** ಕರ್ಮಾಚರಣೆಯು ಧ್ಯಾನಯೋಗಕ್ಕೆ ಇಂದ್ರಿಯಜಯದ್ವಾರಾ ಕಾರಣವಾಗುತ್ತದೆ. ಅನಂತರ ಧ್ಯಾನಯೋಗದಲ್ಲಿ ನಿಂತು ಯೋಗಾರೂಢನೆನಿಸುವುದಕ್ಕೆ ಕರ್ಮತ್ಯಾಗವು ಆವಶ್ಯಕವಾದ್ದರಿಂದ ಅದು ಸಾಧನವಾಗುತ್ತದೆ.

**ಯದಾ ಹಿ ನೇಂದ್ರಿಯಾರ್ಥೇಷು ನ ಕರ್ಮಸ್ವನುಷಜ್ಜತೇ ।**
**ಸರ್ವಸಂಕಲ್ಪಸಂನ್ಯಾಸೀ ಯೋಗಾರೂಢಸ್ತದೋಚ್ಯತೇ ॥** ೪

(ಹೀಗೆ ಧ್ಯಾನಯೋಗದಲ್ಲಿ ಚಿತ್ತವನ್ನು ಒಂದೆಡೆ ನಿಲ್ಲಿಸಲು ಬಯಸತಕ್ಕ) ಯೋಗಿಯು ಇಂದ್ರಿಯಾರ್ಥಗಳಾದ ಶಬ್ದಾದಿವಿಷಯಗಳಲ್ಲಿಯೂ ನಿತ್ಯ ನೈಮಿತ್ತಿಕಾದಿ ಕರ್ಮಗಳಲ್ಲಿಯೂ ಯಾವಾಗ ಆಸಕ್ತಿಯನ್ನು ತೊರೆಯುವನೋ ಆಗ ಸರ್ವಸಂಕಲ್ಪ ಸಂನ್ಯಾಸಿಯಾದ ಆತನು ಯೋಗಾರೂಢನೆನಿಸುತ್ತಾನೆ.

**ವಿವರಣೆ :** ಸಂಕಲ್ಪದಿಂದ ಆಯಾ ವಸ್ತುವಿನಲ್ಲಿ ಕಾಮವೂ ಕಾಮದಿಂದ ಕ್ರಿಯೆಯೂ ಹುಟ್ಟುತ್ತದೆ. ಸಂಕಲ್ಪವನ್ನು ತ್ಯಜಿಸಿದವನಿಗೆ ಕರ್ಮವೂ ಕರ್ಮಫಲವೂ ಬಿಟ್ಟುಹೋಗುತ್ತವೆ.

**ಉದ್ಧರೇದಾತ್ಮನಾಽಽತ್ಮಾನಂ ನಾತ್ಮಾನಮವಸಾದಯೇತ್ ।**
**ಆತ್ಮೈವ ಹ್ಯಾತ್ಮನೋ ಬಂಧುರಾತ್ಮೈವ ರಿಪುರಾತ್ಮನಃ ॥** ೫

ತನ್ನನ್ನು (ಸಂಸಾರದ ಕಡಲಿನಿಂದ ಮೇಲೆತ್ತಿ) ತಾನೇ ಉದ್ಧಾರ ಮಾಡಿಕೊಳ್ಳಬೇಕು. ತನ್ನನ್ನು ಇನ್ನೂ ಕೆಳಕ್ಕೆ ತಳ್ಳಿಬಿಡಬಾರದು. ಏಕೆಂದರೆ, ತಾನೊಬ್ಬನೇ ತನಗೆ ಬಂಧು. ತಾನೊಬ್ಬನೇ ತನಗೆ ವೈರಿ.

**ವಿವರಣೆ :** ಪತ್ನೀಪುತ್ರಾದಿಗಳು ಸಹ ಸ್ನೇಹಬಂಧಕ್ಕೆ ಕಾರಣರಾಗಿಬಿಡುತ್ತಾ

ರಾದ್ದರಿಂದ ಮೋಕ್ಷಾರ್ಥಿಗೆ ಬಂಧುಗಳಲ್ಲ. ತನ್ನನ್ನು ಹೊರಗಿನ ವೈರಿಯು ದ್ವೇಷಿಸುವುದಕ್ಕೂ ತಾನೇ ಕಾರಣನಾಗುವುದರಿಂದ ತನಗೆ ತಾನೇ ವೈರಿಯಾಗ ಬಹುದು.

**ಬಂಧುರಾತ್ಮಾಽತ್ಮನಸ್ತಸ್ಯ ಯೇನಾತ್ಮೈವಾತ್ಮನಾ ಜಿತಃ ।**
**ಅನಾತ್ಮನಸ್ತು ಶತ್ರುತ್ವೇ ವರ್ತೇತಾತ್ಮೈವ ಶತ್ರುವತ್ ॥ ೬**

ಯಾವನು ತನ್ನನ್ನು ತಾನೇ ಜಯಿಸಿಕೊಂಡಿರುವನೋ ಅವನು ತನಗೆ ತಾನೇ ಬಂಧು. ಆದರೆ ಅನಾತ್ಮನಾದರೋ (ಅಜಿತೇಂದ್ರಿಯನಾದರೋ) ತನಗೆ ತಾನೇ ಶತ್ರುವಿನಂತೆ ವೈರಭಾವದಲ್ಲಿರುವನು. (ತನ್ನನ್ನು ತಾನೇ ಹಾಳು ಮಾಡಿ ಕೊಳ್ಳುತ್ತಾನೆ.)

**ಜಿತಾತ್ಮನಃ ಪ್ರಶಾಂತಸ್ಯ ಪರಮಾತ್ಮಾ ಸಮಾಹಿತಃ ।**
**ಶೀತೋಷ್ಣಸುಖದುಃಖೇಷು ತಥಾ ಮಾನಾಪಮಾನಯೋಃ ॥ ೭**

**ಜ್ಞಾನವಿಜ್ಞಾನತೃಪ್ತಾತ್ಮಾ ಕೂಟಸ್ಥೋ ವಿಜಿತೇಂದ್ರಿಯಃ ।**
**ಯುಕ್ತ ಇತ್ಯುಚ್ಯತೇ ಯೋಗೀ ಸಮಲೋಷ್ಟಾಶ್ಮಕಾಂಚನಃ ॥ ೮**

ಜಿತಾತ್ಮನೂ ಪ್ರಸನ್ನಚಿತ್ತನೂ ಆದ ಯೋಗಿಗೆ ಪರಮಾತ್ಮನು ಸಮಾಹಿತನಾಗಿರುವನು – ಎಂದರೆ – ತನ್ನ ಆತ್ಮವಾಗಿಯೇ ತೋರುತ್ತಿರುವನು. ಶೀತೋಷ್ಣಸುಖದುಃಖಗಳಲ್ಲಿಯೂ ಮಾನಾಪಮಾನಪ್ರಸಂಗಗಳಲ್ಲಿಯೂ ಯಾವ ಯೋಗಿಯು ಜ್ಞಾನವಿಜ್ಞಾನಗಳಿಂದ ಸಂತೃಪ್ತನೂ ಕೂಟಸ್ಥನೂ ಜಿತೇಂದ್ರಿಯನೂ ಆಗಿ ಮಣ್ಣುಹೆಂಟೆ ಕಲ್ಲು ಚಿನ್ನ – ಇವುಗಳನ್ನು ಸಮಭಾವದಿಂದ ಕಾಣುತ್ತಾನೋ ಆತನು ಯುಕ್ತ–ಸಮಾಹಿತನೆನಿಸುತ್ತಾನೆ.

**ವಿವರಣೆ :** ಜ್ಞಾನ = ಶಾಸ್ತ್ರೋಕ್ತವಿಷಯಗಳ ಅರಿವು. ವಿಜ್ಞಾನ = ಅಂತಹ ಅರಿವನ್ನು ತನ್ನ ಅನುಭವಕ್ಕೆ ತಂದುಕೊಳ್ಳುವುದು. ಇವೆರಡು ಇದ್ದಾಗ ಯೋಗಿಯು ಶೀತೋಷ್ಣಾದಿದ್ವಂದ್ವಗಳನ್ನು ಗಣಿಸುವುದಿಲ್ಲ. ಕೂಟಸ್ಥ = ನಿಶ್ಚಲ, ಮನಸ್ಸನ್ನು ಒಂದೇ ಸ್ಥಿತಿಯಲ್ಲಿ ಇಟ್ಟುಕೊಂಡವನು.

**ಸುಹೃನ್ಮಿತ್ರಾರ್ಯುದಾಸೀನ ಮಧ್ಯಸ್ಥದ್ವೇಷ್ಯಬಂಧುಷು ।**
**ಸಾಧುಷ್ವಪಿ ಚ ಪಾಪೇಷು ಸಮಬುದ್ಧಿರ್ವಿಶಿಷ್ಯತೇ ॥ ೯**

ಸುಹೃತ್, ಮಿತ್ರ, ಅರಿ, ಉದಾಸೀನ, ಮಧ್ಯಸ್ಥ, ದ್ವೇಷ್ಯ, ಬಂಧುಗಳಲ್ಲಿಯೂ ಸಾಧುಗಳಲ್ಲಿಯೂ ಪಾಪಿಗಳಲ್ಲಿಯೂ ಸಮಬುದ್ಧಿಯುಳ್ಳವನು – ಅವರ

ಕ್ರಿಯೆಯಿಂದ ವಿಕಾರಗೊಳ್ಳದ ಬುದ್ಧಿಯುಳ್ಳವನು – ಹೆಚ್ಚಿನ ಯೋಗ್ಯತೆಯುಳ್ಳವನು (ಯೋಗಾರೂಢರಲ್ಲಿ ಉತ್ತಮನು).

**ವಿವರಣೆ :** ಸುಹೃತ್ = ಪ್ರತ್ಯುಪಕಾರವನ್ನು ಬಯಸದೆ ಉಪಕರಿಸುವವನು. ಮಿತ್ರ = ಸ್ನೇಹಿತ. ಮಧ್ಯಸ್ಥ = ವಿರೋಧವುಳ್ಳವರಿಬ್ಬರಿಗೂ ಹಿತೈಷಿ. ದ್ವೇಷ್ಯ = ತನಗೆ ಪ್ರಿಯನಲ್ಲದವನು.

**ಯೋಗೀ ಯುಂಜೀತ ಸತತಮಾತ್ಮಾನಂ ರಹಸಿ ಸ್ಥಿತಃ ।**
**ಏಕಾಕೀ ಯತಚಿತ್ತಾತ್ಮಾ ನಿರಾಶೀರಪರಿಗ್ರಹಃ ॥** ೧೦

ಯೋಗಿಯು ಏಕಾಂತದಲ್ಲಿದ್ದುಕೊಂಡು ತನ್ನ ಅಂತಃಕರಣವನ್ನು ತೆರಪಿಲ್ಲದೆ ಬ್ರಹ್ಮದಲ್ಲಿ ಏಕಾಗ್ರವಾಗಿ ನಿಲ್ಲಿಸಬೇಕು. ಅವನು ಏಕಾಕಿಯಾಗಿದ್ದು ಚಿತ್ತವನ್ನೂ ದೇಹವನ್ನೂ ನಿಯಂತ್ರಿಸಿ. ಆಸೆಯೆಲ್ಲವನ್ನೂ ತೊರೆದು, ತನ್ನದೆನ್ನುವುದು ಇಲ್ಲದವನಾಗತಕ್ಕದ್ದು.

**ವಿವರಣೆ :** 'ರಹಸಿ ಸ್ಥಿತಃ' ಎಂದಿದ್ದರೂ ಮತ್ತೆ 'ಏಕಾಕಿ' ಎಂದು ಹೇಳಿರುವುದರಿಂದ ಇದು ಸಂನ್ಯಾಸಿಗೆ ಸಂಬಂಧಿಸಿದ ಉಪದೇಶವೆಂದು ತಿಳಿಯಬಹುದು.

**ಶುಚೌ ದೇಶೇ ಪ್ರತಿಷ್ಠಾಪ್ಯ ಸ್ಥಿರಮಾಸನಮಾತ್ಮನಃ ।**
**ನಾತ್ಯುಚ್ಛ್ರಿತಂ ನಾತಿನೀಚಂ ಚೈಲಾಜಿನಕುಶೋತ್ತರಮ್ ॥** ೧೧

ಶುಚಿಯಾದ ಪ್ರದೇಶದಲ್ಲಿ ತನ್ನ ಧ್ಯಾನಕ್ಕಾಗಿ ಒಂದು ಆಸನವನ್ನು ಕಲ್ಪಿಸಿಕೊಳ್ಳಬೇಕು. ಅದು ಅಲ್ಲಾಡದಿರುವುದೂ ಹೆಚ್ಚು ಎತ್ತರವಿಲ್ಲದ್ದೂ ಹಾಗೆಯೇ ಹೆಚ್ಚು ತಗ್ಗು ಇಲ್ಲದ್ದೂ ಆಗಿರಬೇಕು. ಆಸನದ ಮೇಲೆ ದರ್ಭೆಗಳನ್ನು ಹರಡಿ, ಅದರ ಮೇಲೆ ಮೃಗದ ಚರ್ಮವನ್ನು ಹಾಸಿ, ಅದರ ಮೇಲೆ ಒಂದು ಬಟ್ಟೆಯನ್ನು ಹಾಸಬೇಕು.

**ತತ್ರೈಕಾಗ್ರಂ ಮನಃ ಕೃತ್ವಾ ಯತಚಿತ್ತೇಂದ್ರಿಯಕ್ರಿಯಃ ।**
**ಉಪವಿಶ್ಯಾಸನೇ ಯುಂಜ್ಯಾದ್ಯೋಗಮಾತ್ಮವಿಶುದ್ಧಯೇ ॥** ೧೨

ಆ ಆಸನದಲ್ಲಿ ಕುಳಿತುಕೊಂಡು ಚಿತ್ತ ಮತ್ತು ಇಂದ್ರಿಯಗಳ ವ್ಯಾಪಾರಗಳನ್ನು ಬಿಗಿಹಿಡಿದು ಮನಸ್ಸನ್ನು ಏಕಾಗ್ರವಾಗಿ ಆತ್ಮನಲ್ಲಿ ನಿಲ್ಲಿಸಿ ಅಂತಃಕರಣಶುದ್ಧಿಗಾಗಿ ಯೋಗವನ್ನಾಚರಿಸಬೇಕು.

**ಸಮಂ ಕಾಯಶಿರೋಗ್ರೀವಂ ಧಾರಯನ್ನಚಲಂ ಸ್ಥಿರಃ ।**
**ಸಂಪ್ರೇಕ್ಷ್ಯ ನಾಸಿಕಾಗ್ರಂ ಸ್ವಂ ದಿಶಶ್ಚಾನವಲೋಕಯನ್ ॥ ೧೩**

ತನ್ನ ದೇಹ ತಲೆ ಕುತ್ತಿಗೆಗಳನ್ನು ಸಮರೇಖೆಯಲ್ಲಿ ನೆಟ್ಟಗೆ ನಿಲ್ಲಿಸಿ, ಅತ್ತಿತ್ತ ಸರಿಯದೆ ಸ್ಥಿರನಾಗಿ ಸುತ್ತಲೂ ದಿಕ್ಕುಗಳನ್ನು ನೋಡದೆ ತನ್ನ ನಾಸಿಕಾಗ್ರವನ್ನು ಮಾತ್ರ ನೋಡುವಂತೆ ದೃಷ್ಟಿಯನ್ನಿಡಬೇಕು.

**ಪ್ರಶಾಂತಾತ್ಮಾ ವಿಗತಭೀರ್ಬ್ರಹ್ಮಚಾರಿವ್ರತೇ ಸ್ಥಿತಃ ।**
**ಮನಃ ಸಂಯಮ್ಯ ಮಚ್ಚಿತ್ತೋ ಯುಕ್ತ ಆಸೀತ ಮತ್ಪರಃ ॥ ೧೪**

ಶಾಂತಾತ್ಮನೂ ಭಯರಹಿತನೂ ಆಗಿ, ಬ್ರಹ್ಮಚಾರಿವ್ರತದಲ್ಲಿದ್ದು, ಮನೋವ್ಯಾಪಾರಗಳನ್ನು ತಡೆದು ಚಿತ್ತವನ್ನು ಪರಮೇಶ್ವರನಾದ ನನ್ನಲ್ಲಿಟ್ಟು ನಾನೇ (ಭಗವಂತನೇ) ಪರಮೋತ್ತಮನೆಂದು ಮತ್ಪರನಾಗಿರಬೇಕು.

ವಿವರಣೆ : ಬ್ರಹ್ಮಚಾರಿವ್ರತ = ಗುರುಶುಶ್ರೂಷೆ, ಭಿಕ್ಷಾನ್ನಭೋಜನ ಇತ್ಯಾದಿ.

**ಯುಂಜನ್ನೇವಂ ಸದಾಽತ್ಮಾನಂ ಯೋಗೀ ನಿಯತಮಾನಸಃ ।**
**ಶಾಂತಿಂ ನಿರ್ವಾಣಪರಮಾಂ ಮತ್ಸಂಸ್ಥಾಮಧಿಗಚ್ಛತಿ ॥ ೧೫**

ನಿಯತಮಾನಸನಾಗಿ ಹೀಗೆ ಸತತವೂ ತನ್ನ ಚಿತ್ತವನ್ನು ಏಕಾಗ್ರವಾಗಿ ನಿಲ್ಲಿಸುತ್ತಿರುವ ಯೋಗಿಯು ಮೋಕ್ಷವೇ ಕಡೆಯ ನಿರ್ವಾಣವಾಗಿರುವ ಮತ್ತು ನನಗೆ ಅಧೀನವಾಗಿರುವ ಪರಮಶಾಂತಿಯನ್ನೈದುವನು.

**ನಾತ್ಯಶ್ನತಸ್ತು ಯೋಗೋಽಸ್ತಿ ನ ಚೈಕಾಂತಮನಶ್ನತಃ ।**
**ನ ಚಾತಿಸ್ವಪ್ನಶೀಲಸ್ಯ ಜಾಗ್ರತೋ ನೈವ ಚಾರ್ಜುನ ॥ ೧೬**

ಅರ್ಜುನ, ಆವಶ್ಯಕತೆಗಿಂತ ಅತಿಯಾಗಿ ತಿನ್ನತಕ್ಕವನಿಗೂ ಏನೂ ತಿನ್ನದೆ ಇರತಕ್ಕವನಿಗೂ ಬಹಳ ನಿದ್ದೆಬಡಕನಿಗೂ ನಿದ್ದೆಯಿಲ್ಲದೆ ಜಾಗರಣೆ ಮಾಡತಕ್ಕವನಿಗೂ ಯೋಗವು ಸಿದ್ಧಿಸುವುದಿಲ್ಲ.

**ಯುಕ್ತಾಹಾರವಿಹಾರಸ್ಯ ಯುಕ್ತಚೇಷ್ಟಸ್ಯ ಕರ್ಮಸು ।**
**ಯುಕ್ತಸ್ವಪ್ನಾವಬೋಧಸ್ಯ ಯೋಗೋ ಭವತಿ ದುಃಖಹಾ ॥ ೧೭**

ಹಿತಮಿತವಾಗಿ ಆಹಾರವಿಹಾರಗಳನ್ನು ಮಾಡತಕ್ಕವನೂ ಕರ್ಮಗಳಲ್ಲಿ ಮಿತವಾದ ದೈಹಿಕ ಕ್ರಿಯೆಯುಳ್ಳವನೂ ಮಿತವಾದ ನಿದ್ರೆ ಎಚ್ಚರಗಳುಳ್ಳವನೂ ಆದವನಿಗೆ ಯೋಗವು ಸಂಸಾರದುಃಖನಾಶಿಯಾಗಿ ಸಿದ್ಧಿಸುವುದು.

**ಯದಾ ವಿನಿಯತಂ ಚಿತ್ತಮಾತ್ಮನ್ಯೇವಾವತಿಷ್ಠತೇ ।**
**ನಿಃಸ್ಪೃಹಃ ಸರ್ವಕಾಮೇಭ್ಯೋ ಯುಕ್ತ ಇತ್ಯುಚ್ಯತೇ ತದಾ ॥ ೧೮**

ನಿಯಂತ್ರಿತವಾದ ಚಿತ್ತವು ಯಾವಾಗ ಆತ್ಮನಲ್ಲಿಯೇ ಸ್ಥಿರವಾಗಿ ನಿಂತುಕೊಳ್ಳುತ್ತದೆಯೋ ಆಗ ಸರ್ವಕಾಮನೆಗಳಲ್ಲಿಯೂ ನಿಃಸ್ಪೃಹನಾದ ಸಾಧಕನು ಯುಕ್ತನು – ನಿಜವಾದ ಯೋಗಿ ಎನಿಸಿಕೊಳ್ಳುತ್ತಾನೆ.

**ಯಥಾ ದೀಪೋ ನಿವಾತಸ್ಥೋ ನೇಂಗತೇ ಸೋಪಮಾ ಸ್ಮೃತಾ ।**
**ಯೋಗಿನೋ ಯತಚಿತ್ತಸ್ಯ ಯುಂಜತೋ ಯೋಗಮಾತ್ಮನಃ ॥ ೧೯**

ಆತ್ಮನ ಯೋಗವನ್ನು ಆಚರಿಸುವ ಎಂದರೆ – ಆತ್ಮನಲ್ಲಿ ಸಮಾಧಿಸ್ಥನಾಗಿರುವ ನಿಯತಚಿತ್ತನಾದ ಯೋಗಿಗೆ, ಗಾಳಿಯಿಲ್ಲದೆಡೆಯಲ್ಲಿರುವ ದೀಪವು ಹೇಗೆ ಅಲ್ಲಾಡುವುದಿಲ್ಲವೋ ಹಾಗೆ ಎಂಬ ಹೋಲಿಕೆ ಸಲ್ಲುತ್ತದೆ.

**ಯತ್ರೋಪರಮತೇ ಚಿತ್ತಂ ನಿರುದ್ಧಂ ಯೋಗಸೇವಯಾ ।**
**ಯತ್ರ ಚೈವಾತ್ಮನಾತ್ಮಾನಂ ಪಶ್ಯನ್ನಾತ್ಮನಿ ತುಷ್ಯತಿ ॥ ೨೦**

ಯೋಗಾನುಷ್ಠಾನದಿಂದ ನಿರುದ್ಧವಾದ ಚಿತ್ತವು ಯಾವಾಗ ವ್ಯಾಪಾರವಿಲ್ಲದೆ ಸುಮ್ಮನಾಗುವುದೋ, ಯಾವಾಗ ಸಾಧಕನು ಶುದ್ಧಾಂತಃಕರಣದಿಂದ ಪರಮಾತ್ಮನನ್ನು ಕಂಡು ತನ್ನಲ್ಲಿಯೇ ತೃಪ್ತನಾಗುವನೋ –

**ಟಿಪ್ಪಣಿ :** ಈ ಮಾತುಗಳೆಲ್ಲವೂ ೨೩ನೇ ಶ್ಲೋಕದಲ್ಲಿ 'ತಂ' ಸೇರಿ ಏಕವಾಕ್ಯವಾಗುತ್ತದೆ.

**ಸುಖಮಾತ್ಯಂತಿಕಂ ಯತ್ತದ್ಬುದ್ಧಿಗ್ರಾಹ್ಯಮತೀಂದ್ರಿಯಮ್ ।**
**ವೇತ್ತಿ ಯತ್ರ ನ ಚೈವಾಯಂ ಸ್ಥಿತಶ್ಚಲತಿ ತತ್ತ್ವತಃ ॥ ೨೧**

ಅತೀಂದ್ರಿಯವೂ (ವಿಷಯಜನ್ಯವಲ್ಲದ್ದು) ಕೇವಲ ಬುದ್ಧಿಗ್ರಾಹ್ಯವೂ ಆದ ಅನಂತ ಸುಖವನ್ನು ಯಾವಾಗ ಯೋಗಿಯು ಅನುಭವಿಸುವನೋ, ಈ ಜ್ಞಾನಿಯು ಯಾವಾಗ ತತ್ತ್ವಸ್ವರೂಪದಲ್ಲಿ ನಿಂತು ಅದರಿಂದ ಚಲಿಸದಿರುವನೋ–

**ಯಂ ಲಬ್ಧ್ವಾ ಚಾಪರಂ ಲಾಭಂ ಮನ್ಯತೇ ನಾಧಿಕಂ ತತಃ ।**
**ಯಸ್ಮಿನ್ ಸ್ಥಿತೋ ನ ದುಃಖೇನ ಗುರುಣಾಽಪಿ ವಿಚಾಲ್ಯತೇ ॥ ೨೨**

ಈತನು ಯಾವ ಆತ್ಮಲಾಭವನ್ನು ಪಡೆದು ಇದಕ್ಕಿಂತ ಉತ್ತಮವಾದ ಲಾಭ ಇನ್ನೊಂದಿಲ್ಲವೆಂದು ಯಾವಾಗ ಎಣಿಸುವನೋ ಮತ್ತು ಯಾವ ಆತ್ಮತತ್ತ್ವದಲ್ಲಿ

ನಿಂತು ಮಹತ್ತರವಾದ ದುಃಖಪ್ರಸಂಗದಲ್ಲಿಯೂ ಇತ್ತ ಚಲಿಸದಿರುವನೋ –

**ತಂ ವಿದ್ಯಾದ್ದುಃಖಸಂಯೋಗವಿಯೋಗಂ ಯೋಗಸಂಜ್ಞಿತಮ್ ।**
**ಸ ನಿಶ್ಚಯೇನ ಯೋಕ್ತವ್ಯೋ ಯೋಗೋಽನಿರ್ವಿಣ್ಣಚೇತಸಾ ॥ ೨೩**

ಅಂತಹ ಅವಸ್ಥಾವಿಶೇಷವು ಯೋಗವೆನಿಸುತ್ತದೆಯೆಂದು ತಿಳಿಯಬೇಕು. ಅದು ದುಃಖಸಂಯೋಗಕ್ಕೆ ವಿಯೋಗವಾಗಿದ್ದರೂ ಯೋಗವೇ! ಮನಸ್ಸಿಗೆ ಬೇಸರವಿಲ್ಲದೆ ದೃಢಸಂಕಲ್ಪದಿಂದ ಆ ಯೋಗವನ್ನು ಸಾಧಿಸಬೇಕು.

**ಸಂಕಲ್ಪಪ್ರಭವಾನ್ ಕಾಮಾನ್ ತ್ಯಕ್ತ್ವಾ ಸರ್ವಾನಶೇಷತಃ ।**
**ಮನಸೈವೇಂದ್ರಿಯಗ್ರಾಮಂ ವಿನಿಯಮ್ಯ ಸಮಂತತಃ ॥ ೨೪**

**ಶನೈಃ ಶನೈರುಪರಮೇತ್ ಬುದ್ಧ್ಯಾ ಧೃತಿಗೃಹೀತಯಾ ।**
**ಆತ್ಮಸಂಸ್ಥಂ ಮನಃ ಕೃತ್ವಾ ನ ಕಿಂಚಿದಪಿ ಚಿಂತಯೇತ್ ॥ ೨೫**

ಸಂಕಲ್ಪದಿಂದ ಹುಟ್ಟಿದ ಎಲ್ಲ ಕಾಮಗಳನ್ನೂ ನಿಃಶೇಷವಾಗಿ ಹೊರದೂಡಿ, ಮನಸ್ಸಿನಿಂದಲೇ ಇಂದ್ರಿಯಸಮೂಹವನ್ನು ಎಲ್ಲ ಕಡೆಗಳಿಂದಲೂ ಹಿಡಿದು ನಿಲ್ಲಿಸಿ, ಧೈರ್ಯಯುಕ್ತವಾದ ಬುದ್ಧಿಯಿಂದ ಮೆಲ್ಲಮೆಲ್ಲನೆ ಶಾಂತಿಯನ್ನು ತಳೆಯಬೇಕು. ಮನಸ್ಸನ್ನು ಆತ್ಮನಲ್ಲಿ ನಿಲ್ಲಿಸಿ, ಮತ್ತೇನನ್ನೂ ಚಿಂತಿಸಬಾರದು (ಇದು ಯೋಗದ ಪರಮಾವಧಿ).

**ಯತೋ ಯತೋ ನಿಶ್ಚರತಿ ಮನಶ್ಚಂಚಲಮಸ್ಥಿರಮ್ ।**
**ತತಸ್ತತೋ ನಿಯಮ್ಯೈತದಾತ್ಮನ್ಯೇವ ವಶಂ ನಯೇತ್ ॥ ೨೬**

ಒಂದೆಡೆ ನಿಲ್ಲಲಾರದ ಚಂಚಲಸ್ವಭಾವದ ಮನಸ್ಸು ಬೇರೆ ಯಾವ ಯಾವ ವಿಷಯದ ಕಡೆಗೆ ಹೊರಳುತ್ತದೆಯೋ, ಆಯಾ ವಿಷಯದಿಂದ ಜಗ್ಗಿ ಎಳೆದು ಆ ಮನಸ್ಸನ್ನು ಆತ್ಮನಲ್ಲಿಯೇ ನಿಲ್ಲಿಸಿ ವಶದಲ್ಲಿಟ್ಟುಕೊಳ್ಳಬೇಕು.

ವಿವರಣೆ : ಹಿಂದಿನ ಶ್ಲೋಕದಲ್ಲಿ ಹೇಳಿದಂತೆ ಆತ್ಮನಲ್ಲಿ ಮನಸ್ಸನ್ನು ನಿಲ್ಲಿಸಲು ಹೊರಟ ಯೋಗಿಗೆ ಇದು ಉಪದೇಶ.

**ಪ್ರಶಾಂತಮನಸಂ ಹ್ಯೇನಂ ಯೋಗಿನಂ ಸುಖಮುತ್ತಮಮ್ ।**
**ಉಪೈತಿ ಶಾಂತರಜಸಂ ಬ್ರಹ್ಮಭೂತಮಕಲ್ಮಷಮ್ ॥ ೨೭**

ಪ್ರಶಾಂತಚಿತ್ತನೂ (ರಾಗದ್ವೇಷಮೋಹಾದಿಕ್ಲೇಶಗಳ) ಧೂಳಿಯ ಲೇಶವೂ ಇಲ್ಲದವನೂ ಅಧರ್ಮಾದಿದೋಷವರ್ಜಿತನೂ ಸರ್ವವೂ ಬ್ರಹ್ಮವೆಂದು ತಿಳಿದು ಬ್ರಹ್ಮಸ್ವರೂಪನೇ ಆಗಿರುವ ಈ ಯೋಗಿಗೆ ಪರಮಾನಂದವು

ಪ್ರಾಪ್ತವಾಗುವುದು.

**ಯುಂಜನ್ನೇವಂ ಸದಾತ್ಮಾನಂ ಯೋಗೀ ವಿಗತಕಲ್ಮಷಃ ।**
**ಸುಖೇನ ಬ್ರಹ್ಮಸಂಸ್ಪರ್ಶಮತ್ಯಂತಂ ಸುಖಮಶ್ನುತೇ ॥ ೨೮**

ಹೀಗೆ ಸರ್ವದಾ ಯೋಗಾಭ್ಯಾಸದಲ್ಲಿ ತೊಡಗಿರುವ ಯೋಗಿಯು ಪಾಪರಹಿತನಾಗಿ, ಬ್ರಹ್ಮಸಂಸ್ಪರ್ಶವೆಂಬ ಪರಮಸುಖವನ್ನು ಅನಾಯಾಸವಾಗಿ ಪಡೆಯುತ್ತಾನೆ.

**ವಿವರಣೆ :** ಬ್ರಹ್ಮವೇ ತಾನೆಂದು ತಿಳಿದುಕೊಳ್ಳುವುದೇ ಬ್ರಹ್ಮಸಂಸ್ಪರ್ಶ. ಇಲ್ಲಿ ಕೈಯಿಂದ ಸ್ಪರ್ಶಿಸುವುದೇನೂ ಇಲ್ಲ. ಆದ್ದರಿಂದಲೇ ಇದಕ್ಕೆ **ಅಸ್ಪರ್ಶ ಯೋಗ**ವೆಂದೂ ಹೆಸರಿದೆ.

**ಸರ್ವಭೂತಸ್ಥಮಾತ್ಮಾನಂ ಸರ್ವಭೂತಾನಿ ಚಾತ್ಮನಿ ।**
**ಈಕ್ಷತೇ ಯೋಗಯುಕ್ತಾತ್ಮಾ ಸರ್ವತ್ರ ಸಮದರ್ಶನಃ ॥ ೨೯**

ಸ್ಥಾವರಾದಿ ಸಮಸ್ತಭೂತಗಳಲ್ಲಿಯೂ ಸಮವನ್ನು–ಎಂದರೆ–ನಿರ್ವಿಶೇಷವಾದ ಬ್ರಹ್ಮವನ್ನು ಕಂಡಿರತಕ್ಕ ಯೋಗಯುಕ್ತಾತ್ಮನು, ಸರ್ವಪ್ರಾಣಿಗಳಲ್ಲಿಯೂ ಆತ್ಮನಿದ್ದಾನೆಂಬುದನ್ನೂ ಸರ್ವಪ್ರಾಣಿಗಳೂ (ತನ್ನ) ಆತ್ಮನಲ್ಲಿ ನೆಲೆಸಿವೆಯೆಂಬುದನ್ನು ಸ್ಪಷ್ಟವಾಗಿ ಕಂಡುಕೊಳ್ಳುತ್ತಾನೆ. (ಒಬ್ಬ ಆತ್ಮನಲ್ಲದೆ ಇನ್ನೊಂದಿಲ್ಲ – ಎಂದು ಅಭಿಪ್ರಾಯ)

**ವಿವರಣೆ :** ಯೋಗಯುಕ್ತಾತ್ಮಾ = ಯಾರ ಆತ್ಮವು (ಅಂತಃಕರಣವು) ಸಮಾಧಿಸ್ಥವಾಗಿರುವುದೋ ಅವನು.

**ಯೋ ಮಾಂ ಪಶ್ಯತಿ ಸರ್ವತ್ರ ಸರ್ವಂ ಚ ಮಯಿ ಪಶ್ಯತಿ ।**
**ತಸ್ಯಾಹಂ ನ ಪ್ರಣಶ್ಯಾಮಿ ಸ ಚ ಮೇ ನ ಪ್ರಣಶ್ಯತಿ ॥ ೩೦**

ಯಾವನು ನನ್ನನ್ನು (ಸರ್ವಾತ್ಮನಾದ ವಾಸುದೇವನನ್ನು) ಎಲ್ಲೆಲ್ಲಿಯೂ ಕಾಣುವನೋ ಸರ್ವವೂ (ಸರ್ವಾತ್ಮನಾದ) ನನ್ನಲ್ಲಿದೆಯೆಂದು ಕಾಣುವನೋ ಆ ಜ್ಞಾನಿಗೆ ನಾನು ಕಾಣದ ಪರೋಕ್ಷನಾಗಿರುವುದಿಲ್ಲ. ಅವನೂ ನನಗೆ ಕಾಣದೆ ಹೋಗುವುದಿಲ್ಲ.

**ವಿವರಣೆ :** ಜ್ಞಾನಿಯ ಆತ್ಮವೇ ನಾನು. ಆತ್ಮನು ಸ್ವಪ್ರಕಾಶನಾದ್ದರಿಂದ ತನಗೆ ತಾನು ಸದಾ ಪ್ರತ್ಯಕ್ಷನೇ ಆಗಿರುತ್ತಾನೆ. 'ನಶ್' ಧಾತುವಿಗೆ ಅದರ್ಶನವೆಂದರ್ಥ. ಣಶ – ಅದರ್ಶನೇ (ಪಾಣಿನೀಯಧಾತುಪಾಠ).

**ಸರ್ವಭೂತಸ್ಥಿತಂ ಯೋ ಮಾಂ ಭಜತ್ಯೇಕತ್ವಮಾಸ್ಥಿತಃ ।**
**ಸರ್ವಥಾ ವರ್ತಮಾನೋಽಪಿ ಸ ಯೋಗೀ ಮಯಿ ವರ್ತತೇ ॥ ೩೧**

ಸರ್ವಭೂತಗಳಲ್ಲಿಯೂ ನೆಲೆಸಿರುವ ನನ್ನನ್ನು, ಯಾವ ಯೋಗಿಯು (ತಾನೂ ನಾನೂ ಒಂದೇ ಎಂಬ) ಏಕತ್ವವನ್ನು ನಿಶ್ಚಯಿಸಿ ಭಜಿಸುತ್ತಾನೋ ಆತನು ಯಾವ ಪ್ರಕಾರದಲ್ಲಿದ್ದರೂ, ನನ್ನಲ್ಲಿ – ಪರಮಪದದಲ್ಲಿ ಇರುತ್ತಾನೆ.

**ವಿವರಣೆ :** ಆ ಯೋಗಿಯು ನಿತ್ಯಮುಕ್ತನೇ. ಅವನ ದೇಹಯಾತ್ರೆ ಹೇಗಿದ್ದರೂ ಅಡ್ಡಿಯಿಲ್ಲ.

**ಆತ್ಮೌಪಮ್ಯೇನ ಸರ್ವತ್ರ ಸಮಂ ಪಶ್ಯತಿ ಯೋಽರ್ಜುನ ।**
**ಸುಖಂ ವಾ ಯದಿ ವಾ ದುಃಖಂ ಸ ಯೋಗೀ ಪರಮೋ ಮತಃ ॥ ೩೨**

ಅರ್ಜುನ, ಯಾವಾತನು ತನ್ನ ಹೋಲಿಕೆಯಿಂದ ಸರ್ವಪ್ರಾಣಿಗಳಲ್ಲಿಯೂ ಸುಖವನ್ನಾಗಲಿ ದುಃಖವನ್ನಾಗಲಿ ತನಗೆ ಸಮಾನವಾದದ್ದೆಂದು ತಿಳಿಯುವನೋ ಅವನು ಪರಮಯೋಗಿಯೆಂದು ನನ್ನ ಮತವಿದೆ.

**ವಿವರಣೆ :** ಎಲ್ಲರ ಆತ್ಮನೂ ತಾನೇ ಎಂಬ ಜ್ಞಾನವಿರುವುದರಿಂದ ಯಾರಿಗೂ ಹಿಂಸೆಯನ್ನು ಯೋಗಿಯು ಎಂದಿಗೂ ಮಾಡುವುದಿಲ್ಲ. ಅನ್ಯರ ದುಃಖವು ತನ್ನ ದುಃಖವೆಂದೇ ತಿಳಿಯುತ್ತಾನೆ.

**ಅರ್ಜುನ ಉವಾಚ –**

**ಯೋಽಯಂ ಯೋಗಸ್ತ್ವಯಾ ಪ್ರೋಕ್ತಃ ಸಾಮ್ಯೇನ ಮಧುಸೂದನ ।**
**ಏತಸ್ಯಾಹಂ ನ ಪಶ್ಯಾಮಿ ಚಂಚಲತ್ವಾತ್ ಸ್ಥಿತಿಂ ಸ್ಥಿರಾಮ್ ॥ ೩೩**

**ಅರ್ಜುನನು ಇಂತೆಂದನು –** ಮಧುಸೂದನ, ಸಮತ್ವದಿಂದ ಕೂಡಿದ (ಸಮದರ್ಶನ) ಯೋಗವೆಂಬುದನ್ನು ಹೇಳಿದೆಯಲ್ಲ, ಈ ಯೋಗದಲ್ಲಿ ಸ್ಥಿರವಾದ ಸ್ಥಿತಿ ಹೇಗೆಂಬುದನ್ನು ನಾನು ಕಾಣದೆ ಹೋಗಿದ್ದೇನೆ. ಏಕೆಂದರೆ, ಮನಸ್ಸು ಬಹು ಚಂಚಲವಾದದ್ದು.

**ಚಂಚಲಂ ಹಿ ಮನಃ ಕೃಷ್ಣ ಪ್ರಮಾಥಿ ಬಲವದ್ ದೃಢಮ್ ।**
**ತಸ್ಯಾಹಂ ನಿಗ್ರಹಂ ಮನ್ಯೇ ವಾಯೋರಿವ ಸುದುಷ್ಕರಮ್ ॥ ೩೪**

ಶ್ರೀಕೃಷ್ಣ, ಮನಸ್ಸೆಂಬುದು ಚಂಚಲವಲ್ಲವೆ? ಅದು ಮನುಷ್ಯನನ್ನು ಕಡೆದುಹಾಕುವಂತಹದು. ಬಲಶಾಲಿಯೂ ದೃಢವೂ ಆಗಿದೆ. ಅದನ್ನು ನಿಗ್ರಹಿಸುವುದೆಂದರೆ, ಗಾಳಿಯನ್ನು ಕಟ್ಟಿಹಾಕುವಂತೆ, ದುಷ್ಕರವೆಂದು ನನಗೆ

ತೋರುತ್ತದೆ.

**ಶ್ರೀಭಗವಾನುವಾಚ –**

**ಅಸಂಶಯಂ ಮಹಾಬಾಹೋ ಮನೋ ದುರ್ನಿಗ್ರಹಂ ಚಲಮ್ ।**
**ಅಭ್ಯಾಸೇನ ತು ಕೌಂತೇಯ ವೈರಾಗ್ಯೇಣ ಚ ಗೃಹ್ಯತೇ ॥ ೩೫**

**ಭಗವಂತನು ಹೇಳಿದನು –** ಮಹಾಬಾಹು–ಅರ್ಜುನ, ಚಂಚಲವಾದ ಮನಸ್ಸನ್ನು ನಿಗ್ರಹಿಸಿ ಹಿಡಿಯುವುದು ಬಹು ಕಷ್ಟವಾದದ್ದು. ಸಂದೇಹವೇ ಇಲ್ಲ. ಆದರೆ ಅಭ್ಯಾಸ ಮಾಡುವುದರಿಂದಲೂ ವೈರಾಗ್ಯದಿಂದಲೂ ಅದು ಹಿಡಿತಕ್ಕೆ ಸಿಗುತ್ತದೆ.

**ಅಸಂಯತಾತ್ಮನಾ ಯೋಗೋ ದುಷ್ಪ್ರಾಪ ಇತಿ ಮೇ ಮತಿಃ ।**
**ವಶ್ಯಾತ್ಮನಾ ತು ಯತತಾ ಶಕ್ಯೋಽವಾಪ್ತುಮುಪಾಯತಃ ॥ ೩೬**

(ಅಭ್ಯಾಸ ವೈರಾಗ್ಯಗಳಿಂದ ಸಾಧಿಸಿದ) ಆತ್ಮನಿಗ್ರಹವಿಲ್ಲದವನಿಗೆ ಯೋಗವು ದಕ್ಕುವುದು ಕಷ್ಟವೆಂದು ನನ್ನ ಅಭಿಪ್ರಾಯವಿದೆ. ಆತ್ಮನಿಗ್ರಹವುಳ್ಳವನು ಪ್ರಯತ್ನಿಸುತ್ತಿದ್ದರೆ ಉಪಾಯವಾಗಿ ಅದನ್ನು ದಕ್ಕಿಸಲು ಸಾಧ್ಯವಿದೆ.

**ಅರ್ಜುನ ಉವಾಚ –**

**ಅಯತಿಃ ಶ್ರದ್ಧಯೋಪೇತೋ ಯೋಗಾಚ್ಚಲಿತಮಾನಸಃ ।**
**ಅಪ್ರಾಪ್ಯ ಯೋಗಸಂಸಿದ್ಧಿಂ ಕಾಂ ಗತಿಂ ಕೃಷ್ಣ ಗಚ್ಛತಿ ॥ ೩೭**

**ಅರ್ಜುನನೆಂದನು –** ಶ್ರೀಕೃಷ್ಣ, ಒಬ್ಬನು ಶ್ರದ್ಧಾವಂತನಾಗಿ (ಯೋಗ ಮಾರ್ಗದಲ್ಲಿ) ಇರುತ್ತಾನೆ. ಆದರೆ ಸಾಕಷ್ಟು ಪ್ರಯತ್ನ ಮಾಡಿರುವುದಿಲ್ಲ. (ಮರಣಕಾಲದಲ್ಲಿ) ಮನಸ್ಸು ಯೋಗವನ್ನು ಬಿಟ್ಟು ಚಲಿಸುತ್ತದೆ. ಇತ್ತಲಾಗಿ ಯೋಗಸಿದ್ಧಿಯನ್ನು ಪಡೆದಿರುವುದಿಲ್ಲ. ಅಂಥವನು ಯಾವ ಗತಿಯನ್ನು ಪಡೆಯುತ್ತಾನೆ ?

**ಕಚ್ಚಿನ್ನೋಭಯವಿಭ್ರಷ್ಟಶ್ಛಿನ್ನಾಭ್ರಮಿವ ನಶ್ಯತಿ ।**
**ಅಪ್ರತಿಷ್ಠೋ ಮಹಾಬಾಹೋ ವಿಮೂಢೋ ಬ್ರಹ್ಮಣಃ ಪಥಿ ॥ ೩೮**

ಆತನು ಬ್ರಹ್ಮಪ್ರಾಪ್ತಿಯ ಮಾರ್ಗದಲ್ಲಿ ದಿಕ್ಕು ತೋರದೆ ನಿರಾಶ್ರಯನಾಗಿಬಿಡುತ್ತಾನೆ. ಆ ಸಂದರ್ಭದಲ್ಲಿ ಕರ್ಮಮಾರ್ಗ–ಯೋಗಮಾರ್ಗಗಳೆರಡರಿಂದಲೂ ಭ್ರಷ್ಟನಾಗಿ, ತುಂಡುಮೋಡದಂತೆ, ನಾಶವಾಗಿ ಹೋಗಲಿಕ್ಕಿಲ್ಲವೆ ?

**ಏತನ್ಮೇ ಸಂಶಯಂ ಕೃಷ್ಣ ಛೇತ್ತುಮರ್ಹಸ್ಯಶೇಷತಃ ।**
**ತ್ವದನ್ಯಃ ಸಂಶಯಸ್ಯಾಸ್ಯ ಛೇತ್ತಾ ನ ಹ್ಯುಪಪದ್ಯತೇ ॥ ೩೯**

ಈ ನನ್ನ ಸಂಶಯವನ್ನು, ಶ್ರೀಕೃಷ್ಣ, ನೀನು ಪೂರ್ತಿಯಾಗಿ ಕತ್ತರಿಸಿ ಹಾಕಬೇಕು. ನಿನ್ನನ್ನು ಬಿಟ್ಟರೆ ಈ ಸಂಶಯವನ್ನು ಹೋಗಲಾಡಿಸತಕ್ಕವನು ಇನ್ನೊಬ್ಬನಿಲ್ಲ.

**ಶ್ರೀಭಗವಾನುವಾಚ –**

**ಪಾರ್ಥ ನೈವೇಹ ನಾಮುತ್ರ ವಿನಾಶಸ್ತಸ್ಯ ವಿದ್ಯತೇ ।**
**ನ ಹಿ ಕಲ್ಯಾಣಕೃತ್ ಕಶ್ಚಿತ್ ದುರ್ಗತಿಂ ತಾತ ಗಚ್ಛತಿ ॥ ೪೦**

ಭಗವಂತನು ಹೀಗೆಂದನು – ಪಾರ್ಥ, ಈ ಲೋಕದಲ್ಲಾಗಲಿ ಪರಲೋಕದಲ್ಲಾಗಲಿ ಯೋಗಚ್ಯುತನಾದವನಿಗೆ ವಿನಾಶವೆಂಬುದಿಲ್ಲ. ಅಪ್ಪ–ಅರ್ಜುನ, ಕಲ್ಯಾಣಕಾರ್ಯವನ್ನು ಮಾಡತಕ್ಕವನಾವನೂ ದುರ್ಗತಿಯನ್ನು ಹೊಂದುವುದಿಲ್ಲ.

**ಪ್ರಾಪ್ಯ ಪುಣ್ಯಕೃತಾಂ ಲೋಕಾನುಷಿತ್ವಾ ಶಾಶ್ವತೀಃ ಸಮಾಃ ।**
**ಶುಚೀನಾಂ ಶ್ರೀಮತಾಂ ಗೇಹೇ ಯೋಗಭ್ರಷ್ಟೋಽಭಿಜಾಯತೇ ॥ ೪೧**

ಯೋಗಭ್ರಷ್ಟನಾದವನು ಪುಣ್ಯವಂತರಿಗೆ ಅರ್ಹವಾದ ಲೋಕಗಳನ್ನು ಪಡೆದು, ಅಲ್ಲಿ ಬಹಳ ವರ್ಷಗಳವರೆಗಿದ್ದು, (ಭೋಗಕ್ಷಯವಾದಮೇಲೆ) ಸಚ್ಛೀಲರಾದ ಶ್ರೀಮಂತರ ಮನೆಯಲ್ಲಿ ಹುಟ್ಟುವನು.

**ಅಥವಾ ಯೋಗಿನಾಮೇವ ಕುಲೇ ಭವತಿ ಧೀಮತಾಮ್ ।**
**ಏತದ್ಧಿ ದುರ್ಲಭತರಂ ಲೋಕೇ ಜನ್ಮ ಯದೀದೃಶಮ್ ॥ ೪೨**

ಅಥವಾ ಧೀಮಂತರಾದ ಯೋಗಿಗಳ ಕುಲದಲ್ಲಿಯೇ ಅವನು ಹುಟ್ಟುವನು. ಈ ಪ್ರಕಾರವಾದ (ಯೋಗಿಗಳ ಮನೆಯಲ್ಲಿ ಹುಟ್ಟುವ) ಜನ್ಮವು ಲೋಕದಲ್ಲಿ ಅತಿದುರ್ಲಭವೇ ಸರಿ. (ಹಿಂದಿನ ಜನ್ಮದಲ್ಲಿ ಮಾಡಿದ ಯೋಗವು ಪ್ರಬಲವಾಗಿದ್ದರೆ ಮಾತ್ರ ದೊರಕುತ್ತದೆ.)

**ತತ್ರ ತಂ ಬುದ್ಧಿಸಂಯೋಗಂ ಲಭತೇ ಪೌರ್ವದೇಹಿಕಮ್ ।**
**ಯತತೇ ಚ ತತೋ ಭೂಯಃ ಸಂಸಿದ್ಧೌ ಕುರುನಂದನ ॥ ೪೩**

ಅಲ್ಲಿ ಆತನು ತನ್ನ ಪೂರ್ವದೇಹದಲ್ಲಿ ಸಾಧಿಸಿದ ಬುದ್ಧಿಸಂಸ್ಕಾರವನ್ನು ಪಡೆದುಕೊಳ್ಳುತ್ತಾನೆ. ಅನಂತರ, ಮೊದಲಿಗಿಂತಲೂ ಹೆಚ್ಚಾಗಿ ಯೋಗ

ಸಿದ್ಧಿಯನ್ನು ಪಡೆಯಲು ಯತ್ನಿಸುತ್ತಾನೆ.

**ಪೂರ್ವಾಭ್ಯಾಸೇನ ತೇನೈವ ಹ್ರಿಯತೇ ಹ್ಯವಶೋಽಪಿ ಸಃ ।**
**ಜಿಜ್ಞಾಸುರಪಿ ಯೋಗಸ್ಯ ಶಬ್ದಬ್ರಹ್ಮಾತಿವರ್ತತೇ ॥ ೪೪**

ಹಿಂದಿನ ಜನ್ಮದಲ್ಲಿ ಮಾಡಿದ ಅಭ್ಯಾಸಬಲದಿಂದ ಆ ಯೋಗಭ್ರಷ್ಟನು ತನಗೆ ಇಷ್ಟವಿಲ್ಲದಿದ್ದರೂ ಯೋಗಮಾರ್ಗದ ಕಡೆಗೆ ಸೆಳೆಯಲ್ಪಡುತ್ತಾನೆ. ಯೋಗ ಮಾರ್ಗವನ್ನು ತಿಳಿಯಲಿಚ್ಛಿಸಿದವನೂ ಸಹ ಶಬ್ದಬ್ರಹ್ಮವನ್ನು ಎಂದರೆ ವೇದೋಕ್ತಕರ್ಮಾನುಷ್ಠಾನ ಫಲವನ್ನು ದಾಟಿಹೋಗುತ್ತಾನೆ. (ಇದನ್ನು ತಿಳಿದು ಅನುಷ್ಠಾನ ಮಾಡತಕ್ಕವನ ವಿಷಯವಾಗಿ ಹೇಳತಕ್ಕದ್ದೇನಿದೆ ?)

**ಪ್ರಯತ್ನಾದ್ಯತಮಾನಸ್ತು ಯೋಗೀ ಸಂಶುದ್ಧಕಿಲ್ಬಿಷಃ ।**
**ಅನೇಕಜನ್ಮಸಂಸಿದ್ಧಸ್ತತೋ ಯಾತಿ ಪರಾಂ ಗತಿಮ್ ॥ ೪೫**

ಅನೇಕ ಜನ್ಮಗಳಲ್ಲಿ (ಕೂಡಿಹಾಕಿಕೊಂಡ ಸಂಸ್ಕಾರಗಳಿಂದ) ಸಿದ್ಧನಾಗಿರುವ ಯೋಗಿಯು ಪ್ರಯತ್ನದಿಂದ ಪಟ್ಟುಹಿಡಿದು ಅಭ್ಯಾಸ ಮಾಡಿ, ಹಿಂದಿನ ಕಿಲ್ಬಿಷಗಳೆಲ್ಲವನ್ನೂ ಕಳೆದು ಶುದ್ಧನಾಗಿ, ಪರಮಗತಿಯನ್ನೈದುತ್ತಾನೆ.

**ತಪಸ್ವಿಭ್ಯೋಽಧಿಕೋ ಯೋಗೀ ಜ್ಞಾನಿಭ್ಯೋಽಪಿ ಮತೋಽಧಿಕಃ ।**
**ಕರ್ಮಿಭ್ಯಶ್ಚಾಧಿಕೋ ಯೋಗೀ ತಸ್ಮಾದ್ಯೋಗೀ ಭವಾರ್ಜುನ ॥ ೪೬**

ತಪಸ್ವಿಗಳಿಗಿಂತಲೂ ಯೋಗಿಯು ಹೆಚ್ಚಿನವನು. ಶಾಸ್ತ್ರಾರ್ಥಪಂಡಿತರಿಗಿಂತಲೂ ಅವನು ಹೆಚ್ಚಿನವನೆಂದು ತಿಳಿಯಲ್ಪಟ್ಟಿದ್ದಾನೆ. ಕರ್ಮಿಗಳಿಗಿಂತಲೂ ಯೋಗಿಯು ಅಧಿಕನಾದವನು. ಆದ್ದರಿಂದ, ಅರ್ಜುನ, ನೀನು ಯೋಗಿಯಾಗುವುದಕ್ಕೆ ಯತ್ನಿಸು.

**ವಿವರಣೆ :** ಇಲ್ಲಿ ಹೇಳಿರುವ ಯೋಗಿ ಧ್ಯಾನಯೋಗಿ. ಧ್ಯಾನಯೋಗದಿಂದ ಲಭ್ಯವಾಗತಕ್ಕದ್ದು ಆತ್ಮಜ್ಞಾನ. 'ಯೋಗೀ ಭವ' ಎಂದರೆ 'ಮೊದಲು ಕರ್ಮಯೋಗಿಯಾಗು, ಆಮೇಲೆ ಧ್ಯಾನಯೋಗಿಯಾಗಲು ಪ್ರಯತ್ನಿಸು' ಎಂದರ್ಥ.

**ಯೋಗಿನಾಮಪಿ ಸರ್ವೇಷಾಂ ಮದ್ಗತೇನಾಂತರಾತ್ಮನಾ ।**
**ಶ್ರದ್ಧಾವಾನ್ ಭಜತೇ ಯೋ ಮಾಂ ಸ ಮೇ ಯುಕ್ತತಮೋ ಮತಃ ॥**

**ಇತಿ ಶ್ರೀಮದ್ಭಗವದ್ಗೀತಾಸೂಪನಿಷತ್ಸು ಬ್ರಹ್ಮವಿದ್ಯಾಯಾಂ ಯೋಗಶಾಸ್ತ್ರೇ**
**ಧ್ಯಾನಯೋಗೋನಾಮ ಷಷ್ಠೋಽಧ್ಯಾಯಃ**

(ವಾಸುದೇವನಾದ) ನನ್ನಲ್ಲಿಯೇ ಅಂತರಾತ್ಮವನ್ನಿಟ್ಟು ಶ್ರದ್ಧಾವಂತನಾಗಿ

ಯಾವಾತನು ನನ್ನನ್ನು ಭಜಿಸುತ್ತಾನೋ ಅವನು (ಅನ್ಯದೇವತೆಗಳನ್ನು ಭಜಿಸುವ) ಎಲ್ಲ ಯೋಗಿಗಳಿಗಿಂತಲೂ ಶ್ರೇಷ್ಠನಾದ ಯೋಗಿಯೆಂಬುದು ನನಗೆ ಸಂಮತವಾಗಿದೆ.

**ಇಲ್ಲಿಗೆ ಶ್ರೀಮದ್ಭಗವದ್ಗೀತೆಯಲ್ಲಿ ಧ್ಯಾನಯೋಗವೆಂಬ ಆರನೆಯ ಅಧ್ಯಾಯವು ಸಮಾಪ್ತವಾಯಿತು.**

## ೬ನೆಯ ಅಧ್ಯಾಯದ ಸಾರ

ಶ್ರೀಕೃಷ್ಣನು ಹೀಗೆ ಉಪದೇಶಿಸುತ್ತಾನೆ – ಗಾರ್ಹಪತ್ಯವೇ ಮುಂತಾದ ಅಗ್ನಿಗಳನ್ನು ತ್ಯಜಿಸಿ, ಅಗ್ನಿಯನ್ನು ಬಯಸದ ಇತರ ವಿಹಿತಕರ್ಮಗಳನ್ನು ಬಿಟ್ಟವನು ಮಾತ್ರ ಸಂನ್ಯಾಸಿಯೆಂದೂ ಯೋಗಿಯೆಂದೂ ತಿಳಿಯಬಾರದು. ಜ್ಞಾನ ವೈರಾಗ್ಯಗಳಿಲ್ಲದೆ ಬರಿಯ ಸಂನ್ಯಾಸಾಶ್ರಮವನ್ನು ಸ್ವೀಕರಿಸುವುದಕ್ಕಿಂತ ವಿಹಿತ ಕರ್ಮಗಳನ್ನು ತಪ್ಪದೆ ಮಾಡುತ್ತ ಕರ್ಮಫಲವನ್ನು ಮಾತ್ರ ಪರಿತ್ಯಜಿಸಿ ಈಶ್ವರಾರ್ಪಣಬುದ್ಧಿಯಿಂದ ಕರ್ಮವನ್ನು ಮಾಡುತ್ತಿರುವುದು ಉತ್ತಮ ಮಾರ್ಗ. ಇವನೇ ಕರ್ಮಯೋಗಿ. ಫಲಾಭಿಲಾಷೆಯನ್ನು ತ್ಯಜಿಸಿದ್ದರಿಂದ ಈತನೇ ಸಂನ್ಯಾಸಿಯೆಂದು ಹೇಳುವುದೂ ಯುಕ್ತವಾಗಿದೆ. ಜ್ಞಾನನಿಷ್ಠೆಗೆ ಧ್ಯಾನ ಯೋಗವು ಹತ್ತಿರದ ಸಾಧನ. ಧ್ಯಾನಯೋಗಕ್ಕೆ ಬೇಕಾದಯೋಗ್ಯತೆಯನ್ನು ಗಳಿಸಿ ಕೊಳ್ಳುವುದಕ್ಕೆ ಕರ್ಮವೇ ಸಾಧನವಾಗಿರುತ್ತದೆ. ಧ್ಯಾನಯೋಗಕ್ಕೆ ಅರ್ಹತೆಯು ಬಂದಮೇಲೆ ಯೋಗಾರೂಢನಾಗುವುದಕ್ಕೆ ಕರ್ಮಸಂನ್ಯಾಸವು ಆವಶ್ಯಕ.

ವಿವೇಕಶಾಲಿಯು ಧ್ಯಾನಯೋಗವನ್ನು ಅಭ್ಯಾಸಮಾಡಿ ಯೋಗಾರೂಢನಾಗಿ ಸಂಸಾರದ ಕೋಟಲೆಗಳಿಂದ ತನ್ನನ್ನು ಉದ್ಧಾರ ಮಾಡಿಕೊಳ್ಳಬೇಕು. ಇದಕ್ಕೆ ತಾನೇ ಪ್ರಯತ್ನಿಸಬೇಕಾಗುತ್ತದೆ. ಇಲ್ಲದಿದ್ದರೆ ತನ್ನನ್ನೇ ಅಧೋಗತಿಗೆ ತಳ್ಳಿ ಕೊಂಡಂತಾಗುತ್ತದೆ. ದೇಹೇಂದ್ರಿಯಗಳನ್ನು ತನ್ನ ವಶದಲ್ಲಿಟ್ಟುಕೊಂಡು ಚಿತ್ತ ಶಾಂತಿಯನ್ನು ಗಳಿಸಿ ಸಮಸ್ತ ವಸ್ತುಗಳಲ್ಲಿಯೂ ಸಮಬುದ್ಧಿಯುಳ್ಳವನು ಯೋಗಾರೂಢನೆನಿಸುತ್ತಾನೆ. ಇಂತಹ ಧ್ಯಾನಯೋಗವನ್ನು ಅಭ್ಯಾಸಮಾಡಲು ಶುಚಿಯಾದ ಏಕಾಂತಸ್ಥಳವು ಆವಶ್ಯಕ. ಹಿತಮಿತವಾದ ಆಸನದಲ್ಲಿ ಕುಳಿತು ಪರಮಾತ್ಮನ ಧ್ಯಾನದಲ್ಲಿ ನಿರತನಾಗಿರಬೇಕು. ಈ ಸಾಧಕನು ಆಹಾರ ವಿಹಾರಗಳಲ್ಲಿಯೂ ಎಚ್ಚರ ನಿದ್ರೆಗಳಲ್ಲಿಯೂ ಹಿತಕರವಾದ ನಿಯಮವನ್ನು ಪಾಲಿಸುತ್ತಿರಬೇಕು.

ಯೋಗನಿರತನ ಚಿತ್ತವು ಆತ್ಮನಲ್ಲಿ ನಿಂತುಬಿಡುತ್ತದೆ. ಆತ್ಮಾನಂದವನ್ನು ಅನುಭವಿಸುವ ಆತನು ಆತ್ಮತತ್ತ್ವವನ್ನು ಬಿಟ್ಟು ಇನ್ನೊಂದನ್ನು ಬಯಸುವುದಿಲ್ಲ. ಅದಕ್ಕಿಂತ ಹೆಚ್ಚಿನ ಲಾಭವು ಇನ್ನೊಂದಿಲ್ಲವೆಂದು ತಿಳಿದಿರುತ್ತಾನೆ. ಅಭ್ಯಾಸ ದಿಂದಲೂ ವೈರಾಗ್ಯದಿಂದಲೂ ಮನಸ್ಸನ್ನು ಜಗ್ಗಿ ಒಂದೇ ಕಡೆ ಆತ್ಮದಲ್ಲಿ ನಿಲ್ಲಿಸಬೇಕು. ಅದು ಅತ್ತಿತ್ತ ಚಲಿಸಲು ಬಿಡಬಾರದು. ಆರಂಭದಲ್ಲಿ ಇದು ಕಷ್ಟಕರವಾಗಿ ಕಾಣುತ್ತದೆ. ಏಕೆಂದರೆ ಮನಸ್ಸು ತುಂಬ ಚಂಚಲ ಸ್ವಭಾವ ವುಳ್ಳದ್ದು. ಅದನ್ನು ನಿಗ್ರಹಿಸುವುದು ಕಷ್ಟ. ಸತತಪ್ರಯತ್ನದಿಂದ ಅದನ್ನು ಏಕಾಗ್ರವಾಗಿ ನಿಲ್ಲಿಸಲು ಸಾಧ್ಯವಾಗುತ್ತದೆ.

ಧ್ಯಾನಯೋಗವು ಸಿದ್ಧಿಸಿದರೆ ಅವನು ಮುಕ್ತನಾಗುವುದು ದೂರವಿಲ್ಲ. "ಬ್ರಹ್ಮಾದಿಸ್ತಂಬಪರ್ಯಂತವಾದ ಸಕಲ ಪ್ರಾಣಿಗಳಲ್ಲಿಯೂ ಒಬ್ಬ ಪರಮಾತ್ಮನೇ ಇದ್ದಾನೆ. ಅವನೇ ನಾನು" ಎಂಬ ಸಮ್ಯಗ್ದರ್ಶನವು ಅವನಿಗೆ ಲಭಿಸುವುದು.

ಅರ್ಜುನನಿಗೆ ಇಲ್ಲೊಂದು ಸಂದೇಹ ಹುಟ್ಟುತ್ತದೆ. ಯೋಗಾಭ್ಯಾಸ ಮಾಡುತ್ತಿರುವಾಗ ಸಾಧಕನಿಗೆ ಸಿದ್ಧಿಯು ದೊರೆಯುವುದರೊಳಗೆ ಮರಣವು ಬಂದೊದಗಿದರೆ ಹೇಗೆ ? ಕರ್ಮವನ್ನು ಆತನು ಬಿಟ್ಟಿರುವುದರಿಂದ ಕರ್ಮದ ಫಲವೂ ಇಲ್ಲದೆ, ಯೋಗಸಿದ್ಧಿಯಾಗದೇ ಇರುವುದರಿಂದ ಜ್ಞಾನವೂ ಲಭಿಸದೆ, ಇಕ್ಕಟ್ಟಿನ ಪರಿಸ್ಥಿತಿಯೊದಗೀತು. ಅವನಿಗೆ ಯಾವ ಗತಿ ದೊರಕುತ್ತದೆ ? – ಎಂದು ಅರ್ಜುನನು ಕೇಳಿದಾಗ ಭಗವಂತನು ಹೇಳಿದ್ದೇನೆಂದರೆ – ಆ ಸಾಧಕನಿಗೆ ಪುಣ್ಯಕರ್ಮಗಳನ್ನು ಮಾಡಿದವನಿಗೆ ಲಭಿಸುವ ಉತ್ತಮ ಗತಿಯಾಗುತ್ತದೆ. ಅವನು ಪುಣ್ಯಲೋಕಗಳಲ್ಲಿ ಬಹುಕಾಲ ಸುಖದಿಂದಿದ್ದು ಮತ್ತೆ ಶ್ರೀಮಂತರ ವಂಶದಲ್ಲಿಯೇ ಜನ್ಮವನ್ನು ತಳೆದು ಸುಖವನ್ನನುಭವಿಸುವನು. ಯೋಗ ಸಂಸ್ಕಾರವೇ ತೀವ್ರವಾಗಿದ್ದರೆ ಮತ್ತೆ ಯೋಗಿಗಳ ವಂಶದಲ್ಲಿಯೇ ಜನ್ಮವನ್ನು ತಳೆದು, ಪೂರ್ವಸಂಸ್ಕಾರದ ಬಲದಿಂದ ಮತ್ತೆ ಯೋಗಮಾರ್ಗದಲ್ಲಿಯೇ ತೊಡಗುತ್ತಾನೆ. ಒಳ್ಳೆಯ ಕಾರ್ಯವನ್ನು ಮಾಡತಕ್ಕವನಿಗೆ ಎಂದಿಗೂ ದುರ್ಗತಿ ಇಲ್ಲ. ಅವನು ಮಾಡಿದ ಪುಣ್ಯವು ನಾಶವಾಗದೆ ಫಲವನ್ನು ಕೊಟ್ಟೇತೀರುತ್ತದೆ.

ಯೋಗಿಯು ತಪಸ್ವಿಗಳಿಗಿಂತಲೂ ಶಾಸ್ತ್ರಪಾರಂಗತರಿಗಿಂತಲೂ ಕರ್ಮ ನಿಷ್ಠರಿಗಿಂತಲೂ ಹೆಚ್ಚಿನವನು. ಆದ್ದರಿಂದ, ಅರ್ಜುನ, ನೀನು ಯೋಗಿ ಯಾಗುವುದಕ್ಕೆ ಪ್ರಯತ್ನಿಸು. (ಇಲ್ಲಿ ಕರ್ಮಯೋಗಿ, ಧ್ಯಾನಯೋಗಿ – ಇವೆರಡೂ ವಿವಕ್ಷಿತ). ಯೋಗಿಗಳಲ್ಲಿ ಯಾವನು ನನ್ನನ್ನೇ ಶ್ರದ್ಧೆಯಿಂದ ಭಜಿಸುತ್ತಾನೋ ಅವನು ಶ್ರೇಷ್ಠನು.

## ಅಧ್ಯಾಯ ೭

# ಜ್ಞಾನವಿಜ್ಞಾನಯೋಗ

ನನ್ನಲ್ಲಿಯೇ ಅಂತರಾತ್ಮವನ್ನಿಟ್ಟು ಭಜಿಸತಕ್ಕವನು ಶ್ರೇಷ್ಠನಾದ ಯೋಗಿಯೆಂದು ಪೂರ್ವಾಧ್ಯಾಯದ ಕಡೆಯಲ್ಲಿ ಹೇಳಿದೆ. 'ನನ್ನ ತತ್ತ್ವವೆಂದರೆ ಇದು, ನನ್ನಲ್ಲಿ ಅಂತರಾತ್ಮವನ್ನಿಡುವುದೆಂದರೆ ಹೀಗೆ' ಎಂಬುದನ್ನು ತಿಳಿಸುವುದಕ್ಕಾಗಿ ಶ್ರೀ ಕೃಷ್ಣನು ತೊಡಗಿದ್ದಾನೆ.

**ಶ್ರೀಭಗವಾನುವಾಚ –**

**ಮಯ್ಯಾಸಕ್ತಮನಾಃ ಪಾರ್ಥ ಯೋಗಂ ಯುಂಜನ್ಮದಾಶ್ರಯಃ ।**
**ಅಸಂಶಯಂ ಸಮಗ್ರಂ ಮಾಂ ಯಥಾ ಜ್ಞಾಸ್ಯಸಿ ತಚ್ಛೃಣು ॥ ೧**

**ಭಗವಂತನು ಹೀಗೆಂದನು –** ಅರ್ಜುನ, ನನ್ನಲ್ಲಿಯೇ ಆಸಕ್ತಚಿತ್ತನಾಗಿ ನನ್ನನ್ನೇ ಆಶ್ರಯವೆಂದು ತಿಳಿದು ಯೋಗಾಭ್ಯಾಸ ಮಾಡುತ್ತಿದ್ದರೆ, ನೀನು ನನ್ನ ಸಮಗ್ರಸ್ವರೂಪವನ್ನು ನಿಃಸಂಶಯವಾಗಿ ಹೇಗೆ ತಿಳಿದುಕೊಳ್ಳಬಹುದೋ ಅದನ್ನು ಹೇಳುತ್ತೇನೆ, ಕೇಳು.

**ವಿವರಣೆ :** ಮದಾಶ್ರಯಃ = ನಾನೇ ಸಾಧನವೆಂದೂ ಫಲವೆಂದೂ ನನ್ನನ್ನು ಆಶ್ರಯಿಸಿದವನು. ಸಮಗ್ರಂ = ಸಗುಣನಿರ್ಗುಣರೂಪಗಳೆರಡನ್ನೂ.

**ಜ್ಞಾನಂ ತೇಽಹಂ ಸವಿಜ್ಞಾನಮಿದಂ ವಕ್ಷ್ಯಾಮ್ಯಶೇಷತಃ ।**
**ಯಜ್ಜ್ಞಾತ್ವಾ ನೇಹ ಭೂಯೋಽನ್ಯತ್ ಜ್ಞಾತವ್ಯಮವಶಿಷ್ಯತೇ ॥ ೨**

ನಾನು ನಿನಗೆ ವಿಜ್ಞಾನ (ಸ್ವಾನುಭವ) ಸಹಿತವಾದ ಜ್ಞಾನವನ್ನು ಪೂರ್ತಿಯಾಗಿ ತಿಳಿಸಿಕೊಡುವೆನು. ಅದನ್ನು ತಿಳಿದಮೇಲೆ ಈ ಲೋಕದಲ್ಲಿ ಮತ್ತೆ ತಿಳಿಯಬೇಕಾದದ್ದು ಏನೂ ಉಳಿಯುವುದಿಲ್ಲ.

**ಮನುಷ್ಯಾಣಾಂ ಸಹಸ್ರೇಷು ಕಶ್ಚಿದ್ಯತತಿ ಸಿದ್ಧಯೇ ।**
**ಯತತಾಮಪಿ ಸಿದ್ಧಾನಾಂ ಕಶ್ಚಿನ್ಮಾಂ ವೇತ್ತಿ ತತ್ತ್ವತಃ ॥ ೩**

ಎಷ್ಟೋ ಸಾವಿರ ಜನರಲ್ಲಿ ಯಾವನೋ ಒಬ್ಬನು ಸಿದ್ಧಿಯನ್ನು ಪಡೆಯುವುದಕ್ಕಾಗಿ ಪ್ರಯತ್ನಿಸುತ್ತಾನೆ. ಹಾಗೆ ಪ್ರಯತ್ನಿಸುತ್ತಿರುವ ಸಿದ್ಧರಲ್ಲಿ ಯಾವನೋ ಒಬ್ಬನು ನನ್ನನ್ನು ಸರಿಯಾಗಿ ಅರಿತುಕೊಳ್ಳುತ್ತಾನೆ.

**ಭೂಮಿರಾಪೋऽನಲೋ ವಾಯುಃ ಖಂ ಮನೋ ಬುದ್ಧಿರೇವ ಚ ।**
**ಅಹಂಕಾರ ಇತೀಯಂ ಮೇ ಭಿನ್ನಾ ಪ್ರಕೃತಿರಷ್ಟಧಾ ॥ ೪**

ಪೃಥ್ವಿ, ಅಪ್ (ಜಲ), ಅಗ್ನಿ, ವಾಯು, ಆಕಾಶ – ಈ ಪಂಚಭೂತಗಳ ಸೂಕ್ಷ್ಮತನ್ಮಾತ್ರೆಗಳು ಐದು, ಮನಃಕಾರಣವಾದ ಅಹಂಕಾರ, (ಅಹಂಕಾರಕ್ಕೆ ಕಾರಣವಾದ) ಬುದ್ಧಿಯೆಂಬ ಮಹತ್ತತ್ತ್ವ ಅಹಂಕಾರವೆಂಬ ಅವಿದ್ಯೆಯಿಂದ ಕೂಡಿದ ಅವ್ಯಕ್ತ – ಹೀಗೆ ನನ್ನ ಪ್ರಕೃತಿಯು ಎಂದರೆ ಮಾಯಾಶಕ್ತಿಯು ಎಂಟು ವಿಧವಾಗಿದೆ.

ವಿವರಣೆ : ಸಾಂಖ್ಯಮತದಲ್ಲಿ ಅವ್ಯಕ್ತ (ಮೂಲಪ್ರಕೃತಿ), ಮಹತ್ (ಬುದ್ಧಿ), ಅಹಂಕಾರ, ಪಂಚತನ್ಮಾತ್ರೆಗಳನ್ನು ಪ್ರಕೃತಿಗಳೆಂದು ವಿಂಗಡಿಸಿದ್ದಾರೆ. ವೇದಾಂತವು ಅದನ್ನು ಒಪ್ಪುವುದರಿಂದ ಮೇಲ್ಕಂಡಂತೆ ಕೆಲವು ಶಬ್ದಗಳಿಗೆ ಲಕ್ಷಣಾವೃತ್ತಿಯಿಂದ ಅರ್ಥವನ್ನು ಹೇಳಬೇಕಾಗಿದೆ. ತನ್ಮಾತ್ರೆಗಳು = ಪೃಥಿವೀ ಮುಂತಾದ ಸ್ಥೂಲಭೂತಗಳಿಗೆ ಕಾರಣವಾದ ಸೂಕ್ಷ್ಮಭೂತಗಳು. ತನ್ಮಾತ್ರೆಗಳು ಪರಸ್ಪರ ಸಂಮಿಶ್ರವಾದರೆ ಸ್ಥೂಲಭೂತಗಳು ಹುಟ್ಟುತ್ತವೆ. ಈ ಸಂಮಿಶ್ರಣಕ್ಕೆ ಪಂಚೀಕರಣವೆಂದು ಹೆಸರು. ಸ್ಥೂಲಭೂತವು ಪ್ರಕೃತಿಯಲ್ಲ.

**ಅಪರೇಯಮಿತಸ್ತ್ವನ್ಯಾಂ ಪ್ರಕೃತಿಂ ವಿದ್ಧಿ ಮೇ ಪರಾಮ್ ।**
**ಜೀವಭೂತಾಂ ಮಹಾಬಾಹೋ ಯಯೇದಂ ಧಾರ್ಯತೇ ಜಗತ್ ॥ ೫**

ಮಹಾಬಾಹು – ಅರ್ಜುನ, ಈ ಎಂಟು ವಿಧವಾದದ್ದು ಅಪರಾ (ಕೀಳು) ಪ್ರಕೃತಿ. ಇದಲ್ಲದೆ ನನ್ನ ಪರಾ (ಉತ್ತಮ) ಪ್ರಕೃತಿಯೊಂದಿದೆ. ಅದನ್ನು ತಿಳಿದುಕೊ. ಅದು 'ಜೀವ' ಎನಿಸಿಕೊಂಡು ಈ ಜಗತ್ತನ್ನೇ ಧರಿಸಿದೆ:

ವಿವರಣೆ : ಜೀವಶಬ್ದಕ್ಕೆ 'ಪ್ರಾಣವನ್ನು ಹಿಡಿದು ಧರಿಸತಕ್ಕವನೆಂ'ದರ್ಥ. ಜೀವ – ಪ್ರಾಣಧಾರಣೇ ಎಂಬುದು ಧಾತು. ದೇಹದಲ್ಲಿರುವ ಈ ಜೀವನೇ ಕ್ಷೇತ್ರಜ್ಞ.

**ಏತದ್ಯೋನೀನಿ ಭೂತಾನಿ ಸರ್ವಾಣೀತ್ಯುಪಧಾರಯ ।**
**ಅಹಂ ಕೃತ್ಸ್ನಸ್ಯ ಜಗತಃ ಪ್ರಭವಃ ಪ್ರಲಯಸ್ತಥಾ ॥ ೬**

(ನನ್ನ ಈ ಪರಾ–ಅಪರಾ ಎಂಬ) ಎರಡು ಪ್ರಕೃತಿಗಳಿಂದ ಸಕಲಭೂತಗಳೂ ಆಗಿವೆಯೆಂದು ನಿಶ್ಚಯಿಸು. ಆದ್ದರಿಂದ ನಾನು ಸಮಸ್ತ ಜಗತ್ತಿನ ಉತ್ಪತ್ತಿ ಪ್ರಳಯಗಳಿಗೆ ಕಾರಣನಾಗಿದ್ದೇನೆ.

ವಿವರಣೆ : ಅಪರಾಪ್ರಕೃತಿಯು ಕ್ಷೇತ್ರ. ಪರಾಪ್ರಕೃತಿಯು ಕ್ಷೇತ್ರಜ್ಞ. ಅವೆರಡೂ ಈಶ್ವರನ ಪ್ರಕೃತಿಗಳಾದ್ದರಿಂದ ಸಮಸ್ತಜಗತ್ತಿಗೂ ಈಶ್ವರನೇ ಮೂಲವೆಂದು ಸಿದ್ಧವಾಗುತ್ತದೆ. ಪ್ರಕೃತಿಯು ಈಶ್ವರನಿಗಿಂತ ಭಿನ್ನವಲ್ಲ. ಈಶ್ವರನ ಅವಿದ್ಯಾಕಲ್ಪಿತವಾದ ಅಂಶವೇ ಪ್ರಕೃತಿ.

**ಮತ್ತಃ ಪರತರಂ ನಾನ್ಯತ್ ಕಿಂಚಿದಸ್ತಿ ಧನಂಜಯ ।**
**ಮಯಿ ಸರ್ವಮಿದಂ ಪ್ರೋತಂ ಸೂತ್ರೇ ಮಣಿಗಣಾ ಇವ ॥ ೭**

ಅರ್ಜುನ, ನನಗಿಂತಲೂ ಬೇರೆಯಾದ ಇನ್ನೊಂದು ಹೆಚ್ಚಿನ ಕಾರಣವು ಈ ಜಗತ್ತಿಗೆ ಯಾವುದೂ ಇಲ್ಲ. ದಾರದಲ್ಲಿ ಮಣಿಗಳ ಗುಂಪು ಅನುಸ್ಯೂತವಾಗಿರುವಂತೆ ಸಮಗ್ರವೂ ನನ್ನಲ್ಲಿ ಪೋಣಿಸಲ್ಪಟ್ಟಿದೆ.

ವಿವರಣೆ : ನೂಲುಗಳಲ್ಲಿ ಬಟ್ಟೆ ಇರುವಂತೆ ಜಗತ್ತು ಈಶ್ವರನಲ್ಲಿದೆ.

**ರಸೋಽಹಮಪ್ಸು ಕೌಂತೇಯ ಪ್ರಭಾಸ್ಮಿ ಶಶಿಸೂರ್ಯಯೋಃ ।**
**ಪ್ರಣವಃ ಸರ್ವವೇದೇಷು ಶಬ್ದಃ ಖೇ ಪೌರುಷಂ ನೃಷು ॥ ೮**

ಕೌಂತೇಯ, ಜಲದಲ್ಲಿ (ಸಾರಭೂತವಾದ) ರಸವು ನಾನು. ಅಂತೆಯೇ ಚಂದ್ರಸೂರ್ಯರಲ್ಲಿ ಪ್ರಭೆಯಾಗಿದ್ದೇನೆ. ವೇದಗಳಲ್ಲಿ ಪ್ರಣವ ನಾನು. ಆಕಾಶದಲ್ಲಿ ಶಬ್ದವೂ ಪುರುಷರಲ್ಲಿ ಪೌರುಷವೂ ನಾನೇ.

ವಿವರಣೆ : 'ಮಯಿ ಸರ್ವಮಿದಂ ಪ್ರೋತಂ' ಎಂಬ ಮಾತಿನ ವಿವರಣೆ ಇದು. ರಸವೆಂಬ ಸೂಕ್ಷ್ಮತನ್ಮಾತ್ರೆಯಿಂದ ಜಲವು ಹುಟ್ಟಿದೆ. ರಸವಾದ ನನ್ನಲ್ಲಿ ಜಲವು ಪ್ರೋತವಾಗಿದೆ (ಪೋಣಿಸಲ್ಪಟ್ಟಿದೆ) ಎಂದರ್ಥ. ಹಾಗೆಯೇ ಮುಂದೆಯೂ ತಿಳಿಯಬೇಕು. ಪ್ರಣವರೂಪನಾದ ನನ್ನಲ್ಲಿ ಎಲ್ಲ ವೇದಗಳೂ ಅಡಗಿವೆ. ಪೌರುಷವಿರುವುದರಿಂದ ಇವನು ಪುರುಷನೆಂಬ ಬುದ್ಧಿ ಹುಟ್ಟುತ್ತದೆ. ಪುರುಷತ್ವಧರ್ಮವೇ ನಾನು – ಹೀಗೆ ಯೋಜಿಸಿಕೊಳ್ಳಬೇಕು.

**ಪುಣ್ಯೋ ಗಂಧಃ ಪೃಥಿವ್ಯಾಂ ಚ ತೇಜಶ್ಚಾಸ್ಮಿ ವಿಭಾವಸೌ ।**
**ಜೀವನಂ ಸರ್ವಭೂತೇಷು ತಪಶ್ಚಾಸ್ಮಿ ತಪಸ್ವಿಷು ॥ ೯**

ಪೃಥಿವಿಯಲ್ಲಿ ಪುಣ್ಯಗಂಧವೂ ಅಗ್ನಿಯಲ್ಲಿ ತೇಜಸ್ಸೂ ಆಗಿದ್ದೇನೆ. ಸರ್ವಪ್ರಾಣಿಗಳಲ್ಲಿ ಜೀವನಶಕ್ತಿಯು ನಾನೇ. ತಪಸ್ವಿಗಳಲ್ಲಿ ತಪಸ್ಸು ನಾನು.

ವಿವರಣೆ : ಪೃಥಿವಿಯಲ್ಲಿ ಸಹಜವಾಗಿ ಪುಣ್ಯಗಂಧ(ಸುಗಂಧ)ವಿರುತ್ತದೆ. ಇತರ ಭೂತಗಳ ಸಂಪರ್ಕದಿಂದ ದುರ್ಗಂಧ ಉಂಟಾಗುತ್ತದೆ. ರಸ, ಶಬ್ದ –

ಇತ್ಯಾದಿಗಳಲ್ಲಿಯೂ ಹೀಗೆಯೇ ಶುದ್ಧವಾದ ರಸಾದಿಗಳನ್ನು ಗ್ರಹಿಸಬೇಕು.

**ಬೀಜಂ ಮಾಂ ಸರ್ವಭೂತಾನಾಂ ವಿದ್ಧಿ ಪಾರ್ಥ ಸನಾತನಮ್ ।**
**ಬುದ್ಧಿರ್ಬುದ್ಧಿಮತಾಮಸ್ಮಿ ತೇಜಸ್ತೇಜಸ್ವಿನಾಮಹಮ್ ॥ ೧೦**

ಪಾರ್ಥ, ಸರ್ವಭೂತಗಳಿಗೂ ನಾನು ಸನಾತನವಾದ ಬೀಜವೆಂದು ತಿಳಿ. ಬುದ್ಧಿವಂತರಲ್ಲಿ ಬುದ್ಧಿಯೂ ತೇಜಸ್ವಿಗಳಲ್ಲಿ ತೇಜಸ್ಸೂ ಆಗಿದ್ದೇನೆ.

**ಬಲಂ ಬಲವತಾಂ ಚಾಹಂ ಕಾಮರಾಗವಿವರ್ಜಿತಮ್ ।**
**ಧರ್ಮಾವಿರುದ್ಧೋ ಭೂತೇಷು ಕಾಮೋಽಸ್ಮಿ ಭರತರ್ಷಭ ॥ ೧೧**

ಬಲವಂತರಲ್ಲಿ ನಾನು ಕಾಮರಾಗವರ್ಜಿತವಾದ, (ದೇಹಧಾರಣಕ್ಕೆ ಬೇಕಾದ) ಶಕ್ತಿಯಾಗಿದ್ದೇನೆ. ಪ್ರಾಣಿಗಳಲ್ಲಿ ಧರ್ಮಕ್ಕೆ ವಿರುದ್ಧವಲ್ಲದ ಕಾಮವಾಗಿದ್ದೇನೆ.

ವಿವರಣೆ : (ಕಾಮರಾಗವಿವರ್ಜಿತಂ) ಕಾಮ = ದೊರಕದಿರುವ ವಿಷಯ ಗಳಲ್ಲಿ ಬಯಕೆ. ರಾಗ = ದೊರಕಿದ ವಿಷಯಗಳಲ್ಲಿ ಆಸಕ್ತಿ. (ಕಾಮೋಽಸ್ಮಿ) ಕಾಮ = ದೇಹಧಾರಣಕ್ಕೆ ಬೇಕಾದ ಅನ್ನಪಾನಾದಿಗಳಲ್ಲಿ ಬಯಕೆ.

**ಯೇ ಚೈವ ಸಾತ್ತ್ವಿಕಾ ಭಾವಾ ರಾಜಸಾಸ್ತಾಮಸಾಶ್ಚ ಯೇ ।**
**ಮತ್ತ ಏವೇತಿ ತಾನ್ ವಿದ್ಧಿ ನ ತ್ವಹಂ ತೇಷು ತೇ ಮಯಿ ॥ ೧೨**

ಅಲ್ಲದೆ (ಪ್ರಾಣಿಗಳಿಗೆ ತಮ್ಮ ತಮ್ಮ ಕರ್ಮವಶದಿಂದಾಗುವ) ವಿವೇಕಾದಿ ಸಾತ್ತ್ವಿಕಭಾವಗಳೂ ಲೋಭಾದಿರಾಜಸಭಾವಗಳೂ ಪ್ರಮಾದಾದಿ ತಾಮಸ ಭಾವಗಳೂ ನನ್ನಿಂದಲೇ ಹುಟ್ಟುತ್ತವೆಯೆಂದು ತಿಳಿ. ಆದರೆ ನಾನು ಅವುಗಳ ವಶದಲ್ಲಿಲ್ಲ. ಅವು ನನ್ನ ವಶದಲ್ಲಿವೆ. (ಸಂಸಾರಿಗಳು ಮಾತ್ರ ಆ ಭಾವಗಳಿಗೆ ವಶರಾಗಿರುತ್ತಾರೆ.)

ಟಿಪ್ಪಣಿ : ಸತ್ತ್ವಾದಿಗುಣಗಳ ವಿಷಯವು ೧೪ನೆಯ ಅಧ್ಯಾಯದಲ್ಲಿ ಬಂದಿದೆ.

**ತ್ರಿಭಿರ್ಗುಣಮಯೈರ್ಭಾವೈರೇಭಿಃ ಸರ್ವಮಿದಂ ಜಗತ್ ।**
**ಮೋಹಿತಂ ನಾಭಿಜಾನಾತಿ ಮಾಮೇಭ್ಯಃ ಪರಮವ್ಯಯಮ್ ॥ ೧೩**

ಗುಣಮಯವಾದ ಈ ಸಾತ್ತ್ವಿಕಾದಿಭಾವಗಳಿಂದ (ತಪ್ಪುತಿಳಿವಳಿಕೆಗಳಿಂದ) ಈ ಜಗತ್ತೆಲ್ಲವೂ ಮೋಹಗೊಂಡಿದೆ. ಈ ಭಾವಗಳಿಗೆ ವ್ಯತಿರಿಕ್ತನೂ ವ್ಯಯಗಳೆಂಬ ವಿಕಾರಗಳಿಂದ ರಹಿತನೂ ಆದ ನನ್ನನ್ನು ಈ ಜಗತ್ತು ಗುರುತಿಸದೆ ಹೋಗಿದೆ.

ವಿವರಣೆ: ಜಾಯತೇ, ಅಸ್ತಿ, ವರ್ಧತೇ, ವಿಪರಿಣಮತೇ, ಅಪಕ್ಷೀಯತೇ, ನಶ್ಯತಿ = ಇವು ಆರು ಭಾವವಿಕಾರಗಳು.

**ದೈವೀ ಹ್ಯೇಷಾ ಗುಣಮಯೀ ಮಮ ಮಾಯಾ ದುರತ್ಯಯಾ ।**
**ಮಾಮೇವ ಯೇ ಪ್ರಪದ್ಯಂತೇ ಮಾಯಾಮೇತಾಂ ತರಂತಿ ತೇ ॥ ೧೪**

ಹೀಗೆ ಜಗತ್ತು ಮೋಹಗೊಂಡಿರುವುದು ತ್ರಿಗುಣಾತ್ಮಕವಾದ ನನ್ನ ದೈವೀ ಮಾಯೆಯಾಗಿದೆ. ಇದನ್ನು ದಾಟುವುದು ಬಹುಕಷ್ಟ. ಯಾರು ಶರಣಾಗಿ ನನ್ನನ್ನೇ ಆಶ್ರಯಿಸುತ್ತಾರೋ ಅವರು ಈ ಮಾಯೆಯನ್ನು ದಾಟಬಲ್ಲರು.

**ನ ಮಾಂ ದುಷ್ಕೃತಿನೋ ಮೂಢಾಃ ಪ್ರಪದ್ಯಂತೇ ನರಾಧಮಾಃ ।**
**ಮಾಯಯಾಪಹೃತಜ್ಞಾನಾ ಆಸುರಂ ಭಾವಮಾಶ್ರಿತಾಃ ॥ ೧೫**

ಪಾಪಿಗಳೂ ಮೂಢರೂ ಆದ ನರಾಧಮರು ಪರಮೇಶ್ವರನಾದ ನನ್ನನ್ನು ಶರಣಾಗಿ ಆಶ್ರಯಿಸುವುದಿಲ್ಲ. ಅವರ ವಿವೇಕಜ್ಞಾನವು ಈ ಮಾಯೆಯಿಂದ ತೊಡೆದುಹೋಗಿರುತ್ತದೆ. ಅವರು ಹಿಂಸೆ, ಸುಳ್ಳು–ಮುಂತಾದ ಆಸುರಭಾವ ವನ್ನು ಅವಲಂಬಿಸಿರುತ್ತಾರೆ.

**ಚತುರ್ವಿಧಾ ಭಜಂತೇ ಮಾಂ ಜನಾಃ ಸುಕೃತಿನೋಽರ್ಜುನ ।**
**ಆರ್ತೋ ಜಿಜ್ಞಾಸುರರ್ಥಾರ್ಥೀ ಜ್ಞಾನೀ ಚ ಭರತರ್ಷಭ ॥ ೧೬**

ಅರ್ಜುನ, ಪುಣ್ಯಶಾಲಿಗಳಾದ ನಾಲ್ಕು ಪ್ರಕಾರದ ಜನರು ನನ್ನನ್ನು ಭಜಿಸುತ್ತಾರೆ. ಆರ್ತ (ರೋಗಾದಿಗಳಿಂದ ಪೀಡಿತ), ಜಿಜ್ಞಾಸು (ನನ್ನನ್ನು ತಿಳಿಯಲು ಬಯಸತಕ್ಕವನು), ಅರ್ಥಾರ್ಥಿ (ಧನಕನಕಾದಿ ವಸ್ತುಗಳನ್ನು ಬಯಸತಕ್ಕವನು), ಜ್ಞಾನೀ – ಇವರೇ ಆ ನಾಲ್ಕು ಪ್ರಕಾರದವರು.

**ತೇಷಾಂ ಜ್ಞಾನೀ ನಿತ್ಯಯುಕ್ತ ಏಕಭಕ್ತಿರ್ವಿಶಿಷ್ಯತೇ ।**
**ಪ್ರಿಯೋ ಹಿ ಜ್ಞಾನಿನೋಽತ್ಯರ್ಥಮಹಂ ಸ ಚ ಮಮ ಪ್ರಿಯಃ ॥ ೧೭**

ಆ ನಾಲ್ವರಲ್ಲಿ ಸದಾ ಸಮಾಹಿತಚಿತ್ತನೂ ನಾನೊಬ್ಬನೇ ಭಜನೀಯನೆಂದು ನಂಬಿದವನೂ ಆದ ಜ್ಞಾನಿಯು ಹೆಚ್ಚಿನವನು. ಏಕೆಂದರೆ, ಜ್ಞಾನಿಯಾದವನಿಗೆ ನಾನು ಅತ್ಯಂತ ಪ್ರಿಯನಾಗಿರುತ್ತೇನೆ. ಅವನೂ ನನಗೆ ಅತ್ಯಂತ ಪ್ರಿಯನಾಗಿ ರುತ್ತಾನೆ. (ಏಕೆಂದರೆ, ಜ್ಞಾನಿಯ ಆತ್ಮವೇ ವಾಸುದೇವ. ವಾಸುದೇವನ ಆತ್ಮವೇ ಜ್ಞಾನಿ.)

**ಉದಾರಾಃ ಸರ್ವ ಏವೈತೇ ಜ್ಞಾನೀ ತ್ವಾತ್ಮೈವ ಮೇ ಮತಮ್ ।**
**ಆಸ್ಥಿತಃ ಸ ಹಿ ಯುಕ್ತಾತ್ಮಾ ಮಾಮೇವಾನುತ್ತಮಾಂ ಗತಿಮ್ ॥ ೧೮**

ಇವರೆಲ್ಲರೂ ಉತ್ತಮರೇ (ನನಗೆ ಪ್ರಿಯರೇ ಹೌದು). ಆದರೆ ಜ್ಞಾನಿಯು

ನನ್ನ ಆತ್ಮವೇ ಎಂದು ನನ್ನ ಮತ. ಏಕೆಂದರೆ, ಜ್ಞಾನಿಯು (ನಾನೇ ಭಗವಂತನಾದ ವಾಸುದೇವ, ಬೇರೆಯಲ್ಲ) ಎಂದು ಸಮಾಹಿತಚಿತ್ತನಾಗಿ, ಸರ್ವೋತ್ತಮ ಗತಿಯಾದ ನನ್ನನ್ನೇ ಸೇರಲು ಪ್ರವರ್ತಿಸಿರುತ್ತಾನೆ.

**ಬಹೂನಾಂ ಜನ್ಮನಾಮಂತೇ ಜ್ಞಾನವಾನ್ ಮಾಂ ಪ್ರಪದ್ಯತೇ ।**
**ವಾಸುದೇವಃ ಸರ್ವಮಿತಿ ಸ ಮಹಾತ್ಮಾ ಸುದುರ್ಲಭಃ ॥ ೧೯**

(ಜ್ಞಾನಾರ್ಥವಾಗಿ ಪ್ರಯತ್ನಿಸುವ) ಬಹುಜನ್ಮಗಳ ಕೊನೆಯಲ್ಲಿ 'ವಾಸುದೇವನೇ ಸರ್ವವೂ' ಎಂದು ನಿಶ್ಚಯಿಸಿ ಜ್ಞಾನಿಯಾಗಿ ಆತನು ನನ್ನನ್ನು ಸೇರಿಕೊಳ್ಳುತ್ತಾನೆ. ಅಂಥ ಮಹಾತ್ಮನು ಸಿಗುವುದು ಕಷ್ಟ.

**ಕಾಮೈಸ್ತೈಸ್ತೈರ್ಹೃತಜ್ಞಾನಾಃ ಪ್ರಪದ್ಯಂತೇಽನ್ಯದೇವತಾಃ ।**
**ತಂ ತಂ ನಿಯಮಮಾಸ್ಥಾಯ ಪ್ರಕೃತ್ಯಾ ನಿಯತಾಃ ಸ್ವಯಾ ॥ ೨೦**

ಜನರಾದರೋ ಪುತ್ರಧನಾದಿ ವಿವಿಧ ವಸ್ತುಗಳ ಬಯಕೆಗಳಿಂದ ವಿವೇಕ ಜ್ಞಾನವನ್ನು ಕಳೆದುಕೊಂಡು (ಪ್ರತ್ಯಗಾತ್ಮನಾದ ನನ್ನನ್ನೂ ಬಿಟ್ಟು) ಇತರ ದೇವತೆಗಳಿಗೆ ಶರಣಾಗುತ್ತಾರೆ. (ಜನ್ಮಾಂತರಾರ್ಜಿತ ಸಂಸ್ಕಾರವೆಂಬ) ತಮ್ಮ ಸ್ವಭಾವಕ್ಕೆ ವಶರಾಗಿ ಉಪವಾಸವೇ ಮುಂತಾದ ಬೇರೆ ಬೇರೆ ನಿಯಮಗಳಿಗೆ ಕಟ್ಟುಬೀಳುತ್ತಾರೆ.

**ಯೋ ಯೋ ಯಾಂ ಯಾಂ ತನುಂ ಭಕ್ತಃ ಶ್ರದ್ಧಯಾರ್ಚಿತುಮಿಚ್ಛತಿ ।**
**ತಸ್ಯ ತಸ್ಯಾಚಲಾಂ ಶ್ರದ್ಧಾಂ ತಾಮೇವ ವಿದಧಾಮ್ಯಹಮ್ ॥ ೨೧**

ಅಂತಹ ಯಾವ ಯಾವ ಭಕ್ತನು ಯಾವ ಯಾವ ದೇವತಾಮೂರ್ತಿಯನ್ನು ಶ್ರದ್ಧೆಯಿಂದ ಪೂಜಿಸಲು ಇಚ್ಛಿಸುತ್ತಾನೋ ಅವನಿಗೆ ಅದೇ ಶ್ರದ್ಧೆಯನ್ನು ನಾನು ಸ್ಥಿರವಾಗಿ ನಿಲ್ಲಿಸುತ್ತೇನೆ.

**ವಿವರಣೆ :** ಭಕ್ತನ ಇಷ್ಟವನ್ನು ಪೂರೈಸುವುದು ನನ್ನ ಕರ್ತವ್ಯ. ಭಕ್ತನು ಪುತ್ರ ಧನಾದಿಗಳನ್ನು ಬಯಸತಕ್ಕ ಕಾಮಿಯಾದರೆ ಅದಕ್ಕೆ ಬೇಕಾದ ನೆರವನ್ನು ನೀಡುತ್ತೇನೆ ಎಂದು ಅಭಿಪ್ರಾಯ.

**ಸ ತಯಾ ಶ್ರದ್ಧಯಾ ಯುಕ್ತಸ್ತಸ್ಯಾರಾಧನಮೀಹತೇ ।**
**ಲಭತೇ ಚ ತತಃ ಕಾಮಾನ್ ಮಯೈವ ವಿಹಿತಾನ್ ಹಿ ತಾನ್ ॥ ೨೨**

ಕಾಮಿಯಾದ ಭಕ್ತನು, ನಾನು ಕೊಟ್ಟ ಶ್ರದ್ಧೆಯಿಂದ ಯುಕ್ತನಾಗಿ ಆಯಾ ದೇವತಾಮೂರ್ತಿಯನ್ನು ಆರಾಧಿಸಲು ತೊಡಗುತ್ತಾನೆ. ಆಮೇಲೆ ಆ

ದೇವತಾಮೂರ್ತಿಯಿಂದ ತನಗೆ ಬೇಕಾದ ಕಾಮಿತಾರ್ಥಗಳನ್ನು ಪಡೆದುಕೊಳ್ಳುತ್ತಾನೆ. (ಕರ್ಮಫಲಗಳ ವಿಂಗಡವನ್ನು ಬಲ್ಲ) ಪರಮೇಶ್ವರನಾದ ನಾನೇ ಆ ಕಾಮಿತಾರ್ಥಗಳನ್ನು ಗೊತ್ತುಮಾಡಿದವನು.

**ಅಂತವತ್ತು ಫಲಂ ತೇಷಾಂ ತದ್ಭವತ್ಯಲ್ಪಮೇಧಸಾಮ್ ।**
**ದೇವಾನ್ದೇವಯಜೋ ಯಾಂತಿ ಮದ್ಭಕ್ತಾ ಯಾಂತಿ ಮಾಮಪಿ ॥ ೨೩**

ಅಲ್ಪಪ್ರಜ್ಞರಾದ ಆ ಜನರಿಗೆ ದೊರೆಯುವ ಫಲವು ನಶ್ವರವಾದದ್ದು. ಅನ್ಯದೇವತೆಗಳನ್ನು ಪೂಜಿಸತಕ್ಕವರು ಆ ದೇವತೆಗಳನ್ನು ಸೇರುತ್ತಾರೆ (ಅವರು ಕೊಡುವ ನಶ್ವರವಾದ ಫಲವನ್ನು ಪಡೆಯುತ್ತಾರೆ). ನನ್ನ ಭಕ್ತರು ನನ್ನನ್ನು ಸೇರಿಕೊಳ್ಳುತ್ತಾರೆ (ನಾನು ಕೊಡುವ ಶಾಶ್ವತವಾದ ಮೋಕ್ಷಫಲವನ್ನು ಪಡೆಯುತ್ತಾರೆ).

**ವಿವರಣೆ :** ಪೂಜಿಸುವ ಆಯಾಸವು ಸಮಾನವಾದರೂ ನನ್ನನ್ನು ಪೂಜಿಸದೆ ಲೌಕಿಕಫಲಕ್ಕಾಗಿ ಅನ್ಯದೇವತೆಗಳನ್ನು ಭಜಿಸತಕ್ಕವರು ಬುದ್ಧಿಹೀನರು – ಎಂದು ಅಭಿಪ್ರಾಯ. ಪರಮಾತ್ಮನನ್ನು ಪೂಜಿಸುವುದೇ ಆತ್ಮಯಜನ. ಎಲ್ಲ ಫಲಗಳನ್ನು ನೀಡತಕ್ಕವನೂ ನಾನೇ ಆಗಿರುವಾಗ, ಮೋಕ್ಷಾಪೇಕ್ಷೆಯಿಂದ ನನ್ನನ್ನೇಕೆ ಅರ್ಚಿಸಬಾರದು ? – ಎಂದು ಈ ಪ್ರಕರಣದ ತಾತ್ಪರ್ಯ.

**ಅವ್ಯಕ್ತಂ ವ್ಯಕ್ತಿಮಾಪನ್ನಂ ಮನ್ಯಂತೇ ಮಾಮಬುದ್ಧಯಃ ।**
**ಪರಂ ಭಾವಮಜಾನಂತೋ ಮಮಾವ್ಯಯಮನುತ್ತಮಮ್ ॥ ೨೪**

ನಾನು ಅಪ್ರಕಾಶನಾಗಿದ್ದು (ಕಾಣಿಸದೆ ಇದ್ದು), ಈಗ ಪ್ರಕಾಶನಾಗಿದ್ದೇನೆಂದು ಬುದ್ಧಿಹೀನರಾದವರು ನನ್ನನ್ನು ತಿಳಿದುಕೊಂಡಿದ್ದಾರೆ. ವಿಕಾರರಹಿತವೂ ಅತ್ಯಂತ ಉತ್ಕೃಷ್ಟವೂ ಆದ ನನ್ನ ಪರಸ್ವರೂಪವನ್ನು ಅವರು ತಿಳಿದವರಲ್ಲ.

**ವಿವರಣೆ :** ನಾನು ಎಲ್ಲರಂತೆ ಹೊಸದಾಗಿ ಹುಟ್ಟಿಬಂದವನೆಂದೂ ಸಂಸಾರಿಯೆಂದೂ ಬುದ್ಧಿಹೀನರು ಭಾವಿಸಿದ್ದಾರೆ. ಆದ್ದರಿಂದ ನನ್ನನ್ನು ಇವರು ಭಜಿಸುವುದಿಲ್ಲ – ಎಂದು ಅಭಿಪ್ರಾಯ. ವ್ಯಕ್ತಿ = ಪ್ರಕಾಶ (ಸಂವಾದಿಯಾದ ಅಧ್ಯಾ. ೯–೧೧ನೇ ಶ್ಲೋಕವನ್ನು ನೋಡಿ).

**ನಾಹಂ ಪ್ರಕಾಶಃ ಸರ್ವಸ್ಯ ಯೋಗಮಾಯಾಸಮಾವೃತಃ ।**
**ಮೂಢೋಽಯಂ ನಾಭಿಜಾನಾತಿ ಲೋಕೋ ಮಾಮಜಮವ್ಯಯಮ್ ॥**

ನಾನು ನನ್ನ ಯೋಗಮಾಯೆಯಿಂದ ಆಚ್ಛಾದಿತನಾಗಿರುವುದರಿಂದ, ನಾನು

(ನಿಜಸ್ವರೂಪದಿಂದ) ಎಲ್ಲರಿಗೂ ಪ್ರಕಾಶವಾಗಿ ಗೋಚರಿಸುವುದಿಲ್ಲ. (ಭಕ್ತರಾದ ಕೆಲವರಿಗೆ ಮಾತ್ರ ಗೋಚರಿಸುವೆನು.) ಅಜನೂ ಅವ್ಯಯನೂ ಆದ ನನ್ನನ್ನು ಮೂಢರಾದ ಈ ಜನರು ಅರಿಯರು.

**ವಿವರಣೆ :** ನನಗೆ ಹುಟ್ಟುಸಾವುಗಳಿವೆಯೆಂದು ಈ ಮೂಢರು ತಿಳಿದು ಕೊಂಡಿದ್ದಾರೆ – ಎಂದು ಅಭಿಪ್ರಾಯ.

**ವೇದಾಹಂ ಸಮತೀತಾನಿ ವರ್ತಮಾನಾನಿ ಚಾರ್ಜುನ ।**
**ಭವಿಷ್ಯಾಣಿ ಚ ಭೂತಾನಿ ಮಾಂ ತು ವೇದ ನ ಕಶ್ಚನ ॥ ೨೬**

ಅರ್ಜುನ, ಹಿಂದೆ ಆಗಿ ಹೋಗಿರುವ ಭೂತಗಳನ್ನೂ (ಪ್ರಾಣಿಗಳನ್ನು) ಈಗ ಇರುವ ಮತ್ತು ಮುಂದೆ ಬರುವ ಸಕಲಭೂತಗಳನ್ನೂ ನಾನು ಬಲ್ಲೆನು. ನನ್ನನ್ನು ಮಾತ್ರ ಒಬ್ಬನೂ ಅರಿಯನು.

**ವಿವರಣೆ :** ನನ್ನ ನಿಜಸ್ವರೂಪವನ್ನು ಅರಿಯದ್ದರಿಂದಲೇ ಜನರು ನನ್ನನ್ನು ಭಜಿಸುವುದಿಲ್ಲ. ಕೋಟಿ ಜನರಲ್ಲೊಬ್ಬ ಭಕ್ತನು ನನ್ನನ್ನು ಅರಿತುಕೊಂಡು ಭಜಿಸುತ್ತಾನೆ.

**ಇಚ್ಛಾದ್ವೇಷಸಮುತ್ಥೇನ ದ್ವಂದ್ವಮೋಹೇನ ಭಾರತ ।**
**ಸರ್ವಭೂತಾನಿ ಸಂಮೋಹಂ ಸರ್ಗೇ ಯಾಂತಿ ಪರಂತಪ ॥ ೨೭**

ಪರಂತಪ – ಅರ್ಜುನ, ರಾಗದ್ವೇಷಗಳಿಂದ ಹುಟ್ಟಿದ ಈ ದ್ವಂದ್ವ ಮೂಲಕವಾದ ಮೋಹವೇನುಂಟೋ ಆದರಿಂದ ಸಮಸ್ತ ಪ್ರಾಣಿಗಳೂ ಜನ್ಮಕಾಲದಲ್ಲಿಯೇ ಸಂಮೋಹವನ್ನು ಹೊಂದಿರುತ್ತವೆ.

**ವಿವರಣೆ :** ಈ ಶ್ಲೋಕದಲ್ಲಿ ದ್ವಂದ್ವವೆಂದರೆ ರಾಗದ್ವೇಷಗಳು. ರಾಗದ್ವೇಷ ಗಳೆಂಬ ದ್ವಂದ್ವದಿಂದಾದ ಮೋಹವೆಂದರ್ಥ. ಇದು ಸಂಸ್ಕಾರರೂಪದಲ್ಲಿದ್ದು ಅನಂತರ ವಿಸ್ತೃತವಾಗುತ್ತದೆ. ಮೋಹದ ವಿಸ್ತಾರವೇ ಸಂಮೋಹ. ಮೋಹ = ಚಿತ್ತದ ವಿಕಲತೆ, ಸತ್ಯವನ್ನರಿಯದ ಮನಸ್ಸಿನ ಏರುಪೇರು. 'ಮುಹ – ಚಿತ್ತವೈಕಲ್ಯೇ' ಎಂಬುದು ಧಾತು.

**ಯೇಷಾಂ ತ್ವಂತಗತಂ ಪಾಪಂ ಜನಾನಾಂ ಪುಣ್ಯಕರ್ಮಣಾಮ್ ।**
**ತೇ ದ್ವಂದ್ವಮೋಹನಿರ್ಮುಕ್ತಾ ಭಜಂತೇ ಮಾಂ ದೃಢವ್ರತಾಃ ॥ ೨೮**

ಆದರೆ ಪುಣ್ಯಕರ್ಮಗಳನ್ನು ಮಾಡತಕ್ಕ ಯಾವ ಜನರ ಪಾಪವು ಸಮಾಪ್ತಪ್ರಾಯವಾಗಿರುವುದೋ ಅವರು ದ್ವಂದ್ವಮೋಹದಿಂದ ಬಿಡುಗಡೆ

ಹೊಂದಿ, ದೃಢವ್ರತರಾಗಿ ನನ್ನನ್ನು ಭಜಿಸುತ್ತಾರೆ.

**ವಿವರಣೆ :** ದೃಢವ್ರತಾಃ = ಪರಮಾರ್ಥತತ್ತ್ವ ಹೀಗೆಯೇ, ಬೇರೆಯಿಲ್ಲ ಎಂಬ ನಿಶ್ಚಯದಿಂದ ಸರ್ವಪರಿತ್ಯಾಗವ್ರತದಲ್ಲಿ ಸ್ಥಿರವಾಗಿ ನಿಂತವರು.

**ಜರಾಮರಣಮೋಕ್ಷಾಯ ಮಾಮಾಶ್ರಿತ್ಯ ಯತಂತಿ ಯೇ ।**
**ತೇ ಬ್ರಹ್ಮ ತದ್ವಿದುಃ ಕೃತ್ಸ್ನಮಧ್ಯಾತ್ಮಂ ಕರ್ಮ ಚಾಖಿಲಮ್ ॥ ೨೯**

ಮುಪ್ಪುಸಾವುಗಳ ಬಿಡುಗಡೆಗಾಗಿ ಯಾರು ನನ್ನನ್ನು ಆಶ್ರಯಿಸಿ – ಎಂದರೆ ನನ್ನಲ್ಲಿಯೇ ಚಿತ್ತವನ್ನಿಟ್ಟು ಪ್ರಯತ್ನಿಸುತ್ತಾರೋ ಅವರು ಆ ಪರಬ್ರಹ್ಮವನ್ನು ತಿಳಿಯುವರು. ಪ್ರತ್ಯಗಾತ್ಮಕ್ಕೆ ಸಂಬಂಧಿಸಿದ ಸಮಸ್ತವಿಷಯವನ್ನೂ ತಿಳಿಯುವರು. ಸಮಸ್ತ ಕರ್ಮಸ್ವರೂಪವನ್ನೂ ತಿಳಿಯುವರು.

**ವಿವರಣೆ :** 'ಯಸ್ಮಿನ್ ವಿಜ್ಞಾತೇ ಸರ್ವಮಿದಂ ವಿಜ್ಞಾತಂ ಭವತಿ' ಎಂಬ ಶ್ರುತಿಯಂತೆ ಬ್ರಹ್ಮವನ್ನರಿತವರು ಸರ್ವವನ್ನು ತಿಳಿದವರೇ ಆಗುತ್ತಾರೆ.

**ಸಾಧಿಭೂತಾಧಿದೈವಂ ಮಾಂ ಸಾಧಿಯಜ್ಞಂ ಚ ಯೇ ವಿದುಃ ।**
**ಪ್ರಯಾಣಕಾಲೇಽಪಿ ಚ ಮಾಂ ತೇ ವಿದುರ್ಯುಕ್ತಚೇತಸಃ ॥ ೩೦**

**ಇತಿ ಶ್ರೀಮದ್ಭಗವದ್ಗೀತಾಸೂಪನಿಷತ್ಸು ಬ್ರಹ್ಮವಿದ್ಯಾಯಾಂ ಯೋಗಶಾಸ್ತ್ರೇ**
**ಜ್ಞಾನವಿಜ್ಞಾನಯೋಗೋ ನಾಮ ಸಪ್ತಮೋಽಧ್ಯಾಯಃ**

ಅಧಿಭೂತ, ಅಧಿದೈವ, ಅಧಿಯಜ್ಞಗಳಿಂದ ಸಹಿತನಾದ ನನ್ನನ್ನು ಯಾರು ತಿಳಿದುಕೊಳ್ಳುವರೋ ಅವರು ಪ್ರಯಾಣಕಾಲದಲ್ಲಿಯೂ ಎಂದರೆ ಮರಣಕಾಲದಲ್ಲಿಯೂ ಚಿತ್ತಸಮಾಧಾನವನ್ನು ಹೊಂದಿ ಪರಮೇಶ್ವರನಾದ ನನ್ನನ್ನು ಸ್ಮರಿಸಿಕೊಳ್ಳುವರು.

(ಇದೆಲ್ಲವೂ ಉಪಾಸನಾವಿಷಯ. ಮುಂದಿನ ಅಧ್ಯಾಯದಲ್ಲಿ ಇದು ಸ್ಪಷ್ಟವಾಗುವುದು.)

ಇಲ್ಲಿಗೆ ಶ್ರೀಮದ್ಭಗವದ್ಗೀತೆಯಲ್ಲಿ ಜ್ಞಾನವಿಜ್ಞಾನಯೋಗವೆಂಬ
ಏಳನೆಯ ಅಧ್ಯಾಯವು ಸಮಾಪ್ತವಾಯಿತು.

## ೭ನೆಯ ಅಧ್ಯಾಯದ ಸಾರ

ಶ್ರೀಕೃಷ್ಣನು ಹೇಳಿದ ನುಡಿ – ಅರ್ಜುನ, ನನ್ನನ್ನೇ ಆಶ್ರಯಿಸಿ ನನ್ನನ್ನೇ ಧ್ಯಾನಿಸುತ್ತಿರುವವನು ನನ್ನ ತತ್ತ್ವವನ್ನು ಯಥಾರ್ಥವಾಗಿ ಅನುಭವಕ್ಕೆ ತಂದುಕೊಳ್ಳುವನು. ಇದನ್ನು ತಿಳಿದರೆ ಎಲ್ಲವನ್ನೂ ತಿಳಿದಂತೆಯೇ. ಇದು ಸುಲಭವಾಗಿ ದೊರೆಯತಕ್ಕದ್ದಲ್ಲ. ಪೃಥ್ವೀ – ಮೊದಲಾದವು ಎಂಟು ನನ್ನ ಅಪರಾಪ್ರಕೃತಿಗಳು. ಜೀವನು ನನ್ನ ಪರಾಪ್ರಕೃತಿ – ಎಂದರೆ ಶ್ರೇಷ್ಠವಾದ ಅಂಶ. ಈ ಪ್ರಕೃತಿಗಳ ಮೂಲಕ ಸೃಷ್ಟಿಸ್ಥಿತಿಲಯಗಳಿಗೆ ನಾನು ಕಾರಣನಾಗಿದ್ದೇನೆ. ಪ್ರತಿಯೊಂದು ಪದಾರ್ಥದಲ್ಲಿಯೂ ಸಾರಭೂತವಾದ ವಸ್ತು ನಾನೇ. ಎಲ್ಲವೂ ನನ್ನ ವಿವೃತ್ತರೂಪಗಳೇ.

ತ್ರಿಗುಣಾತ್ಮಕವಾದ ಮಾಯೆಯು ಪ್ರಾಣಿಗಳನ್ನು ಆವರಿಸಿಕೊಂಡಿರುವುದರಿಂದ ನನ್ನ ನಿಜಸ್ವರೂಪವು ಅವರಿಗೆ ತಿಳಿಯುವುದಿಲ್ಲ. ನನಗೆ ಶರಣಾದವರು ಸುಲಭವಾಗಿ ಈ ಮಾಯೆಯನ್ನು ದಾಟಬಲ್ಲರು. ಆಸುರಸಂಪತ್ತುಳ್ಳ ಪಾಪಿಗಳು ನನ್ನನ್ನು ಭಜಿಸುವುದಿಲ್ಲ. ಆರ್ತ, ಜಿಜ್ಞಾಸು, ಅರ್ಥಾರ್ಥಿ, ಜ್ಞಾನಿ – ಎಂದು ನಾಲ್ಕು ವಿಧದ ಜನರು ನನ್ನನ್ನು ಭಜಿಸುತ್ತಾರೆ. ಇವರೆಲ್ಲರೂ ನನಗೆ ಪ್ರಿಯರಾದವರೇ. ಜ್ಞಾನಿಯು ನನಗೆ ಪರಮಪ್ರಿಯನಾಗಿರುತ್ತಾನೆ. ಏಕೆಂದರೆ, ಅವನು ನನ್ನ ಆತ್ಮನೇ ಆಗಿದ್ದಾನೆ.

ಬೇರೆ ಬೇರೆ ಫಲಾಪೇಕ್ಷೆಯಿಂದ ಜನರು ಬೇರೆ ಬೇರೆ ದೇವತೆಗಳನ್ನು ಭಜಿಸುತ್ತಾರೆ. ಅವರಿಗೆ ಭಕ್ತಿಯುಂಟಾಗುವಂತೆ ಮಾಡಿದವನೂ ಆ ದೇವತೆಗಳ ಮೂಲಕ ಫಲವನ್ನು ನೀಡುತ್ತಿರುವವನೂ ನಾನೇ ಆಗಿದ್ದೇನೆ. ಅದೆಲ್ಲವೂ ಬೇಗನೆ ನಾಶವಾಗುವಂತಹ ಫಲ. ಅವರು ಬಯಸುವುದು ಅದನ್ನೇ, ಪುಣ್ಯವಂತರು ಮಾತ್ರ ಅಮೃತಫಲಕ್ಕಾಗಿ ನನ್ನನ್ನು ಭಜಿಸುತ್ತಾರೆ. ನಾನು ತ್ರಿಕಾಲದಲ್ಲಿ ನಡೆಯುವ ಆಗುಹೋಗುಗಳನ್ನು ಬಲ್ಲೆನು. ನನ್ನನ್ನು ಮಾತ್ರ ಯಾರೂ ಅರಿತುಕೊಂಡಿಲ್ಲ. ನಾನು ಈಗ ಹೊಸಬನಾಗಿ ಯಾದವರ ನಡುವೆ ಹುಟ್ಟಿದವನೆಂದು ಕೆಲವು ಮೂಢರು ತಿಳಿದುಕೊಂಡಿದ್ದಾರೆ. ನನ್ನ ಪರತತ್ತ್ವವನ್ನು ಈ ಜನರು ಅರಿಯರು. ಏಕೆಂದರೆ, ರಾಗದ್ವೇಷಗಳಿಂದಾದ ಮೋಹವು ತತ್ತ್ವಜ್ಞಾನವುಂಟಾಗದಂತೆ ಇವರನ್ನು ತಡೆದಿರುತ್ತದೆ.

ಆದರೆ ಬಹಳ ಪುಣ್ಯಕರ್ಮಗಳನ್ನಾಚರಿಸಿ ಚಿತ್ತಶುದ್ಧಿಯನ್ನು ಪಡೆದವರು ಈ ಮೋಹಕ್ಕೆ ಬಲಿಯಾಗದೆ ನನ್ನನ್ನು ಭಜಿಸಿ ಶ್ರೇಯಸ್ಸನ್ನು ಪಡೆಯುತ್ತಾರೆ. ಅವರು

ಮುಪ್ಪುಸಾವುಗಳನ್ನು ತಪ್ಪಿಸಿಕೊಂಡು ಪುನರ್ಜನ್ಮವನ್ನು ನೀಗಿ ಅಮೃತರೇ ಆಗಿಬಿಡುತ್ತಾರೆ. ನಾನು ಅಧಿಭೂತ, ಅಧಿದೈವ, ಅಧಿಯಜ್ಞಗಳಿಂದ ಕೂಡಿದ ಪರಮೇಶ್ವರನೇ ಎಂದು ಯಾರು ನಂಬಿದ್ದಾರೋ ಸತತವಾಗಿ ನನ್ನ ಧ್ಯಾನದಲ್ಲಿ ಮುಳುಗಿರುತ್ತಾರೋ ಅವರು ಮರಣಕಾಲದಲ್ಲಿಯೂ ನನ್ನನ್ನು ಧ್ಯಾನಿಸುವ ಶಕ್ತಿಯನ್ನು ಪಡೆಯುತ್ತಾರೆ. ಮರಣಕಾಲದಲ್ಲಿ ನನ್ನ ಸ್ಮರಣೆ ಯಾರಿಗೆ ಬರುತ್ತದೆಯೋ ಅವರಿಗೆ ಸದ್ಗತಿಯಾಗುತ್ತದೆ.

## ಅಧ್ಯಾಯ ೮

# ಅಕ್ಷರಬ್ರಹ್ಮಯೋಗ

ಏಳನೆಯ ಅಧ್ಯಾಯದ ಕಡೆಯಲ್ಲಿ 'ಬ್ರಹ್ಮ ಅಧ್ಯಾತ್ಮ ಕರ್ಮ – ಮುಂತಾದವನ್ನು ನನ್ನ ಭಕ್ತರು ತಿಳಿಯುತ್ತಾರೆ' ಎಂದು ಶ್ರೀಕೃಷ್ಣನು ಹೇಳಿದನಷ್ಟೆ. ಅವುಗಳ ವಿವರವನ್ನು ತಿಳಿಯಲು ಅರ್ಜುನನು ಪ್ರಶ್ನೆ ಮಾಡುತ್ತಾನೆ.

**ಅರ್ಜುನ ಉವಾಚ –**

**ಕಿಂ ತದ್ಬ್ರಹ್ಮ ಕಿಮಧ್ಯಾತ್ಮಂ ಕಿಂ ಕರ್ಮ ಪುರುಷೋತ್ತಮ ।**
**ಅಧಿಭೂತಂ ಚ ಕಿಂ ಪ್ರೋಕ್ತಮಧಿದೈವಂ ಕಿಮುಚ್ಯತೇ ॥** ೧

**ಅರ್ಜುನನು ಇಂತೆಂದನು –** ಹೇ ಪುರುಷೋತ್ತಮ, ಆ ಬ್ರಹ್ಮವು ಯಾವುದು ? ಅಧ್ಯಾತ್ಮವು ಯಾವುದು ? ಕರ್ಮವು ಯಾವುದು ? ಯಾವುದಕ್ಕೆ ಅಧಿಭೂತವೆಂದು ಹೆಸರು ? ಅಧಿದೈವವೆಂಬುದು ಯಾವುದು ?

**ಅಧಿಯಜ್ಞಃ ಕಥಂ ಕೋಽತ್ರ ದೇಹೇಽಸ್ಮಿನ್ ಮಧುಸೂದನ ।**
**ಪ್ರಯಾಣಕಾಲೇ ಚ ಕಥಂ ಜ್ಞೇಯೋಽಸಿ ನಿಯತಾತ್ಮಭಿಃ ॥** ೨

ಈ ದೇಹದಲ್ಲಿ ಅಧಿಯಜ್ಞನು ಯಾರು ? ಅವನು ಹೇಗೆ ಅಧಿಯಜ್ಞ ? ಮರಣಕಾಲದಲ್ಲಿ ನಿಯತಾತ್ಮರು ನಿನ್ನನ್ನು ಸ್ಮರಿಸಿಕೊಳ್ಳುವುದು ಹೇಗೆ ?

**ಶ್ರೀಭಗವಾನುವಾಚ –**

**ಅಕ್ಷರಂ ಬ್ರಹ್ಮ ಪರಮಂ ಸ್ವಭಾವೋಽಧ್ಯಾತ್ಮಮುಚ್ಯತೇ ।**
**ಭೂತಭಾವೋದ್ಭವಕರೋ ವಿಸರ್ಗಃ ಕರ್ಮಸಂಜ್ಞಿತಃ ॥** ೩

**ಭಗವಂತನು ಹೇಳಿದನು –** ಪರಮಶ್ರೇಷ್ಠವಾಗಿದ್ದು ಕ್ಷರ(ನಾಶ)ವಾಗದ ಯಾವ ತತ್ತ್ವ ಉಂಟೋ ಅದೇ ಬ್ರಹ್ಮ. ಪ್ರತಿಯೊಂದು ದೇಹದಲ್ಲಿಯೂ ಆ ಬ್ರಹ್ಮದ ಭಾವ – ಎಂದರೆ – ಅವಸ್ಥಾನವೇ ಎಂದರೆ ಪ್ರತ್ಯಗ್ರೂಪವಾದ ಬ್ರಹ್ಮವೇ ಅಧ್ಯಾತ್ಮವೆನಿಸುತ್ತದೆ. ಪ್ರಾಣಿಗಳ ಉತ್ಪತ್ತಿಗೆ ಕಾರಣವಾದ ಹವಿಸ್ತ್ಯಾಗವು ಕರ್ಮವೆನಿಸುತ್ತದೆ.

**ವಿವರಣೆ :** ಅಧ್ಯಾತ್ಮಶಬ್ದದಲ್ಲಿ ಆತ್ಮವೆಂದರೆ ದೇಹವೆಂದರ್ಥ. ಸ್ವಸ್ಯ = ತನ್ನ (ಬ್ರಹ್ಮದ) ಭಾವ ಅವಸ್ಥಾನ (ಇರುವಿಕೆ) ಇದೇ ಸ್ವಭಾವಶಬ್ದದ ಅರ್ಥ. ಅಧ್ಯಾತ್ಮ

= ದೇಹದಲ್ಲಿ ಇರತಕ್ಕದ್ದು.

**ಅಧಿಭೂತಂ ಕ್ಷರೋ ಭಾವಃ ಪುರುಷಶ್ಚಾಧಿದೈವತಮ್ ।**
**ಅಧಿಯಜ್ಞೋऽಹಮೇವಾತ್ರ ದೇಹೇ ದೇಹಭೃತಾಂ ವರ ॥ ೪**

ಪ್ರಾಣಿಗಳಿಗೆ ಸಂಬಂಧಿಸಿದ ನಶ್ವರಭಾಗವೇ – ಎಂದರೆ – ದೇಹವೇ ಅಧಿಭೂತವು. (ಸೂರ್ಯಮಂಡಲದಲ್ಲಿರುವ ಹಿರಣ್ಯಗರ್ಭನೆಂಬ) ಪುರುಷನೇ ಅಧಿದೈವತ. ದೇಹಧಾರಿಗಳಲ್ಲಿ ಉತ್ತಮನಾದ ಅರ್ಜುನ, ಈ ದೇಹದಲ್ಲಿ ನೆಲೆಸಿರುವ ವಿಷ್ಣುವಾದ ನಾನೇ ಅಧಿಯಜ್ಞನಾಗಿದ್ದೇನೆ.

**ವಿವರಣೆ :** ದೇಹವನ್ನು ೧೩ನೆಯ ಅಧ್ಯಾಯದಲ್ಲಿ ಕ್ಷೇತ್ರವೆಂದೂ ೧೫ನೆಯ ಅಧ್ಯಾಯದಲ್ಲಿ ಕ್ಷರವೆಂದೂ ಕರೆಯಲಾಗಿದೆ. ಹಿರಣ್ಯಗರ್ಭನು ಸರ್ವಪ್ರಾಣಿಗಳ ಇಂದ್ರಿಯಗಳಿಗೂ ಶಕ್ತಿಯನ್ನು ನೀಡುವ ಅನುಗ್ರಾಹಕ (ಬೃಹ. ೨–೩–೩). 'ಯಜ್ಞೋ ವೈ ವಿಷ್ಣುಃ' ಎಂಬ ಶ್ರುತಿಯಿಂದ ಯಜ್ಞಾಭಿಮಾನಿದೇವತೆ ವಿಷ್ಣುವೆಂದು ತಿಳಿಯಬೇಕು.

**ಅಂತಕಾಲೇ ಚ ಮಾಮೇವ ಸ್ಮರನ್ಮುಕ್ತ್ವಾ ಕಲೇವರಮ್ ।**
**ಯಃ ಪ್ರಯಾತಿ ಸ ಮದ್ಭಾವಂ ಯಾತಿ ನಾಸ್ತ್ಯತ್ರ ಸಂಶಯಃ ॥ ೫**

ಯಾವಾತನು ಕಡೆಯ ಕಾಲದಲ್ಲಿ ನನ್ನನ್ನೇ ಸ್ಮರಿಸುತ್ತ ಕಳೇಬರವನ್ನು ತ್ಯಜಿಸಿ ಹೋಗುವನೋ ಅವನು ನನ್ನನ್ನು ಸೇರಿಕೊಳ್ಳುವನು. ಇದರಲ್ಲಿ ಯಾವ ಸಂಶಯವೂ ಇಲ್ಲ.

**ಯಂ ಯಂ ವಾಪಿ ಸ್ಮರನ್ ಭಾವಂ ತ್ಯಜತ್ಯಂತೇ ಕಲೇವರಮ್ ।**
**ತಂ ತಮೇವೈತಿ ಕೌಂತೇಯ ಸದಾ ತದ್ಭಾವಭಾವಿತಃ ॥ ೬**

ಕೌಂತೇಯ, (ಈ ನಿಯಮವು ನನ್ನ ವಿಷಯದಲ್ಲಿ ಮಾತ್ರವೇ ಅಲ್ಲ.) ಮನುಷ್ಯನು ಕಡೆಗಾಲದಲ್ಲಿ ಯಾವ ಯಾವ ದೇವತಾವಿಶೇಷವನ್ನು ಸ್ಮರಿಸಿಕೊಳ್ಳುತ್ತ ದೇಹವನ್ನು ಬಿಡುವನೋ, ಅವನು ಆಯಾ ದೇವತೆಯನ್ನೇ ಸೇರಿಕೊಳ್ಳುತ್ತಾನೆ. ಅದೇಕೆ ಸ್ಮರಣೆಗೆ ಬರುತ್ತದೆಯೆಂದರೆ, ಅವನು ಸರ್ವದಾ ಆ ದೇವತೆಯನ್ನೇ ನೆನೆಯುತ್ತ ಅದರಿಂದ ವಾಸಿತಚಿತ್ತನಾಗಿರುತ್ತಾನೆ.

**ವಿವರಣೆ :** ಇದು ದೇವತಾಪ್ರಕರಣವಾದ್ದರಿಂದ ಭಾವಶಬ್ದಕ್ಕೆ ದೇವತಾ ವಿಶೇಷವೆಂದು ಅರ್ಥವನ್ನು ಹೇಳಲಾಗಿದೆ. ದೇವತೆಯನ್ನು ಸೇರಿಕೊಳ್ಳುತ್ತಾನೆಂದರೆ ಆ ದೇವತಾಲೋಕವನ್ನು ಸೇರುತ್ತಾನೆಂದು ಅಭಿಪ್ರಾಯ. ಅಲ್ಲದೆ

ವಸ್ತುತಃ ಭಾವವೆಂದರೆ ಪದಾರ್ಥಮಾತ್ರ. ಜಡಭರತನು ಹಿಂದಿನ ಜನ್ಮದಲ್ಲಿ ಜಿಂಕೆಯನ್ನೇ ಸ್ಮರಿಸುತ್ತ ಜಿಂಕೆಯಾಗಿ ಹುಟ್ಟಿದ್ದನೆಂದು ಭಾಗವತದಲ್ಲಿ ಕಥೆ ಇದೆ.

**ತಸ್ಮಾತ್ಸರ್ವೇಷು ಕಾಲೇಷು ಮಾಮನುಸ್ಮರ ಯುದ್ಧ್ಯ ಚ ।**
**ಮಯ್ಯರ್ಪಿತಮನೋಬುದ್ಧಿಃ ಮಾಮೇವೈಷ್ಯಸ್ಯಸಂಶಯಮ್ ॥ ೭**

ಆದ್ದರಿಂದ ಎಲ್ಲ ಕಾಲಗಳಲ್ಲಿಯೂ ನನ್ನನ್ನು ಸ್ಮರಿಸುತ್ತಿರು. (ಸ್ವಧರ್ಮವಾದ) ಯುದ್ಧವನ್ನೂ ಮಾಡು. ಮನೋಬುದ್ಧಿಗಳನ್ನು ನನ್ನಲ್ಲಿಯೇ ಅರ್ಪಿಸಿದವನಾಗಿ ಸಂದೇಹವಿಲ್ಲದೆ ನನ್ನನ್ನು ಸೇರಿಕೊಳ್ಳುವೆ.

**ಅಭ್ಯಾಸಯೋಗಯುಕ್ತೇನ ಚೇತಸಾ ನಾನ್ಯಗಾಮಿನಾ ।**
**ಪರಮಂ ಪುರುಷಂ ದಿವ್ಯಂ ಯಾತಿ ಪಾರ್ಥಾನುಚಿಂತಯನ್ ॥ ೮**

ಸತತವಾಗಿ ನನ್ನನ್ನೇ ಧ್ಯಾನಿಸುವ ಅಭ್ಯಾಸವೆಂಬ ಯೋಗದಿಂದ ಕೂಡಿದವನು ಬೇರೆ ಕಡೆ ಹರಿಯದ ಮನಸ್ಸಿನಿಂದ, ಪಾರ್ಥ, ಪರಮಪುರುಷನನ್ನು ಧ್ಯಾನಿಸುತ್ತಿದ್ದರೆ ಆ ದಿವ್ಯಪುರುಷನನ್ನು ಸೇರಿಕೊಳ್ಳುತ್ತಾನೆ.

**ಕವಿಂ ಪುರಾಣಮನುಶಾಸಿತಾರಂ ಅಣೋರಣೀಯಾಂಸಮನುಸ್ಮರೇದ್ಯಃ ।**
**ಸರ್ವಸ್ಯ ಧಾತಾರಮಚಿಂತ್ಯರೂಪಂ ಆದಿತ್ಯವರ್ಣಂ ತಮಸಃ ಪರಸ್ತಾತ್ ॥**

ಕವಿಯೂ ಎಂದರೆ ಕ್ರಾಂತದರ್ಶಿಯಾದ ಸರ್ವಜ್ಞನೂ ಚಿರಂತನನೂ ಸರ್ವಜಗತ್ತಿನ ನಿಯಾಮಕನೂ ಅಣುವಿಗಿಂತ ಸೂಕ್ಷ್ಮತರನೂ ಸಮಸ್ತ ಕರ್ಮಫಲವನ್ನು ವಿಂಗಡಿಸಿ ನೀಡತಕ್ಕವನೂ ಊಹಿಸಲು ಶಕ್ಯವಿಲ್ಲದ ಅಚಿಂತ್ಯ ಸ್ವರೂಪನೂ ಸೂರ್ಯನಂತೆ ನಿತ್ಯಪ್ರಕಾಶನೂ ಅಜ್ಞಾನವೆಂಬ ಕತ್ತಲೆಯ ಆಚೆಗಿರತಕ್ಕವನೂ ಆದ ಪರಮಪುರುಷನನ್ನು ಆ ಯೋಗಿಯು ಸೇರಿಕೊಳ್ಳುತ್ತಾನೆ (ಎಂದು ಪೂರ್ವಶ್ಲೋಕದೊಡನೆ ಅನ್ವಯ).

**ಪ್ರಯಾಣಕಾಲೇ ಮನಸಾಽಚಲೇನ**
**ಭಕ್ತ್ಯಾ ಯುಕ್ತೋ ಯೋಗಬಲೇನ ಚೈವ ।**
**ಭ್ರುವೋರ್ಮಧ್ಯೇ ಪ್ರಾಣಮಾವೇಶ್ಯ ಸಮ್ಯಕ್**
**ಸ ತಂ ಪರಂ ಪುರುಷಮುಪೈತಿ ದಿವ್ಯಮ್ ॥ ೧೦**

ಪ್ರಯಾಣಕಾಲದಲ್ಲಿ ಎಂದರೆ ಮರಣಕಾಲದಲ್ಲಿ ಅಚಲವಾದ ಮನಸ್ಸಿನಿಂದಲೂ ಭಕ್ತಿಯಿಂದಲೂ ಯೋಗಬಲದಿಂದಲೂ ಯುಕ್ತನಾಗಿ, ಭ್ರೂಮಧ್ಯದಲ್ಲಿ ಪ್ರಾಣವಾಯುವನ್ನು ಸರಿಯಾಗಿ ನಿಲ್ಲಿಸಿ, ಯೋಗಿಯು ಪ್ರಕಾಶಮಯನಾದ

ಆ ಪರಮಪುರುಷನನ್ನು ಸೇರಿಕೊಳ್ಳುತ್ತಾನೆ.

**ವಿವರಣೆ :** ಭಕ್ತಿ = ಆತ್ಮಸ್ವರೂಪದ ಅನುಸಂಧಾನ. ಯೋಗಬಲ = ಸಮಾಧಿಸಂಸ್ಕಾರಗಳಿಂದ ಪಡೆದ ಚಿತ್ತಸ್ಥೈರ್ಯ. ಭ್ರೂಮಧ್ಯದಲ್ಲಿ ಪ್ರಾಣವಾಯುವನ್ನು ನಿಲ್ಲಿಸುವ ಕ್ರಮವು ಯೋಗಸೂತ್ರದ ವಿಭೂತಿಪಾದದಲ್ಲಿ ಬಂದಿದೆ. ಯೋಗಿಗಳು ಅನುಸರಿಸುವ ಒಂದು ವಿಧಾನವನ್ನು ಪ್ರಸಂಗವಶಾತ್ ಇಲ್ಲಿ ಅನುವಾದಿಸಲಾಗಿದೆ. ವೇದಾಂತಕ್ಕೆ ಇದರಲ್ಲಿ ನಿರ್ಭರವೇನೂ ಇಲ್ಲ.

**ಯದಕ್ಷರಂ ವೇದವಿದೋ ವದಂತಿ**
**ವಿಶಂತಿ ಯದ್ಯತಯೋ ವೀತರಾಗಾಃ ।**
**ಯದಿಚ್ಛಂತೋ ಬ್ರಹ್ಮಚರ್ಯಂ**
**ಚರಂತಿ ತತ್ತೇ ಪದಂ ಸಂಗ್ರಹೇಣ ಪ್ರವಕ್ಷ್ಯೇ ॥ ೧೧**

ಯಾವ ಪದವನ್ನು (ಅವಿನಾಶಿಯಾದ್ದರಿಂದ) ಅಕ್ಷರವೆಂದು ವೇದವಿದರು ಹೇಳುತ್ತಾರೋ ರಾಗರಹಿತರಾದ ಯತಿಗಳು (ಸಮ್ಯಗ್ದರ್ಶನವನ್ನು ಪಡೆದು) ಯಾವುದನ್ನು ಪ್ರವೇಶಿಸುವರೋ ಯಾವುದನ್ನು ತಿಳಿಯಲು ಬಯಸತಕ್ಕವರು (ಗುರುವಿನ ಬಳಿ) ಗುರುಶುಶ್ರೂಷಾದಿ ಬ್ರಹ್ಮಚರ್ಯವ್ರತವನ್ನು ಪಾಲಿಸುವರೋ ಆ ಪದವನ್ನು (ಪ್ರಾಪ್ಯಸ್ಥಾನವನ್ನು) ನಿನಗೆ ಸಂಕ್ಷೇಪದಿಂದ ತಿಳಿಸುವೆನು.

**ವಿವರಣೆ :** ಇಲ್ಲಿಂದ ಮೂರು ಶ್ಲೋಕಗಳಲ್ಲಿ ಓಂಕಾರದ (ಪ್ರಣವದ) ಉಪಾಸನೆಯನ್ನು ಹೇಳಲಾಗಿದೆ. ಈ ಶ್ಲೋಕದಲ್ಲಿರುವ ಅಕ್ಷರ, ಪದ – ಎಂಬ ಶಬ್ದಗಳಿಗೆ 'ಓಂ' ಎಂಬ ಶಬ್ದವೆಂದೂ ಅದರ ಅರ್ಥವಾದ ಪರಬ್ರಹ್ಮವೆಂದೂ ಎರಡು ಅರ್ಥ. ಶಬ್ದ–ಅರ್ಥಗಳಿಗೆ ಅಭೇದವಿರುವುದರಿಂದ ಈ ರೀತಿಯ ವ್ಯವಹಾರ ಬಂದಿದೆ. ಈ ಪ್ರಣವೋಪಾಸನೆ ಕ್ರಮಮುಕ್ತಿಗಾಗಿ. ಈ ವಿಚಾರವು ಪ್ರಶ್ನ (೫–೧–೨), ಕಠ (೧–೨–೧೪) – ಎಂಬ ಉಪನಿಷತ್ತುಗಳಲ್ಲಿ ಬಂದಿದೆ. ಮಂದಾಧಿಕಾರಿಗೆ ಓಂಕಾರವು ವಿಗ್ರಹದಂತೆ ಪ್ರತೀಕ, ಮಧ್ಯಮಾಧಿಕಾರಿಗೆ ವಾಚಕಶಬ್ದ, ಉತ್ತಮಾಧಿಕಾರಿಗೆ ಪರಮಾತ್ಮನೇ. ಓಂಕಾರವನ್ನು ಉಚ್ಚರಿಸುತ್ತ ಪರಮಾತ್ಮನನ್ನು ಧ್ಯಾನಿಸುವುದೇ ಪ್ರಣವೋಪಾಸನೆ.

**ಸರ್ವದ್ವಾರಾಣಿ ಸಂಯಮ್ಯ ಮನೋ ಹೃದಿ ನಿರುಧ್ಯ ಚ ।**
**ಮೂರ್ಧ್ನ್ಯಾಧಾಯಾತ್ಮನಃ ಪ್ರಾಣಮಾಸ್ಥಿತೋ ಯೋಗಧಾರಣಾಮ್ ॥**

ಇಂದ್ರಿಯಗಳೆಂಬ ಎಲ್ಲ ದ್ವಾರಗಳನ್ನೂ ತಡೆಹಿಡಿದು (ಶಬ್ದಾದಿ ವಿಷಯಗಳನ್ನು ಚಿಂತಿಸದೆ), ಮನಸ್ಸನ್ನು ಹೃದಯಕಮಲದಲ್ಲಿ ನಿರೋಧಿಸಿ (ಎಲ್ಲ

ಮನೋವೃತ್ತಿಗಳನ್ನೂ ತಡೆದು), ತನ್ನ ಪ್ರಾಣವಾಯುವನ್ನು ನಡುನೆತ್ತಿಗೆ (ಸುಷುಮ್ನಾನಾಡಿಯ ಮೂಲಕ) ಏರಿಸಿ, ಈ ಪ್ರಕಾರವಾದ ಯೋಗ ಧಾರಣೆಯನ್ನು ಅವಲಂಬಿಸಿದವನಾಗಿ –

**ಓಮಿತ್ಯೇಕಾಕ್ಷರಂ ಬ್ರಹ್ಮ ವ್ಯಾಹರನ್ ಮಾಮನುಸ್ಮರನ್ ।**
**ಯಃ ಪ್ರಯಾತಿ ತ್ಯಜನ್ ದೇಹಂ ಸ ಯಾತಿ ಪರಮಾಂ ಗತಿಮ್ ॥ ೧೩**

'ಓಂ' ಎಂಬ ಏಕಾಕ್ಷರದ ಶಬ್ದಬ್ರಹ್ಮವನ್ನು ಉಚ್ಚರಿಸುತ್ತ, (ಅದರ ಅರ್ಥವಾದ) ನನ್ನನ್ನು ಸ್ಮರಿಸುತ್ತ ಯಾವಾತನು ದೇಹತ್ಯಾಗ ಮಾಡಿ ಪ್ರಯಾಣ ಮಾಡುತ್ತಾನೋ ಅವನು ಪರಮಗತಿಯನ್ನೈದುತ್ತಾನೆ.

ವಿವರಣೆ : 'ದೇಹತ್ಯಾಗ ಮಾಡಿ' ಎಂದು ಇಲ್ಲಿ ಹೇಳಿರುವುದೇಕೆಂದರೆ – ಜೀವಾತ್ಮನು ದೇಹವನ್ನು ತ್ಯಜಿಸುವುದೇ ಸಾವು, ಜೀವಾತ್ಮನ ಸ್ವರೂಪ ನಾಶವಲ್ಲ – ಎಂದು ಸೂಚಿಸುವುದಕ್ಕಾಗಿ.

**ಅನನ್ಯಚೇತಾಃ ಸತತಂ ಯೋ ಮಾಂ ಸ್ಮರತಿ ನಿತ್ಯಶಃ ।**
**ತಸ್ಯಾಹಂ ಸುಲಭಃ ಪಾರ್ಥ ನಿತ್ಯಯುಕ್ತಸ್ಯ ಯೋಗಿನಃ ॥ ೧೪**

ಅರ್ಜುನ, ಇನ್ನೊಂದು ವಸ್ತುವಿನಲ್ಲಿ ಚಿತ್ತವನ್ನಿಡದೆ ಯಾವಾತನು ಸಂತತವಾಗಿ ದೀರ್ಘಕಾಲದವರೆಗೆ ನನ್ನನ್ನು ಧ್ಯಾನಿಸುತ್ತಲೇ ಇರುತ್ತಾನೋ ಅಂತಹ ನಿತ್ಯಯುಕ್ತನಾದ ಯೋಗಿಗೆ ನಾನು ಸುಲಭವಾಗಿ ದೊರೆಯುತ್ತೇನೆ.

**ಮಾಮುಪೇತ್ಯ ಪುನರ್ಜನ್ಮ ದುಃಖಾಲಯಮಶಾಶ್ವತಮ್ ।**
**ನಾಪ್ನುವಂತಿ ಮಹಾತ್ಮಾನಃ ಸಂಸಿದ್ಧಿಂ ಪರಮಾಂ ಗತಾಃ ॥ ೧೫**

ಈಶ್ವರನಾದ ನನ್ನನ್ನು ಸೇರಿ ಮೋಕ್ಷವೆಂಬ ಪರಮಸಿದ್ಧಿಯನ್ನು ಪಡೆದ ಮಹಾತ್ಮರು ನಾನಾ ದುಃಖಗಳಿಗೆ ಆಗರವೂ, ಇದ್ದಂತೆ ಇರದೆ ಅಶಾಶ್ವತವೂ ಆದ ಪುನರ್ಜನ್ಮವನ್ನು ಪಡೆಯುವುದಿಲ್ಲ.

**ಆಬ್ರಹ್ಮಭುವನಾಲ್ಲೋಕಾಃ ಪುನರಾವರ್ತಿನೋಽರ್ಜುನ ।**
**ಮಾಮುಪೇತ್ಯ ತು ಕೌಂತೇಯ ಪುನರ್ಜನ್ಮ ನ ವಿದ್ಯತೇ ॥ ೧೬**

ಅರ್ಜುನ, ಬ್ರಹ್ಮಲೋಕವನ್ನು ಮೊದಲ್ಗೊಂಡು ಸಮಸ್ತಲೋಕಗಳೂ ಮರಳಿ ಭೂಲೋಕಕ್ಕೆ ತಂದಿಳಿಸತಕ್ಕವೇ. ಆದರೆ ನನ್ನನ್ನು ಸೇರಿದ ಬಳಿಕ ಪುನರ್ಜನ್ಮವಿಲ್ಲ.

ವಿವರಣೆ : ಬ್ರಹ್ಮಲೋಕದಲ್ಲಿ ಜ್ಞಾನವಾದರೆ ಮುಕ್ತಿಯುಂಟು. ಒಂದು ವೇಳೆ

ಆಗದಿದ್ದರೆ ಈ ಕಲ್ಪವು ಕಳೆದಮೇಲೆ ಮತ್ತೆ ಪುನರ್ಜನ್ಮವಾಗುತ್ತದೆ. (ಛಾಂ.ಭಾ. ೮–೧೫–೧, ಬೃಹ.ಭಾ. ೬–೨–೫)

ಬ್ರಹ್ಮಲೋಕಾದಿಗಳು ಕಾಲಕ್ಕೆ ಕಟ್ಟುಬಿದ್ದಿರುವುದರಿಂದ ಅನಿತ್ಯವಾದವುಗಳೆಂದು ಈಗ ಉಪಪಾದನೆ ಮಾಡಲಾಗುತ್ತದೆ –

**ಸಹಸ್ರಯುಗಪರ್ಯಂತಮಹರ್ಯದ್ಬ್ರಹ್ಮಣೋ ವಿದುಃ।**
**ರಾತ್ರಿಂ ಯುಗಸಹಸ್ರಾಂತಾಂ ತೇಽಹೋರಾತ್ರವಿದೋ ಜನಾಃ ॥ ೧೭**

ಹಗಲು ರಾತ್ರಿಗಳ ಕಾಲಸಂಖ್ಯೆಯನ್ನು ಬಲ್ಲ ಶಾಸ್ತ್ರಜ್ಞರು ಬ್ರಹ್ಮದೇವನ ಒಂದು ಹಗಲು ಒಂದು ಸಾವಿರ (ಮಹಾ) ಯುಗ ಪರ್ಯಂತವೆಂದೂ ಹಾಗೆಯೇ ರಾತ್ರಿಯೂ ಒಂದು ಸಾವಿರ (ಮಹಾ) ಯುಗ ಪರ್ಯಂತವೆಂದೂ ತಿಳಿದಿದ್ದಾರೆ.

**ವಿವರಣೆ :** ಶ್ಲೋಕದಲ್ಲಿ ಯುಗವೆಂದರೆ ಮಹಾಯುಗ. ಮನುಷ್ಯರ ನಾಲ್ಕು ಯುಗಗಳ ಕಾಲಕ್ಕೆ ಒಂದು ಮಹಾಯುಗ. ಒಂದು ಸಾವಿರ ಸಲ ಮಹಾಯುಗಗಳು ಸುತ್ತಿದರೆ ಬ್ರಹ್ಮದೇವನಿಗೆ ಒಂದು ಹಗಲಾಗುತ್ತದೆ. 'ಚತುರ್ಯುಗಸಹಸ್ರಾಣಿ ಬ್ರಹ್ಮಣೋ ದಿನಮುಚ್ಯತೇ' ಇತ್ಯಾದಿ ವಚನಗಳು ಇದಕ್ಕೆ ಪ್ರಮಾಣ. ರಾತ್ರಿಯೂ ಅಷ್ಟೇ ಕಾಲ ಪ್ರಮಾಣ ಉಳ್ಳದ್ದು. ಇಂತಹ ೩೬೦ ದಿವಸಗಳಿಗೆ ಬ್ರಹ್ಮದೇವನ ಒಂದು ವರ್ಷ. ಅವನ ಆಯುಸ್ಸು ನೂರು ವರ್ಷ. ಈ ನೂರು ವರ್ಷಗಳಿಗೆ ಕಲ್ಪವೆಂದು ಹೆಸರು. ಕಲ್ಪಕ್ಕೆ 'ಪರ' ಎಂಬ ಹೆಸರೂ ಇದೆ. ಈ ಆಯುಸ್ಸಿನ ಮೊದಲನೆಯ ಐವತ್ತು ವರ್ಷಗಳಿಗೆ ಪೂರ್ವಪರಾರ್ಧವೆಂದೂ ಎರಡನೆಯ ಐವತ್ತು ವರ್ಷಗಳಿಗೆ ದ್ವಿತೀಯಪರಾರ್ಧವೆಂದೂ ಹೆಸರು. ಬ್ರಹ್ಮದೇವನ ಆಯುಸ್ಸು ಒಂದು ಕಲ್ಪದವರೆಗೆ. ಆದ್ದರಿಂದ ಬ್ರಹ್ಮಲೋಕವೂ ಅಶಾಶ್ವತ.

**ಅವ್ಯಕ್ತಾದ್ವ್ಯಕ್ತಯಃ ಸರ್ವಾಃ ಪ್ರಭವಂತ್ಯಹರಾಗಮೇ ।**
**ರಾತ್ರ್ಯಾಗಮೇ ಪ್ರಲೀಯಂತೇ ತತ್ರೈವಾವ್ಯಕ್ತಸಂಜ್ಞಕೇ ॥ ೧೮**

ಬ್ರಹ್ಮದೇವನಿಗೆ ಹಗಲಾದಾಗ ಎಂದರೆ – ಅವನ ಎಚ್ಚರದ ಕಾಲದಲ್ಲಿ ಅವ್ಯಕ್ತದಿಂದ (ಸ್ಥಾವರಜಂಗಮರೂಪದ) ಸಮಸ್ತ ವ್ಯಕ್ತಿಗಳೂ ಉದ್ಭವಿಸುತ್ತವೆ. ಅವನಿಗೆ ರಾತ್ರಿಯಾದಾಗ – ಎಂದರೆ – ಬ್ರಹ್ಮದೇವನ ನಿದ್ರಾಸಮಯದಲ್ಲಿ ಈ ವ್ಯಕ್ತಿಗಳೆಲ್ಲವೂ ಅದೇ ಅವ್ಯಕ್ತದಲ್ಲಿ ಅಡಗಿಹೋಗುತ್ತವೆ.

**ವಿವರಣೆ :** ಇಲ್ಲಿ ಅವ್ಯಕ್ತವೆಂದರೆ ಅವಿದ್ಯೆ. ಬ್ರಹ್ಮನ ನಿದ್ರಾವಸ್ಥೆ, ಆಗಲೇ ಪ್ರಳಯಕಾಲ. ಉದ್ಭವಿಸುವುದೆಂದರೆ ಅತ್ಯಂತ ಸೂಕ್ಷ್ಮಾವಸ್ಥೆಯಿಂದ ಸ್ಥೂಲವಾದ

ವ್ಯಕ್ತರೂಪವನ್ನು ಪಡೆಯುವುದೆಂದರ್ಥ (ಮನುಸ್ಮೃತಿ ೧ – ೫೨ರಿಂದ ೫೫).

**ಭೂತಗ್ರಾಮಃ ಸ ಏವಾಯಂ ಭೂತ್ವಾ ಭೂತ್ವಾ ಪ್ರಲೀಯತೇ ।**
**ರಾತ್ರ್ಯಾಗಮೇಽವಶಃ ಪಾರ್ಥ ಪ್ರಭವತ್ಯಹರಾಗಮೇ ॥ ೧೯**

ಅದೇ (ಪೂರ್ವಕಲ್ಪದಲ್ಲಿದ್ದ) ಈ ಸ್ಥಾವರಜಂಗಮಗಳೆಂಬ ಭೂತಸಮುದಾಯವು ಅವಶವಾಗಿ – ತಪ್ಪಿಸಿಕೊಳ್ಳಲು ಸಾಧ್ಯವಿಲ್ಲದೆ ಹುಟ್ಟಿ ಹುಟ್ಟಿ ಬ್ರಹ್ಮದೇವನಿಗೆ ರಾತ್ರಿಯಾದ ಕೂಡಲೇ ಲಯವಾಗುತ್ತದೆ. ಅರ್ಜುನ, ಮತ್ತೆ ಹಗಲಾದೊಡನೆ ಕಾಣಿಸಿಕೊಳ್ಳುತ್ತದೆ.

**ವಿವರಣೆ :** ಅನಾದಿಯಾಗಿ ಸಕಲ ಪ್ರಾಣಿಗಳೂ ಹುಟ್ಟುಸಾವುಗಳ ಚಕ್ರದಲ್ಲಿ ಸಿಕ್ಕಿಕೊಂಡು ನರಳುತ್ತಿವೆ. ವಿವೇಕಿಯಾದವನು ಮನುಷ್ಯಜನ್ಮ ಬಂದಾಗ ಅದನ್ನು ಸಾರ್ಥಕಪಡಿಸಿಕೊಂಡು ಈ ಚಕ್ರದಿಂದ ಪಾರಾಗಬೇಕು – ಎಂದು ಅಭಿಪ್ರಾಯ.

ಹಿಂದೆ ಹೇಳಿದ (೮–೧೩) ಅಕ್ಷರ ಸ್ವರೂಪದ ವಿವರಣೆ –

**ಪರಸ್ತಸ್ಮಾತ್ತು ಭಾವೋಽನ್ಯೋಽವ್ಯಕ್ತೋಽವ್ಯಕ್ತಾತ್ ಸನಾತನಃ ।**
**ಯಃ ಸ ಸರ್ವೇಷು ಭೂತೇಷು ನಶ್ಯತ್ಸು ನ ವಿನಶ್ಯತಿ ॥ ೨೦**

ಆದರೆ (ಭೂತಸಮುದಾಯಕ್ಕೆ ಕಾರಣವೆಂದು ಹಿಂದೆ ಹೇಳಿದ) ಆ ಅವ್ಯಕ್ತವೆಂಬ ಅವಿದ್ಯೆಗಿಂತಲೂ ಬೇರೆ ಬಗೆಯದಾದ ಸನಾತನವಾದ ಇನ್ನೊಂದು ಅವ್ಯಕ್ತವೆಂಬ ಭಾವಪದಾರ್ಥ ಉಂಟು. ಸಕಲ ಭೂತಗಳು ನಾಶವಾದರೂ ಅದಕ್ಕೆ ನಾಶವೆಂಬುದಿಲ್ಲ.

**ವಿವರಣೆ :** ಅವಿದ್ಯೆಯು ನಿರ್ವಚನಕ್ಕೆ ಸಿಗದ ವಸ್ತುವಾದ್ದರಿಂದ ಅನಿರ್ವಚನೀಯ–ಅವ್ಯಾಕೃತ–ಅವ್ಯಕ್ತ ಎಂದು ಅದನ್ನು ಹೇಳುತ್ತಾರೆ. ನಾಮರೂಪಗಳೇ ಅವ್ಯಕ್ತವೆಂದು ಕೆಲವರು ಹೇಳುತ್ತಾರೆ. ಬ್ರಹ್ಮವು ಅದಕ್ಕಿಂತ ಭಿನ್ನವಾದ ಅವ್ಯಕ್ತ.

**ಅವ್ಯಕ್ತೋಽಕ್ಷರ ಇತ್ಯುಕ್ತಸ್ತಮಾಹುಃ ಪರಮಾಂ ಗತಿಮ್ ।**
**ಯಂ ಪ್ರಾಪ್ಯ ನ ನಿವರ್ತಂತೇ ತದ್ಧಾಮ ಪರಮಂ ಮಮ ॥ ೨೧**

ಆ ಅವ್ಯಕ್ತವನ್ನೇ ಅಕ್ಷರವೆಂದು ಹಿಂದೆ ಕರೆದಿದೆ. ಅದೇ ಪ್ರಾಣಿಗಳಿಗೆ ಪರಮಗತಿಯೆಂದು ಹೇಳುತ್ತಾರೆ. ಏಕೆಂದರೆ, ಆ ಭಾವವನ್ನು ಪಡೆದುಕೊಂಡರೆ ಸಂಸಾರಕ್ಕೆ ಮರಳಿ ಬರುವುದಿಲ್ಲ. ಅದೇ ನನ್ನ ಪರಮಧಾಮ.

**ಪುರುಷಃ ಸ ಪರಃ ಪಾರ್ಥ ಭಕ್ತ್ಯಾ ಲಭ್ಯಸ್ತ್ವನನ್ಯಯಾ ।**
**ಯಸ್ಯಾಂತಃಸ್ಥಾನಿ ಭೂತಾನಿ ಯೇನ ಸರ್ವಮಿದಂ ತತಮ್ ॥ ೨೨**

ಅಕ್ಷರನೆಂಬ ಆ ಪರಮಪುರುಷನು, ಪಾರ್ಥ, ಕೇವಲ ಆತ್ಮವಿಷಯಕವಾದ ಭಕ್ತಿಯೆಂಬ ಜ್ಞಾನದಿಂದ ದೊರೆಯುತ್ತಾನೆ. (ಕಾರ್ಯರೂಪವಾದ) ಈ ಭೂತಗಳೆಲ್ಲವೂ ಆತನೊಳಗೆ ಸೇರಿಕೊಂಡಿವೆ. ಆತನು ಎಲ್ಲೆಲ್ಲಿಯೂ ಸರ್ವವನ್ನೂ (ಆಕಾಶವು ಘಟಪಟಾದಿ ವಸ್ತುಗಳನ್ನು ವ್ಯಾಪಿಸಿಕೊಂಡಿರುವಂತೆ) ವ್ಯಾಪಿಸಿದ್ದಾನೆ.

**ವಿವರಣೆ :** ಜ್ಞಾನಿಯೇ ಹೆಚ್ಚಿನ ಭಕ್ತನೆಂದು ೭–೧೭ರಲ್ಲಿ ಹೇಳಿದೆ. ಯಥಾರ್ಥವಾದ ಆತ್ಮಜ್ಞಾನವು ಭಕ್ತಿಯೇ.

**ಯತ್ರ ಕಾಲೇ ತ್ವನಾವೃತ್ತಿಮಾವೃತ್ತಿಂ ಚೈವ ಯೋಗಿನಃ ।**
**ಪ್ರಯಾತಾ ಯಾಂತಿ ತಂ ಕಾಲಂ ವಕ್ಷ್ಯಾಮಿ ಭರತರ್ಷಭ ॥ ೨೩**

ಹೇ ಭರತಕುಲೋತ್ತಮ, ಯೋಗಿಗಳು ಯಾವ ಕಾಲದಲ್ಲಿ ಪ್ರಯಾಣ ಮಾಡಿದರೆ ಎಂದರೆ – ಮರಣಹೊಂದಿದರೆ ಅನಾವೃತ್ತಿಯನ್ನು (ಮರಳಿ ಜನ್ಮಕ್ಕೆ ಬಾರದಿರುವ ಸ್ಥಿತಿಯನ್ನು) ಪಡೆಯುತ್ತಾರೋ ಮತ್ತು ಯಾವ ಕಾಲದಲ್ಲಿ ಮೃತರಾದರೆ ಆವೃತ್ತಿಯನ್ನು – ಎಂದರೆ – ಪುನರ್ಜನ್ಮವನ್ನು ಪಡೆಯುತ್ತಾರೋ ಆ ಕಾಲವನ್ನು ಹೇಳುವೆನು.

**ವಿವರಣೆ :** ಕ್ರಮಮುಕ್ತಿಭಾಗಿಗಳಾದ ಯೋಗಿಗಳನ್ನೂ ಕರ್ಮಯೋಗಿಗಳನ್ನೂ ಇಲ್ಲಿ ಗ್ರಹಿಸಬೇಕು. ಕರ್ಮಯೋಗಿಗಳಿಗೆ ಪುನರಾವೃತ್ತಿ ಇದೆ. ಪ್ರಣವೋಪಾಸಕರೇ ಮೊದಲಾದ ಯೋಗಿಗಳಿಗೆ ಪುನರಾವೃತ್ತಿ ಇಲ್ಲ. ಅವರು ಬ್ರಹ್ಮಲೋಕವನ್ನು ಸೇರಿ ಆತ್ಮಜ್ಞಾನವಾದಮೇಲೆ ಮುಕ್ತರಾಗುತ್ತಾರೆ.

**ಅಗ್ನಿರ್ಜ್ಯೋತಿರಹಃ ಶುಕ್ಲಃ ಷಣ್ಮಾಸಾ ಉತ್ತರಾಯಣಮ್ ।**
**ತತ್ರ ಪ್ರಯಾತಾ ಗಚ್ಛಂತಿ ಬ್ರಹ್ಮ ಬ್ರಹ್ಮವಿದೋ ಜನಾಃ ॥ ೨೪**

ಅಗ್ನಿ, ಜ್ಯೋತಿ (ಜ್ವಾಲೆ), ಹಗಲು, ಶುಕ್ಲಪಕ್ಷ, ಉತ್ತರಾಯಣದ ಆರು ತಿಂಗಳು – ಇವುಗಳಲ್ಲಿ ಪ್ರಯಾಣ ಮಾಡುವ ಬ್ರಹ್ಮಜ್ಞರಾದ ಜನರು ಕ್ರಮವಾಗಿ ಬ್ರಹ್ಮವನ್ನು ಸೇರುತ್ತಾರೆ.

**ವಿವರಣೆ :** ಹಗಲು, ಶುಕ್ಲಪಕ್ಷ ಮೊದಲಾದವು ಕಾಲವಿಶೇಷವನ್ನು ಹೇಳುವುದರಿಂದ 'ಯತ್ರ ಕಾಲೇ' ಎಂದು ಹಿಂದಿನ ಶ್ಲೋಕದಲ್ಲಿ ಹೇಳಿದೆ. ಅಗ್ನಿ, ಜ್ಯೋತಿ – ಎಂಬಿವು ಕಾಲವಾಚಿಗಳಲ್ಲದಿದ್ದರೂ ಉಳಿದ ಬಹುಭಾಗ ಕಾಲವಾಚಿಯಾದ್ದರಿಂದ ಹಾಗೆ ಹೇಳಿದೆ. ಮಾವಿನ ತೋಟದಲ್ಲಿ ಬೇರೆ ಕೆಲವು ಮರಗಳಿದ್ದರೂ ಮಾವಿನ ತೋಟವೆಂದು ಹೇಳುವ ಹಾಗೆ ಇದು. ಅಗ್ನಿ, ಜ್ಯೋತಿ

– ಮೊದಲಾದವು ಆಯಾ ಅಭಿಮಾನಿದೇವತೆಗಳನ್ನು ತಿಳಿಸುತ್ತವೆ. ಈ ದೇವತೆಗಳು ಯೋಗಿಗಳನ್ನು ಕರೆದೊಯ್ಯುವ ಮಾರ್ಗವೇ ಇಲ್ಲಿ ವಿವಕ್ಷಿತ. ಜ್ಯೋತಿಯು ಅಗ್ನಿಲೋಕದ ಒಂದು ಅಂತರ್ಭೇದ. ಈ ಮಾರ್ಗಕ್ಕೆ ಅರ್ಚಿರಾದಿ ಮಾರ್ಗವೆಂದೂ ದೇವಯಾನವೆಂದೂ ಹೆಸರಿದೆ. ಜ್ಞಾನಿಗಳು ಸದ್ಯೋ ಮುಕ್ತರಾದ್ದರಿಂದ ಈ ಮಾರ್ಗದಲ್ಲಿ ಹೋಗಬೇಕಾಗಿಲ್ಲ. ಅವರಿಗೆ ಪ್ರಯಾಣ ವೆಂಬುದೇ ಇಲ್ಲ. ಇದು ಉಪಾಸನೆ ಮಾಡುವ ಯೋಗಿಗಳ ಮಾರ್ಗ.

**ಧೂಮೋ ರಾತ್ರಿಸ್ತಥಾ ಕೃಷ್ಣಃ ಷಣ್ಮಾಸಾ ದಕ್ಷಿಣಾಯನಮ್ ।**
**ತತ್ರ ಚಾಂದ್ರಮಸಂ ಜ್ಯೋತಿರ್ಯೋಗೀ ಪ್ರಾಪ್ಯ ನಿವರ್ತತೇ ॥ ೨೫**

ಧೂಮ, ರಾತ್ರಿ, ಕೃಷ್ಣಪಕ್ಷ, ದಕ್ಷಿಣಾಯನದ ಆರು ತಿಂಗಳು – ಇವುಗಳಲ್ಲಿ ಪ್ರಯಾಣ ಮಾಡಿದ ಯೋಗಿಯು ಚಂದ್ರನ ಜ್ಯೋತಿಯನ್ನು – ಎಂದರೆ – ಚಂದ್ರಲೋಕವನ್ನು ಸೇರಿ ಮತ್ತೆ ಹಿಂದಿರುಗಿ ಪುನರ್ಜನ್ಮವನ್ನು ಪಡೆಯುವನು.

**ವಿವರಣೆ :** ಇಲ್ಲಿಯೂ ಧೂಮಾದಿದೇವತೆಗಳನ್ನು ಗ್ರಹಿಸಬೇಕು. ಈ ಮಾರ್ಗಕ್ಕೆ ಧೂಮಾದಿಮಾರ್ಗವೆಂದೂ ಪಿತೃಯಾಣವೆಂದೂ ಹೆಸರಿದೆ. ಇದು ಕರ್ಮಯೋಗಿಯ ಮಾರ್ಗ.

**ಶುಕ್ಲಕೃಷ್ಣೇ ಗತೀ ಹ್ಯೇತೇ ಜಗತಃ ಶಾಶ್ವತೇ ಮತೇ ।**
**ಏಕಯಾ ಯಾತ್ಯನಾವೃತ್ತಿಮನ್ಯಯಾವರ್ತತೇ ಪುನಃ ॥ ೨೬**

ಶುಕ್ಲ, ಕೃಷ್ಣಗಳೆಂಬ ಈ ಎರಡು ಗತಿಗಳು ಜಗತ್ತಿಗೆ ಶಾಶ್ವತವಾಗಿರುತ್ತವೆ. ಇವುಗಳಲ್ಲಿ ಒಂದರಿಂದ (ದೇವಯಾನದಿಂದ) ಹೋದವನು ಪುನರ್ಜನ್ಮವನ್ನು ಪಡೆಯುವುದಿಲ್ಲ. ಇನ್ನೊಂದರಿಂದ (ಪಿತೃಯಾಣದಿಂದ) ಹೋದವನು ಮತ್ತೆ ಹಿಂದಿರುಗಿ ಬರುತ್ತಾನೆ.

**ವಿವರಣೆ :** ಜ್ಞಾನದ ಪ್ರಕಾಶಕವಾದ್ದರಿಂದ ದೇವಯಾನವು ಶುಕ್ಲಗತಿ ಯೆಂದೂ ಜ್ಞಾನಪ್ರಕಾಶವಿಲ್ಲದ್ದರಿಂದ ಪಿತೃಯಾಣವು ಕೃಷ್ಣಗತಿಯೆಂದೂ ಹೆಸರು ಪಡೆದಿವೆ. ಸಂಸಾರವು ನಿತ್ಯವಾದ್ದರಿಂದ ಈ ಗತಿಗಳು ಸದಾ ಇದ್ದೇ ಇರುತ್ತವೆ. ಜ್ಞಾನಮಾರ್ಗದವನಿಗೆ ದೇವಯಾನ, ಕರ್ಮಮಾರ್ಗದವನಿಗೆ ಪಿತೃಯಾಣ. ತತ್ತ್ವಜ್ಞಾನಿಯು ಮುಕ್ತನಾದ್ದರಿಂದ ಅವನಿಗೆ ಪ್ರಯಾಣವೇ ಇಲ್ಲ. ಪಾಪಿಗಳಿಗೆ ಈ ಎರಡು ಗತಿಗಳೂ ಇಲ್ಲ.

**ನೈತೇ ಸೃತೀ ಪಾರ್ಥ ಜಾನನ್ ಯೋಗೀ ಮುಹ್ಯತಿ ಕಶ್ಚನ ।**
**ತಸ್ಮಾತ್ಸರ್ವೇಷು ಕಾಲೇಷು ಯೋಗಯುಕ್ತೋ ಭವಾರ್ಜುನ ॥ ೨೭**

ಅರ್ಜುನ, ಈ ಎರಡು ಸೃತಿಗಳನ್ನು–ಎಂದರೆ–ಮಾರ್ಗಗಳನ್ನು ಸರಿಯಾಗಿ ತಿಳಿದುಕೊಂಡಿದ್ದರೆ – ಎಂದರೆ ದೇವಯಾನದಲ್ಲಿ ಹೋದವರಿಗೆ ಸಂಸಾರವಿಲ್ಲವೆಂದೂ ಪಿತೃಯಾಣದಲ್ಲಿ ಹೋದರೆ ಸಂಸಾರ ಉಂಟೆಂದೂ ಮನವರಿಕೆ ಮಾಡಿಕೊಂಡಿದ್ದರೆ, ಯಾವ ಯೋಗಿಯೂ ಮೋಹಕ್ಕೆ ಈಡಾಗುವುದಿಲ್ಲ. ಆದ್ದರಿಂದ ನೀನು ಸಮಾಹಿತನಾಗಿರು.

**ವೇದೇಷು ಯಜ್ಞೇಷು ತಪಸ್ಸು ಚೈವ**
**ದಾನೇಷು ಯತ್ಪುಣ್ಯಫಲಂ ಪ್ರದಿಷ್ಟಮ್ ।**
**ಅತ್ಯೇತಿ ತತ್ಸರ್ವಮಿದಂ ವಿದಿತ್ವಾ**
**ಯೋಗೀ ಪರಂ ಸ್ಥಾನಮುಪೈತಿ ಚಾದ್ಯಮ್ ॥ ೨೮**

**ಇತಿ ಶ್ರೀಮದ್ಭಗವದ್ಗೀತಾಸೂಪನಿಷತ್ಸು ಬ್ರಹ್ಮವಿದ್ಯಾಯಾಂ ಯೋಗಶಾಸ್ತ್ರೇ**
**ಅಕ್ಷರಬ್ರಹ್ಮಯೋಗೋನಾಮ ಅಷ್ಟಮಾಧ್ಯಾಯಃ**

(ನಿನ್ನ ಏಳು ಪ್ರಶ್ನೆಗಳಿಗೆ ಉತ್ತರವಾದ) ಇದನ್ನು ಅರಿತುಕೊಂಡ ಯೋಗಿಯು – ವೇದಾಧ್ಯಯನ, ಯಜ್ಞಾನುಷ್ಠಾನ, ತಪಶ್ಚರ್ಯೆ, ಐಶ್ವರ್ಯದಾನ – ಇವನ್ನು ಚೆನ್ನಾಗಿ ಆಚರಿಸಿದರೆ ಯಾವ ಪುಣ್ಯಫಲವು ಬರುತ್ತದೆಯೆಂದು ಶಾಸ್ತ್ರದಲ್ಲಿ ಉಕ್ತವಾಗಿದೆಯೋ ಅದೆಲ್ಲವನ್ನೂ – ದಾಟಿಹೋಗುವವನು. ಅವನು ಪ್ರಕೃಷ್ಟವಾದ ಸ್ಥಾನವನ್ನು– ಆದಿಕಾರಣವಾದ ಬ್ರಹ್ಮವನ್ನೈದುವನು (ಮುಕ್ತನಾಗುವನು).

**ವಿವರಣೆ :** ಅರ್ಜುನನು ಕೇಳಿದ ಏಳು ಪ್ರಶ್ನೆಗಳು ಇವು – ೧. ಕಿಂತದ್‌ಬ್ರಹ್ಮ ೨. ಕಿಮಧ್ಯಾತ್ಮಮ್ ೩. ಕಿಂಕರ್ಮ ೪. ಕಿಮಧಿದೈವಮ್ ೫. ಕಿಮಧಿಭೂತಮ್ ೬. ಕೋಽಧಿಯಜ್ಞಃ ೭. ಪ್ರಯಾಣಕಾಲೇ ಕಥಂ ಜ್ಞೇಯಃ.

**ಶ್ರೀಮದ್ಭಗವದ್ಗೀತೆಯಲ್ಲಿ ಅಕ್ಷರಬ್ರಹ್ಮಯೋಗವೆಂಬ**
**ಎಂಟನೆಯ ಅಧ್ಯಾಯವು ಸಮಾಪ್ತವಾಯಿತು.**

## ೮ನೆಯ ಅಧ್ಯಾಯದ ಸಾರ

ಬ್ರಹ್ಮ ಅಧ್ಯಾತ್ಮ – ಮೊದಲಾದವು ಯಾವುವೆಂಬ ಅರ್ಜುನನ ಪ್ರಶ್ನೆಗೆ ಶ್ರೀಕೃಷ್ಣನು ಈ ರೀತಿಯಲ್ಲಿ ಉತ್ತರ ಹೇಳಿದನು : ಎಲ್ಲಕ್ಕೂ ಹೆಚ್ಚಿನದಾದ ಅವಿನಾಶಿಯಾದ ಅಕ್ಷರವೇ ಬ್ರಹ್ಮ ಪ್ರತಿಯೊಂದು ದೇಹದಲ್ಲಿಯೂ ಜೀವವಾಗಿ ತೋರಿಕೊಳ್ಳುವ ಬ್ರಹ್ಮದ ಸ್ವಭಾವವೇ ಅಧ್ಯಾತ್ಮ ಪ್ರಾಣಿಗಳ ಉತ್ಪತ್ತಿಗೆ

ಕಾರಣವಾದ ಹೋಮಕ್ರಿಯೆಯೇ ಕರ್ಮ. ನಾಶವಾಗುವ ಪ್ರಾಣಿಗಳೇ ಅಧಿಭೂತ. ಇಂದ್ರಿಯಗಳೆಲ್ಲವಕ್ಕೂ ಚೈತನ್ಯವನ್ನು ಕೊಡುವ ಹಿರಣ್ಯಗರ್ಭನೇ ಅಧಿದೈವ. ದೇಹದಿಂದ ನಡೆಯುವ ಯಜ್ಞಕ್ಕೆ ಅಭಿಮಾನಿಯಾದ ನಾನೇ ಅಧಿಯಜ್ಞ. ಜೀವನಕಾಲದಲ್ಲಿ ಸರ್ವದಾ ನನ್ನನ್ನೇ ಚಿಂತಿಸುತ್ತ ತನ್ನ ಮನಸ್ಸನ್ನು ನನ್ನಲ್ಲಿಯೇ ಇರಿಸಿದ್ದರೆ ಮರಣಕಾಲದಲ್ಲಿಯೂ ನನ್ನ ಸ್ಮರಣೆ ಬರುತ್ತದೆ. ನಿನ್ನ ಏಳು ಪ್ರಶ್ನೆಗಳಿಗೆ ಉತ್ತರ ಹೇಳಿದ್ದೇನೆ.

ಈ ರೀತಿಯಲ್ಲಿ ಯಾವಾಗಲೂ ನನ್ನ ಚಿಂತನೆಯನ್ನು ಮಾಡುತ್ತಿರುವ ಯೋಗಿಯು ಕ್ರಮಕ್ರಮವಾಗಿ ಮೇಲುಮೇಲಿನ ಮೆಟ್ಟಿಲುಗಳನ್ನು ಏರುತ್ತ ಹೋಗುತ್ತಾನೆ. ಓಂಕಾರವೆಂಬ ಪ್ರಣವದ ಮೂಲಕ ನನ್ನನ್ನು ಧ್ಯಾನ ಮಾಡುವುದು ಯುಕ್ತವಾದದ್ದು. ಹೀಗೆ ನನ್ನನ್ನು ಧ್ಯಾನಿಸುತ್ತಿರುವ ಯೋಗಿಗೆ ಉತ್ತಮ ಗತಿಯಾಗುತ್ತದೆ. ನನ್ನನ್ನು ಪಡೆದವರಿಗೆ ಮತ್ತೆ ಸಂಸಾರವು ತಟ್ಟುವುದಿಲ್ಲ. ಮಿಕ್ಕವರು ಯಾವ ಪುಣ್ಯಗತಿಯನ್ನೇ ಪಡೆಯಲಿ, ಅವರು ಸಂಸಾರಕ್ಕೆ ಮರಳಬೇಕಾಗುತ್ತದೆ. ಈ ಲೋಕಗಳೆಲ್ಲವೂ ಕಾಲಕ್ಕೆ ಅಧೀನವಾಗಿದೆ. ಬ್ರಹ್ಮನಿಗೆ ಹಗಲಾದರೆ ಎಲ್ಲ ಪ್ರಾಣಿಗಳೂ ಸೃಷ್ಟಿಯಾಗಿ ಹೊರಬರುತ್ತವೆ. ಅವನಿಗೆ ರಾತ್ರಿಯಾದರೆ ಅವನಲ್ಲಿಯೇ ಅಡಗಿಕೊಳ್ಳುತ್ತವೆ. ಅವುಗಳಿಗೆ ಸಂಸಾರದಿಂದ ಬಿಡುಗಡೆಯಿಲ್ಲ. ನಾನು ಮಾತ್ರ ಕಾಲಕ್ಕೆ ಕಟ್ಟುಬಿದ್ದವನಲ್ಲ.

ಬ್ರಹ್ಮನ ನಿದ್ರಾವಸ್ಥೆಗೆ ಅವ್ಯಕ್ತವೆಂದೂ ಹೆಸರಿದೆ. ಅವ್ಯಕ್ತಕ್ಕಿಂತಲೂ ಅವ್ಯಕ್ತನಾದ ಅಕ್ಷರನೇ ಪರಮಾತ್ಮ ಅವನು ಕಾಲಾತೀತನು. ಕರ್ಮಿಗಳು ಕೃಷ್ಣಮಾರ್ಗದಲ್ಲಿ ಚಂದ್ರಲೋಕಪರ್ಯಂತ ಹೋಗಿ ತಮ್ಮ ತಮ್ಮ ಕರ್ಮಫಲಗಳನ್ನು ಬೇರೆ ಬೇರೆ ಲೋಕಗಳಲ್ಲಿ ಅನುಭವಿಸಿ ಮತ್ತೆ ಸಂಸಾರಕ್ಕೆ ಮರಳುತ್ತಾರೆ. ಭಕ್ತಿಮಾರ್ಗದವರು – ಎಂದರೆ – ಪರಮಾತ್ಮನ ನಿತ್ಯಭಕ್ತರು ಶುಕ್ಲಮಾರ್ಗದಿಂದ ಕ್ರಮಮುಕ್ತಿಯನ್ನು ಪಡೆಯುತ್ತಾರೆ. ಕ್ರಮವಾಗಿ ಆತ್ಮಜ್ಞಾನವನ್ನು ಪಡೆದು ಮುಕ್ತರೇ ಆಗಿಬಿಡುತ್ತಾರೆ. ಅವರು ಸಂಸಾರಕ್ಕೆ ಮರಳುವುದಿಲ್ಲ.

ವೇದಾಧ್ಯಯನ, ಯಜ್ಞ, ದಾನ, ತಪಸ್ಸು – ಇವೆಲ್ಲ ಕರ್ಮಗಳೇ. ಇವನ್ನು ಎಷ್ಟು ಉತ್ತಮವಾಗಿ ನೆರವೇರಿಸಿದರೂ ಅಂತ್ಯಕಾಲದಲ್ಲಿ ನನ್ನನ್ನು ಸ್ಮರಿಸುವುದರಿಂದ ದೊರೆಯುವ ಫಲವು ಆ ಕರ್ಮಗಳಿಂದ ದೊರೆಯದು. ಆದ್ದರಿಂದ ನೀನು ಈ ಬಗೆಯಲ್ಲಿ ಉಪಾಸನೆಯನ್ನು ಮಾಡಿ ಯೋಗಿಯಾಗುವುದಕ್ಕೆ ಪ್ರಯತ್ನ ಮಾಡು. ನನ್ನ ಪರಮಭಕ್ತನೇ ನಿಜವಾದ ಯೋಗಿ.

## ಅಧ್ಯಾಯ ೯

# ರಾಜವಿದ್ಯಾರಾಜಗುಹ್ಯಯೋಗ

ಎಂಟನೆಯ ಅಧ್ಯಾಯದಲ್ಲಿ ಕ್ರಮಮುಕ್ತಿಯನ್ನು ಎಂದರೆ ಕಾಲಾಂತರದಲ್ಲಿ ಮುಕ್ತಿಯನ್ನು ಪಡೆಯಲು ಸಾಧನವಾದ ಓಂಕಾರಜಪ – ಮುಂತಾದ ಸಗುಣ ಯೋಗವನ್ನೂ ದೇವಯಾನಮಾರ್ಗವನ್ನೂ ತಿಳಿಸಿದ್ದಾಯಿತು. ಹಾಗಾದರೆ ಈ ಪ್ರಕಾರದಿಂದ ಮುಕ್ತಿಯು ದೊರಕುವುದೇ ಹೊರತು ಬೇರೆ ರೀತಿ ಇರಲಾರದೆ ? ಎಂಬ ಶಂಕೆಯನ್ನು ನೀಗುವುದಕ್ಕಾಗಿ ಈ ಅಧ್ಯಾಯ ಹೊರಟಿದೆ.

**ಶ್ರೀಭಗವಾನುವಾಚ –**

**ಇದಂ ತು ತೇ ಗುಹ್ಯತಮಂ ಪ್ರವಕ್ಷ್ಯಾಮ್ಯನಸೂಯವೇ ।**
**ಜ್ಞಾನಂ ವಿಜ್ಞಾನಸಹಿತಂ ಯಜ್ಜ್ಞಾತ್ವಾ ಮೋಕ್ಷ್ಯಸೇಽಶುಭಾತ್ ॥ ೧**

**ಭಗವಂತನು ಇಂತೆಂದನು** – ಅರ್ಜುನ, ನೀನು ಅಸೂಯಾರಹಿತನಾಗಿರುವುದರಿಂದ ಗುಹ್ಯದಲ್ಲಿ ಗುಹ್ಯವಾದ ಈ ವಿಜ್ಞಾನಸಹಿತ ಜ್ಞಾನವನ್ನು ನಿನಗೆ ಹೇಳುವೆನು. ಇದನ್ನು ತಿಳಿದುಕೊಂಡರೆ ಅಶುಭವಾದ ಸಂಸಾರಬಂಧನದಿಂದ ಬಿಡುಗಡೆ ಹೊಂದುವೆ.

**ವಿವರಣೆ :** ಅಸೂಯಾರಹಿತ = ದೋಷದೃಷ್ಟಿ ಇಲ್ಲದವನು. ವಿಜ್ಞಾನ = ಅನುಭವ. ಆತ್ಮೈವೇದಂ ಸರ್ವಮ್ (ಛಾಂ. ೭–೨೫–೨), ಏಕಮೇವಾದ್ವಿತೀಯಮ್ (ಛಾಂ. ೬–೨–೧), ವಾಸುದೇವಃ ಸರ್ವಮ್ (ಗೀತಾ ೭–೧೯)– ಇತ್ಯಾದಿ ವಚನಗಳಿಂದ ಪ್ರತಿಪಾದಿತವಾದ ಅದ್ವೈತಾತ್ಮಜ್ಞಾನವು ಸಾಕ್ಷಾನ್ಮುಕ್ತಿಸಾಧನ. ಈ ಜ್ಞಾನಕ್ಕೆ ಸಮ್ಯಗ್ದರ್ಶನವೆಂದು ಹೆಸರುಂಟು.

**ರಾಜವಿದ್ಯಾ ರಾಜಗುಹ್ಯಂ ಪವಿತ್ರಮಿದಮುತ್ತಮಮ್ ।**
**ಪ್ರತ್ಯಕ್ಷಾವಗಮಂ ಧರ್ಮ್ಯಂ ಸುಸುಖಂ ಕರ್ತುಮವ್ಯಯಮ್ ॥ ೨**

ಈ ಬ್ರಹ್ಮವಿದ್ಯೆಯು ಎಲ್ಲ ವಿದ್ಯೆಗಳ ರಾಜ. ಗೋಪ್ಯವಸ್ತುಗಳಿಗೆ ರಾಜ (ಉತ್ತಮಾಧಿಕಾರಿಗೆ ಮಾತ್ರ ತಿಳಿಸಬೇಕಾದದ್ದು). ಪರಮಪಾವನ (ಜನ್ಮಾಂತರದ ಕರ್ಮಶೇಷಗಳನ್ನೆಲ್ಲ ಕ್ಷಣದಲ್ಲಿ ಸುಟ್ಟು ನಾಶಮಾಡತಕ್ಕದ್ದು). ಅಲ್ಲದೆ ಪ್ರತ್ಯಕ್ಷವಾಗಿ ಅನುಭವಕ್ಕೆ ಬರುವಂತಹುದು. (ಧರ್ಮವಿರುದ್ಧವಾಗದೆ) ಧರ್ಮಪೂರ್ವಕವೇ ಲಭ್ಯವಾದದ್ದು. ಮಾಡುವುದು (ಸಂಪಾದಿಸುವುದು)

ಸುಲಭ. ಅಲ್ಲದೆ ಈ ಜ್ಞಾನವು ಶಾಶ್ವತವಾದ ಫಲವನ್ನು ನೀಡತಕ್ಕದ್ದಾಗಿದೆ.

**ವಿವರಣೆ :** ವಿದ್ಯಾನಾಂ ರಾಜಾ = ರಾಜವಿದ್ಯಾ, ಗುಹ್ಯಾನಾಂ ರಾಜಾ = ರಾಜಗುಹ್ಯಮ್ ಎಂದು ವಿಗ್ರಹವಾಕ್ಯ. 'ರಾಜದಂತಾದಿಷು ಪರಮ್' ಎಂಬ ಪಾಣಿನಿಸೂತ್ರದಿಂದ ವಿದ್ಯಾ, ಗುಹ್ಯ ಶಬ್ದಗಳಿಗೆ ಪರನಿಪಾತ ಬಂದಿದೆ.

**ಅಶ್ರದ್ದಧಾನಾಃ ಪುರುಷಾ ಧರ್ಮಸ್ಯಾಸ್ಯ ಪರಂತಪ ।**
**ಅಪ್ರಾಪ್ಯ ಮಾಂ ನಿವರ್ತಂತೇ ಮೃತ್ಯುಸಂಸಾರವರ್ತ್ಮನಿ ॥ ೩**

ಪರಂತಪ – ಅರ್ಜುನ, ಆತ್ಮಜ್ಞಾನವೆಂಬ ಈ ಧರ್ಮದಲ್ಲಿ ಯಾರಿಗೆ ಶ್ರದ್ಧೆಯಿಲ್ಲವೋ ಅವರು ನನ್ನನ್ನು ಪಡೆಯದೆ – ನನ್ನನ್ನು ಪಡೆಯುವ ಶಂಕೆಯೇ ಇಲ್ಲವಾದ್ದರಿಂದ ಜ್ಞಾನಸಾಧನವಾದ ಭಕ್ತಿಯನ್ನು ಕೂಡ ಪಡೆಯದೆ – ಮೃತ್ಯುವೇ ಕಾದುನಿಂತಿರುವ ಸಂಸಾರಮಾರ್ಗಕ್ಕೆ ಹಿಂದಿರುಗಿ ಬರುತ್ತಾರೆ.

**ಮಯಾ ತತಮಿದಂ ಸರ್ವಂ ಜಗದವ್ಯಕ್ತಮೂರ್ತಿನಾ ।**
**ಮತ್‌ಸ್ಥಾನಿ ಸರ್ವಭೂತಾನಿ ನ ಚಾಹಂ ತೇಷ್ವವಸ್ಥಿತಃ ॥ ೪**

(ಇಂದ್ರಿಯಗಳಿಗೆ ಗೋಚರವಾಗದಂತೆ) ಅವ್ಯಕ್ತಸ್ವರೂಪನಾದ ನಾನು ಈ ಸಮಸ್ತ ಜಗತ್ತನ್ನೂ ವ್ಯಾಪಿಸಿಕೊಂಡಿರುವೆನು. ಬ್ರಹ್ಮಾದಿಸ್ತಂಬಪರ್ಯಂತವಾದ ಸಮಸ್ತ ಭೂತಗಳೂ ನನ್ನಲ್ಲಿವೆ (ನನ್ನಲ್ಲಿಯೇ ಅವು ತೋರಿಕೊಳ್ಳುತ್ತವೆ). ಆದರೆ ನಾನು ಆ ಭೂತವಸ್ತುಗಳಲ್ಲಿಲ್ಲ. (ಕೊಡದಲ್ಲಿರುವ ನೀರಿನಂತೆ ನಾನು ಅವುಗಳಿಗೆ ಅಂಟಿಕೊಂಡಿಲ್ಲ.)

**ನ ಚ ಮತ್‌ಸ್ಥಾನಿ ಭೂತಾನಿ ಪಶ್ಯ ಮೇ ಯೋಗಮೈಶ್ವರಮ್ ।**
**ಭೂತಭೃನ್ನ ಚ ಭೂತಸ್ಥೋ ಮಮಾತ್ಮಾ ಭೂತಭಾವನಃ ॥ ೫**

ಮತ್ತೆ ಈ ಭೂತವಸ್ತುಗಳಾದರೂ ನನ್ನಲ್ಲಿಲ್ಲ! ನೋಡು ನನ್ನ ಈಶ್ವರೀಯ ಘಟನೆಯನ್ನು! ಭೂತಗಳನ್ನು ಉತ್ಪಾದಿಸಿ ವರ್ಧಿಸುವ ನನ್ನ ಆತ್ಮವು ಈ ಭೂತವಸ್ತುಗಳನ್ನು ಧರಿಸಿದೆಯಾದರೂ ಆ ಭೂತಗಳಲ್ಲಿ ಇರುವುದಿಲ್ಲ!

**ವಿವರಣೆ :** ಪರಮಾತ್ಮನು ವಾಸ್ತವದಲ್ಲಿ ನಿರ್ಗುಣನೂ ಅಮೂರ್ತನೂ ಆದರೂ ಮಾಯೆಯಿಂದ ಸಗುಣನೂ ಮೂರ್ತಿಧಾರಿಯೂ ಆಗುತ್ತಾನೆ. ಇದನ್ನವಲಂಬಿಸಿ ಮೇಲ್ಕಂಡ ವಿರೋಧಾಭಾಸವಚನಗಳು ಬಂದಿವೆ. ರಜ್ಜುಸರ್ಪ ಸ್ಥಳದಲ್ಲಿ ಇದು ಸ್ಪಷ್ಟವಾಗುತ್ತದೆ. ಹಾವಾಗಿ ತೋರುವುದಕ್ಕೆ ಹಗ್ಗವು ಕಾರಣ. ಹಗ್ಗದಲ್ಲಿ ಹಾವು ಇದೆ – ಹಾವು ಇಲ್ಲ; ಹಾವಿನಲ್ಲಿ ಹಗ್ಗ ಇದೆ – ಹಗ್ಗವಿಲ್ಲ;

ಹಾವಿಗೆ ಹಗ್ಗ ಕಾರಣ – ಹಗ್ಗವಿಲ್ಲದೆ ಹಾವಿರುವುದಿಲ್ಲ ಎಂದೆಲ್ಲ ಹೇಳಲು ಬರುತ್ತದೆ. ಮಾಯಾಸೃಷ್ಟಿಯನ್ನೊಪ್ಪಿದರೆ ಮಾತ್ರ ಈ ಎರಡು ಶ್ಲೋಕಗಳು ಹೊಂದಿಕೊಳ್ಳುತ್ತವೆ. ಈ ಬಗೆಯ ಸೃಷ್ಟಿಯೇ ಈಶ್ವರನ ವಿಚಿತ್ರ ಘಟನೆ.

ಈ ಶ್ಲೋಕದಲ್ಲಿ 'ನನ್ನ ಆತ್ಮ' ಎಂದು ಹೇಳಿದ್ದು ಲೋಕಬುದ್ಧಿಯನ್ನನುಸರಿಸಿ. ಈಶ್ವರನಿಗೆ ಇನ್ನೊಬ್ಬ ಆತ್ಮನಿಲ್ಲ. 'ನನ್ನ ಆತ್ಮ' ಎಂದರೆ ನಾನೇ ಎಂದರ್ಥ.

**ಯಥಾಕಾಶಸ್ಥಿತೋ ನಿತ್ಯಂ ವಾಯುಃ ಸರ್ವತ್ರಗೋ ಮಹಾನ್ ।**
**ತಥಾ ಸರ್ವಾಣಿ ಭೂತಾನಿ ಮತ್ಸ್ಥಾನೀತ್ಯುಪಧಾರಯ ॥ ೬**

ಸದಾ ಸರ್ವತ್ರ ಸಂಚರಿಸುವ ದೊಡ್ಡ ಪರಿಮಾಣದ ವಾಯುವು ಹೇಗೆ ಆಕಾಶದಲ್ಲಿ (ಸಂಶ್ಲೇಷವಿಲ್ಲದೆ) ಇರುತ್ತದೆಯೋ ಹಾಗೆ ಸಮಸ್ತಭೂತಗಳೂ (ಆಕಾಶದಂತೆ ಸರ್ವಗತನಾಗಿರುವ) ನನ್ನಲ್ಲಿ (ಯಾವ ಸಂಬಂಧವೂ ಇಲ್ಲದೆ) ಇವೆಯೆಂದು ನಿಶ್ಚಯವಾಗಿ ತಿಳಿದುಕೊ.

**ಸರ್ವಭೂತಾನಿ ಕೌಂತೇಯ ಪ್ರಕೃತಿಂ ಯಾಂತಿ ಮಾಮಿಕಾಮ್ ।**
**ಕಲ್ಪಕ್ಷಯೇ ಪುನಸ್ತಾನಿ ಕಲ್ಪಾದೌ ವಿಸೃಜಾಮ್ಯಹಮ್ ॥ ೭**

ಕೌಂತೇಯ, ಕಲ್ಪವು ಕ್ಷಯಿಸಿದಾಗ ಸರ್ವಭೂತಗಳೂ ನನ್ನ ತ್ರಿಗುಣಾತ್ಮಕವಾದ ಅಪರಾಪ್ರಕೃತಿಯನ್ನು ಸೇರಿಕೊಳ್ಳುತ್ತವೆ. ಮತ್ತೆ ಕಲ್ಪಾದಿಯಲ್ಲಿ ಅವುಗಳನ್ನು ಹಿಂದಿನಂತೆ ಸೃಷ್ಟಿಸುತ್ತೇನೆ.

**ವಿವರಣೆ :**

ಅ. ೭–೪, ೫ನೆಯ ಶ್ಲೋಕಗಳನ್ನು ನೋಡಿ.

**ಪ್ರಕೃತಿಂ ಸ್ವಾಮವಷ್ಟಭ್ಯ ವಿಸೃಜಾಮಿ ಪುನಃಪುನಃ ।**
**ಭೂತಗ್ರಾಮಮಿಮಂ ಕೃತ್ಸ್ನಮವಶಂ ಪ್ರಕೃತೇರ್ವಶಾತ್ ॥ ೮**

ನನ್ನ (ಅವಿದ್ಯಾಕಲ್ಪಿತವಾದ) ಪ್ರಕೃತಿಯನ್ನು ಆಶ್ರಯಿಸಿ – ಪ್ರಕೃತಿಯ ಮೂಲಕವಾಗಿ, ಪ್ರಕೃತಿಯ ವಶದಿಂದ ಪರತಂತ್ರವಾಗಿರುವ ಈ ಎಲ್ಲ ಭೂತಗ್ರಾಮವನ್ನೂ ಮತ್ತೆ ಮತ್ತೆ ಸೃಷ್ಟಿಮಾಡುತ್ತಿದ್ದೇನೆ.

**ನ ಚ ಮಾಂ ತಾನಿ ಕರ್ಮಾಣಿ ನಿಬಧ್ನಂತಿ ಧನಂಜಯ ।**
**ಉದಾಸೀನವದಾಸೀನಮಸಕ್ತಂ ತೇಷು ಕರ್ಮಸು ॥ ೯**

ಆದರೆ, ಧನಂಜಯ, ಆ ಕರ್ಮಗಳಲ್ಲಿ ಉದಾಸೀನನಂತೆ ಫಲಾಸಂಗರಹಿತನಾಗಿ (ಅಭಿಮಾನವರ್ಜಿತನಾದ) ನನ್ನನ್ನು ಆ ಕರ್ಮಗಳು ಕಟ್ಟಿಹಾಕುವುದಿಲ್ಲ.

**ವಿವರಣೆ :** ತಾರತಮ್ಯದಿಂದ ಕೂಡಿದ ಈ ವಿಷಮಸೃಷ್ಟಿಯನ್ನು ನಿರ್ಮಿಸಿದ್ದಕ್ಕಾಗಿ ಈಶ್ವರನಿಗೆ ಪುಣ್ಯಾಪಾಪಗಳು ಏಕೆ ಗಂಟುಬೀಳುವುದಿಲ್ಲವೆಂದರೆ, ಪಾಪಪುಣ್ಯಗಳಿಗೆ ಕರ್ತೃತ್ವಭಾವನೆಯೂ ಫಲಾಸಕ್ತಿಯೂ ಕಾರಣ. ಅಭಿಮಾನವೆಂದರೆ ಕರ್ತೃತ್ವಭಾವನೆ. ಅವು ಇಲ್ಲದ್ದರಿಂದ ಈಶ್ವರನಿಗೆ ಪಾಪಪುಣ್ಯಗಳ ಸಂಬಂಧವಿಲ್ಲ.

**ಮಯಾಧ್ಯಕ್ಷೇಣ ಪ್ರಕೃತಿಃ ಸೂಯತೇ ಸಚರಾಚರಮ್ ।**
**ಹೇತುನಾನೇನ ಕೌಂತೇಯ ಜಗದ್ವಿಪರಿವರ್ತತೇ ॥ ೧೦**

ಅಧ್ಯಕ್ಷನಾದ – ಸಾಕ್ಷಿಮಾತ್ರಸ್ವರೂಪನಾದ ನನ್ನಿಂದ (ತ್ರಿಗುಣಾತ್ಮಕವಾದ ಅವಿದ್ಯೆಯೆಂಬ) ಈ ಪ್ರಕೃತಿಯು ಚರಾಚರಾತ್ಮಕವಾದ ಈ ಪ್ರಪಂಚವನ್ನು ಹಡೆಯುತ್ತಿರುವುದು. ನಾನು ಅಧ್ಯಕ್ಷನಾದ ಕಾರಣದಿಂದಲೇ, ಅರ್ಜುನ, ಈ ಜಗತ್ತು ಹೀಗೆ ಪರಿವರ್ತನೆಗೊಳ್ಳುತ್ತಿರುವುದು.

**ಅವಜಾನಂತಿ ಮಾಂ ಮೂಢಾಃ ಮಾನುಷೀಂ ತನುಮಾಶ್ರಿತಮ್ ।**
**ಪರಂ ಭಾವಮಜಾನಂತೋ ಮಮ ಭೂತಮಹೇಶ್ವರಮ್ ॥ ೧೧**

ಸರ್ವಭೂತಮಹೇಶ್ವರನೆಂಬ ನನ್ನ ಪರಮಾತ್ಮತತ್ತ್ವವನ್ನರಿಯದ ಮೂಢರು ಮನುಷ್ಯದೇಹವನ್ನು ಧರಿಸಿದ ನನ್ನನ್ನು ಅಸಡ್ಡೆಮಾಡುತ್ತಿದ್ದಾರೆ.

**ವಿವರಣೆ :** ಇವನು ವಸುದೇವನ ಮಗ, ಯಾದವ, ಗೊಲ್ಲ – ಎಂದು ಮೂಢರು ನನ್ನನ್ನು ಅವಮಾನಿಸುತ್ತಿದ್ದಾರೆ.

**ಮೋಘಾಶಾ ಮೋಘಕರ್ಮಾಣೋ ಮೋಘಜ್ಞಾನಾ ವಿಚೇತಸಃ ।**
**ರಾಕ್ಷಸೀಮಾಸುರೀಂ ಚೈವ ಪ್ರಕೃತಿಂ ಮೋಹಿನೀಂ ಶ್ರಿತಾಃ ॥ ೧೨**

ಅಂತಹ ಮೂಢರ ಆಸೆಗಳೆಲ್ಲವೂ ವ್ಯರ್ಥ. ಅವರು ಮಾಡುವ ಕರ್ಮಗಳು ನಿಷ್ಫಲ. ಅವರ ಜ್ಞಾನ ಬಂಜೆಯಾದದ್ದು. ಅವರು ವಿವೇಕವನ್ನು ಕಳೆದುಕೊಂಡವರು. ರಾಕ್ಷಸರಿಗೂ ಅಸುರರಿಗೂ ಯೋಗ್ಯವಾದ ಮೋಹಜನ್ಯ ಸ್ವಭಾವವನ್ನು ಅವರು ಪಡೆದಿದ್ದಾರೆ.

**ವಿವರಣೆ :** ತಮ್ಮ ಆತ್ಮನೇ ಆದ ಈಶ್ವರನನ್ನು ತಿರಸ್ಕರಿಸಿ ಈಶ್ವರನೇ ಇಲ್ಲವೆಂಬ ನಾಸ್ತಿಕರ ಪ್ರಯತ್ನಗಳೆಲ್ಲ ವ್ಯರ್ಥ. ಅವರ ಜನ್ಮವೇ ವ್ಯರ್ಥವೆಂದು ಅಭಿಪ್ರಾಯ.

ಅವರ ದುಷ್ಕರ್ಮದಿಂದ ಕೆಟ್ಟ ಫಲವು ಮಾತ್ರ ಆಗದೇ ಇರದು. ರಾಕ್ಷಸರು

ಬೇರೆ, ಅಸುರರು ಬೇರೆ. ಉಭಯರಲ್ಲಿಯೂ ಇರುವ ರಾಜಸತಾಮಸ ಪ್ರಕೃತಿಯು ಇಲ್ಲಿ ವಿವಕ್ಷಿತ.

**ಮಹಾತ್ಮಾನಸ್ತು ಮಾಂ ಪಾರ್ಥ ದೈವೀಂ ಪ್ರಕೃತಿಮಾಶ್ರಿತಾಃ ।**
**ಭಜಂತ್ಯನನ್ಯಮನಸೋ ಜ್ಞಾತ್ವಾ ಭೂತಾದಿಮವ್ಯಯಮ್ ॥ ೧೩**

ಆದರೆ, ಅರ್ಜುನ, ದೈವಸ್ವಭಾವವಾದ ಶಮದಮಾದಿಗಳನ್ನು ಪಡೆದ ಮಹಾತ್ಮರು, ಸಮಸ್ತಭೂತಗಳಿಗೆ ಆದಿಕಾರಣನೂ ಅವ್ಯಯನೂ ಆದ ನನ್ನನ್ನು ಅನನ್ಯಭಾವದಿಂದ ಭಜಿಸುವರು.

**ಸತತಂ ಕೀರ್ತಯಂತೋ ಮಾಂ ಯತಂತಶ್ಚ ದೃಢವ್ರತಾಃ ।**
**ನಮಸ್ಯಂತಶ್ಚ ಮಾಂ ಭಕ್ತ್ಯಾ ನಿತ್ಯಯುಕ್ತಾ ಉಪಾಸತೇ ॥ ೧೪**

ಆ ಮಹಾತ್ಮರು ಪರಮೇಶ್ವರನಾದ ನನ್ನನ್ನು ಸದಾ ಕೀರ್ತನೆ ಮಾಡುತ್ತಲೂ (ಇಂದ್ರಿಯನಿಗ್ರಹಾದಿ ಧರ್ಮಗಳಿಂದ) ನನ್ನನ್ನು ಪಡೆಯಲು ಯತ್ನಿಸುತ್ತಲೂ ದೃಢವ್ರತರಾಗಿ ನನ್ನನ್ನು ಭಕ್ತಿಯಿಂದ ನಮಸ್ಕರಿಸುತ್ತಲೂ ನನ್ನಲ್ಲಿಯೇ ನಿತ್ಯವೂ ನೆಟ್ಟಮನಸ್ಸುಳ್ಳವರಾಗಿಯೂ ಉಪಾಸನೆ ಮಾಡುತ್ತಾರೆ.

**ಜ್ಞಾನಯಜ್ಞೇನ ಚಾಪ್ಯನ್ಯೇ ಯಜಂತೋ ಮಾಮುಪಾಸತೇ ।**
**ಏಕತ್ವೇನ ಪೃಥಕ್ತ್ವೇನ ಬಹುಧಾ ವಿಶ್ವತೋಮುಖಮ್ ॥ ೧೫**

ಕೆಲವರು ಜ್ಞಾನವೆಂಬ ಯಜ್ಞದಿಂದ ನನ್ನನ್ನು ಪೂಜಿಸುತ್ತ (ಮಿಕ್ಕ ಉಪಾಸನೆಯನ್ನು ಬಿಟ್ಟು) ಉಪಾಸನೆ ಮಾಡುತ್ತಾರೆ. ಕೆಲವರು ಏಕತ್ವದಿಂದಲೂ ಕೆಲವರು ಪೃಥಕ್ತ್ವದಿಂದಲೂ ಕೆಲವರು ವಿಶ್ವತೋಮುಖನಾದ ಪರಮಾತ್ಮನೇ ಬಹುಪ್ರಕಾರವಾಗಿ ಇದ್ದಾನೆಂಬ ಭಾವನೆಯಿಂದಲೂ ಉಪಾಸನೆ ಮಾಡುತ್ತಾರೆ.

**ವಿವರಣೆ :** ಉಪಾಸಕರ ಜ್ಞಾನವು ಈ ಮೂರು ವಿಧವಾಗಿರಬಹುದು –

೧. ಏಕತ್ವೇನ = ಪರಮಾತ್ಮನೊಬ್ಬನೇ ಸತ್ಯವೆಂಬ ಜ್ಞಾನವನ್ನು ಸತತವಾಗಿ ಮುಂದುವರಿಸುತ್ತ ಮಾಡುವ ಆತ್ಮಚಿಂತನವು ಏಕತ್ವೋಪಾಸನೆ.

೨. ಪೃಥಕ್ತ್ವೇನ = ಸೂರ್ಯಚಂದ್ರಾದಿಗಳ ರೂಪದಿಂದ ಪರಮಾತ್ಮನೇ ತೋರುತ್ತಿದ್ದಾನೆ. ಬೇರೆಬೇರೆಯಾಗಿ ಒಬ್ಬನನ್ನೇ ನೋಡುತ್ತಿದ್ದೇನೆ ಎಂಬ ಭಾವನೆಯಿಂದ ಉಪಾಸನೆ.

೩. ಬಹುಧಾ = ಜಗತ್ತೆಲ್ಲವೂ ಪರಮಾತ್ಮನೇ ಎಂದು ವಿಶ್ವರೂಪೋಪಾಸನೆ.

ಈ ಪ್ರಕಾರಗಳಲ್ಲಿ ದ್ವೈತದ ಕಲ್ಪನೆಯೇನೂ ಇಲ್ಲ.

**ಅಹಂ ಕ್ರತುರಹಂ ಯಜ್ಞಃ ಸ್ವಧಾಽಹಮಹಮೌಷಧಮ್ ।**
**ಮಂತ್ರೋಽಹಮಹಮೇವಾಜ್ಯಮಹಮಗ್ನಿರಹಂ ಹುತಮ್ ॥ ೧೬**

ನಾನೇ ಕ್ರತು, ನಾನೇ ಯಜ್ಞ, ನಾನೇ ಸ್ವಧಾಕಾರ, ನಾನೇ ಔಷಧ, ನಾನೇ ಮಂತ್ರ, ನಾನೇ ಘೃತ, ನಾನೇ ಅಗ್ನಿ, ನಾನೇ ಹವನಕ್ರಿಯೆ.
(ಬಹುಪ್ರಕಾರಗಳಲ್ಲಿರತಕ್ಕವನು ನಾನೇ.)

**ವಿವರಣೆ :** ಕ್ರತು = ಶ್ರುತಿವಿಹಿತವಾದ ಅಗ್ನಿಷ್ಟೋಮಾದಿಯಾಗ. ಯಜ್ಞ = ಸ್ಮೃತಿವಿಹಿತವಾದ ವೈಶ್ವದೇವಾದಿ ಯಜ್ಞ. ಸ್ವಧಾ = ಪಿತೃಗಳಿಗೆ ಕೊಡತಕ್ಕ ಪಿಂಡ ತರ್ಪಣಾದಿ. ಆಜ್ಯ = ಘೃತ ಮತ್ತು ಹವಿಸ್ಸು.

**ಪಿತಾಹಮಸ್ಯ ಜಗತೋ ಮಾತಾ ಧಾತಾ ಪಿತಾಮಹಃ ।**
**ವೇದ್ಯಂ ಪವಿತ್ರಮೋಂಕಾರಃ ಋಕ್ ಸಾಮ ಯಜುರೇವ ಚ ॥ ೧೭**

ನಾನು ಈ ಜಗತ್ತಿಗೆ ತಂದೆ, ತಾಯಿ, ಕರ್ಮಫಲವಿಧಾತ ಮತ್ತು ಅಜ್ಜ. ನಾನೇ ವೇದ್ಯವಾದ ಪರಮಾರ್ಥ, ಪಾವನವಾದ ವಸ್ತು, ಓಂಕಾರ, ನಾನೇ ಋಗ್ವೇದ, ಯಜುರ್ವೇದ ಮತ್ತು ಸಾಮವೇದ.

**ವಿವರಣೆ :** ತಂದೆ ಎಂದರೆ ಜಗತ್ತಿಗೆ ನಿಮಿತ್ತಕಾರಣ, ತಾಯಿಯೆಂದರೆ ಉಪಾದಾನಕಾರಣ, ಅಜ್ಜ ಎಂದರೆ ಕಾರಣವನ್ನು ಬಯಸದೆ ಸ್ವತಃಸಿದ್ಧವಾದ ಮೂಲಕಾರಣ.

**ಗತಿರ್ಭರ್ತಾ ಪ್ರಭುಃ ಸಾಕ್ಷೀ ನಿವಾಸಃ ಶರಣಂ ಸುಹೃತ್ ।**
**ಪ್ರಭವಃ ಪ್ರಲಯಃ ಸ್ಥಾನಂ ನಿಧಾನಂ ಬೀಜಮವ್ಯಯಮ್ ॥ ೧೮**

ನಾನೇ ಈ ಜಗತ್ತಿಗೆ ಗತಿ, ಭರ್ತ, ಪ್ರಭು, ಸಾಕ್ಷಿ, ನಿವಾಸ, ಶರಣಾಗತರಕ್ಷಕ, ಸುಹೃತ್ ಆಗಿದ್ದೇನೆ. ನಾನೇ ಈ ಜಗತ್ತಿನ ಉತ್ಪತ್ತಿಕಾರಣ, ಪ್ರಳಯಕಾರಣ, ಜಗತ್ತಿಗೆ ನಿಲ್ಲಲು ಆಸರೆ, ನಿಕ್ಷೇಪ, ಮತ್ತೆ ಮತ್ತೆ ಹುಟ್ಟುವುದಕ್ಕೆ ಬೇಕಾದ ನಿತ್ಯ ಕಾರಣ ಬೀಜ.

**ವಿವರಣೆ :** ಗತಿ = ಕರ್ಮಫಲ, ಭರ್ತಾ = ಪೋಷಕ, ಸುಹೃತ್ = ಪ್ರತ್ಯುಪಕಾರವನ್ನು ಬಯಸದೆ ಸಹಾಯ ಮಾಡತಕ್ಕವನು. ನಿಧಾನ = ಕಾಲಾಂತರದಲ್ಲಿ ಉಪಯೋಗಿಸಲು ಬೇಕಾದ ವಸ್ತು (Deposit); ಇದೇ ನಿಕ್ಷೇಪ.

**ತಪಾಮ್ಯಹಮಹಂ ವರ್ಷಂ ನಿಗೃಹ್ಣಾಮ್ಯುತ್ಸೃಜಾಮಿ ಚ ।**
**ಅಮೃತಂ ಚೈವ ಮೃತ್ಯುಶ್ಚ ಸದಸಚ್ಚಾಹಮರ್ಜುನ ॥ ೧೯**

ಅರ್ಜುನ, ನಾನು (ಸೂರ್ಯನಾಗಿ ಕಿರಣಗಳಿಂದ) ತಾಪವನ್ನುಂಟು ಮಾಡುತ್ತೇನೆ. ಅಂತೆಯೇ ಮಳೆಯನ್ನು ಸುರಿಸುತ್ತೇನೆ. ಮತ್ತೆ ಮಳೆಯನ್ನು ನಿಗ್ರಹಿಸುತ್ತೇನೆ. (ದೇವತೆಗಳಿಗೆ) ಅಮೃತವಾಗಿದ್ದೇನೆ. ಮರ್ತ್ಯರಿಗೆ ಮೃತ್ಯುವಾಗಿದ್ದೇನೆ. ಸತ್, ಅಸತ್ – ಎರಡೂ ನಾನೇ.

**ವಿವರಣೆ :** ಯಾವುದನ್ನು ಅವಲಂಬಿಸಿಯೇ ಜಗತ್ತು ಕಾಣಿಸುತ್ತದೆಯೋ ಅದು ಸತ್. ಅದೇ ಬ್ರಹ್ಮ. ಯಾವುದು ಇನ್ನೊಂದನ್ನು ಅವಲಂಬಿಸಿಯೇ ಕಾಣಿಸುತ್ತದೆಯೋ ಅದು ಅಸತ್. ಅದೇ ಜಗತ್ತು. ಜಗತ್ತಿನ ಮೂಲ, ಜಗತ್ತು – ಈ ಎರಡೂ ನಾನೇ – ಎಂದು ಅಭಿಪ್ರಾಯ.

**ತ್ರೈವಿದ್ಯಾ ಮಾಂ ಸೋಮಪಾಃ ಪೂತಪಾಪಾಃ**
**ಯಜ್ಞೈರಿಷ್ಟ್ವಾ ಸ್ವರ್ಗತಿಂ ಪ್ರಾರ್ಥಯಂತೇ ।**
**ತೇ ಪುಣ್ಯಮಾಸಾದ್ಯ ಸುರೇಂದ್ರಲೋಕಂ**
**ಅಶ್ನಂತಿ ದಿವ್ಯಾನ್ ದಿವಿ ದೇವಭೋಗಾನ್ ॥ ೨೦**

ಋಕ್, ಯಜುಸ್, ಸಾಮ – ಎಂಬ ತ್ರಿವಿದ್ಯೆಯನ್ನು ಬಲ್ಲವರು ಸೋಮಪಾನವನ್ನು ಮಾಡಿ ಪಾಪಮುಕ್ತರಾಗುತ್ತಾರೆ. ಅವರು ಯಜ್ಞಗಳಿಂದ ನನ್ನನ್ನು ಆರಾಧಿಸಿ ಸ್ವರ್ಗಪ್ರಾಪ್ತಿಯನ್ನು ಬಯಸುತ್ತಾರೆ. ಅವರು ಪುಣ್ಯಫಲವಾಗಿ ದೇವೇಂದ್ರಲೋಕವನ್ನಡರಿ ಸ್ವರ್ಗದಲ್ಲಿ ದೇವತೆಗಳು ಸದಾ ಭೋಗಿಸುವ ದಿವ್ಯಸುಖಗಳನ್ನು ಅನುಭವಿಸುತ್ತಾರೆ.

**ವಿವರಣೆ :** ಹಿಂದೆ ಹೇಳಿದ ಜ್ಞಾನಯಜ್ಞವನ್ನಾಚರಿಸುತ್ತ ಭಗವತ್ಪ್ರಾಪ್ತಿಗಾಗಿ ಪೂಜಿಸತಕ್ಕವರು ಅವರ ವಿಜ್ಞಾನಕ್ಕೆ ಅನುಗುಣವಾಗಿ ಕ್ರಮಮುಕ್ತಿಯ ದಾರಿಯಲ್ಲಿ ಹೋಗುತ್ತಾರೆ. ಆದರೆ ಸ್ವರ್ಗಕಾಮಿಗಳಾಗಿ ಶಾಸ್ತ್ರೀಯಕರ್ಮಗಳನ್ನು ಮಾಡತಕ್ಕವರು ಅವರಿಗೆ ಇಷ್ಟವಾದ ಫಲವನ್ನು ಪಡೆಯುತ್ತಾರೆ. ಆ ಫಲವು ಅನಿತ್ಯ.

**ತೇ ತಂ ಭುಕ್ತ್ವಾ ಸ್ವರ್ಗಲೋಕಂ ವಿಶಾಲಂ**
**ಕ್ಷೀಣೇ ಪುಣ್ಯೇ ಮರ್ತ್ಯಲೋಕಂ ವಿಶಂತಿ ।**
**ಏವಂ ತ್ರಯೀಧರ್ಮಮನುಪ್ರಪನ್ನಾಃ**
**ಗತಾಗತಂ ಕಾಮಕಾಮಾ ಲಭಂತೇ ॥ ೨೧**

ಅವರು ವಿಶಾಲವಾಗಿ ಹರಡಿರುವ ಸ್ವರ್ಗಲೋಕವನ್ನು ಭೋಗಿಸಿ, ತಮ್ಮ ಪುಣ್ಯವು ಕ್ಷೀಣವಾಗಲು, ಮತ್ತೆ ಈ ಮರ್ತ್ಯಲೋಕವನ್ನು ಪ್ರವೇಶಿಸುವರು. ಈ ರೀತಿಯಾಗಿ ವೈದಿಕಕರ್ಮಗಳನ್ನಾಚರಿಸುವ ಕಾಮಿತಫಲಾರ್ಥಿಗಳು ಯಾತಾ

ಯಾತಗಳನ್ನು ಪಡೆಯುತ್ತಲೇ ಇರುತ್ತಾರೆ.

**ಅನನ್ಯಾಶ್ಚಿಂತಯಂತೋ ಮಾಂ ಯೇ ಜನಾಃ ಪರ್ಯುಪಾಸತೇ ।**
**ತೇಷಾಂ ನಿತ್ಯಾಭಿಯುಕ್ತಾನಾಂ ಯೋಗಕ್ಷೇಮಂ ವಹಾಮ್ಯಹಮ್ ॥ ೨೨**

ಆದರೆ ಯಾರು ಅನನ್ಯರಾಗಿ – ಎಂದರೆ – ನನಗಿಂತ ಬೇರೆಯಾಗದವರಾಗಿ ನಾನೇ ತಮ್ಮ ಆತ್ಮವೆಂದು ಚಿಂತಿಸುತ್ತ ನನ್ನ ಉಪಾಸನೆ ಮಾಡುತ್ತಾರೋ ಅಂತಹ ಸದಾ ನನ್ನಲ್ಲಿ ಚಿತ್ತವನ್ನಿಟ್ಟಿರುವ, ಸಮ್ಯಗ್ದರ್ಶಿಗಳ ಯೋಗಕ್ಷೇಮಗಳನ್ನು ನಾನು ವಹಿಸಿಕೊಳ್ಳುತ್ತೇನೆ.

**ವಿವರಣೆ :** ಯೋಗ = ಲಭ್ಯವಾಗದಿರುವುದನ್ನು ಪಡೆಯುವುದು. ಕ್ಷೇಮ = ಲಬ್ಧವಾದುದರ ಸಂರಕ್ಷಣೆ. "ಜ್ಞಾನೀತ್ವಾತ್ಮೈವ ಮೇ ಮತಮ್" (೭–೧೮) ಎಂಬ ಮಾತನ್ನು ಸ್ಮರಿಸಿಕೊಳ್ಳಬೇಕು. ಎಲ್ಲ ಬಗೆಯ ಭಕ್ತರ ಯೋಗಕ್ಷೇಮ ಗಳನ್ನು ಭಗವಂತನು ನೋಡಿಕೊಳ್ಳುತ್ತಾನಾದರೂ ಜ್ಞಾನಿಗಳು ಬಯಸದಿದ್ದರೂ ಅವರ ಯೋಗಕ್ಷೇಮಗಳನ್ನು ನೋಡಿಕೊಳ್ಳುತ್ತಾನೆ – ಎಂಬುದೇ ವಿಶೇಷ.

**ಯೇಽಪ್ಯನ್ಯದೇವತಾಭಕ್ತಾ ಯಜಂತೇ ಶ್ರದ್ಧಯಾನ್ವಿತಾಃ ।**
**ತೇಽಪಿ ಮಾಮೇವ ಕೌಂತೇಯ ಯಜಂತ್ಯವಿಧಿಪೂರ್ವಕಮ್ ॥ ೨೩**

ಯಾರು ಮಿಕ್ಕ ಇಂದ್ರಾದಿದೇವತೆಗಳ ಭಕ್ತರಾಗಿ ಶ್ರದ್ಧಾಯುಕ್ತರಾಗಿಯೇ ಆ ದೇವತೆಗಳನ್ನು ಪೂಜಿಸುತ್ತಾರೋ ಅವರು ವಿಧಿಪೂರ್ವಕವಾಗಿಯಲ್ಲದಿದ್ದರೂ (ಪರ್ಯಾಯವಾಗಿ) ನನ್ನನ್ನೇ ಪೂಜಿಸುತ್ತಾರೆ.

**ವಿವರಣೆ :** ಇಂದ್ರಾದಿ ದೇವತೆಗಳನ್ನು ಅರ್ಚಿಸತಕ್ಕವರೂ ಶಾಸ್ತ್ರವಿಧಿ ಯಂತೆಯೇ ಮಾಡುತ್ತಾರೆ. ಆದ್ದರಿಂದ 'ಅವಿಧಿಪೂರ್ವಕಂ' ಎಂದರೆ ಅಜ್ಞಾನಪೂರ್ವಕ ಎಂದು ಅರ್ಥ ಮಾಡಬೇಕು. ಶಾಸ್ತ್ರದಲ್ಲಿ ಇಂದ್ರಾದಿ ದೇವತೆಗಳಿಗೆ ಪೂಜೆಯು ಮುಟ್ಟುತ್ತದೆಯೆಂದು ವಿಧಿಸಿದ್ದರೂ ನಿಜವಾಗಿ ಅದು ಪರಮಾತ್ಮನಿಗೇ ಮುಟ್ಟುತ್ತದೆಯೆಂಬ ಜ್ಞಾನವಿಲ್ಲದೆ – ಎಂದರ್ಥ. 'ಸರ್ವದೇವ ನಮಸ್ಕಾರಃ ಕೇಶವಂ ಪ್ರತಿಗಚ್ಛತಿ.'

**ಅಹಂ ಹಿ ಸರ್ವಯಜ್ಞಾನಾಂ ಭೋಕ್ತಾ ಚ ಪ್ರಭುರೇವ ಚ ।**
**ನ ತು ಮಾಮಭಿಜಾನಂತಿ ತತ್ತ್ವೇನಾತಶ್ಚ್ಯವಂತಿ ತೇ ॥ ೨೪**

ಏಕೆಂದರೆ, ಎಲ್ಲ ಯಜ್ಞಗಳ ಭೋಕ್ತಾರನೂ ಸ್ವಾಮಿಯೂ ನಾನೇ ಆಗಿದ್ದೇನೆ. ನಾನು ಹೀಗಿರುವುದನ್ನು ಆ ಜನರು ಯಥಾವತ್ತಾಗಿ ಅರಿಯರು. ಆದ್ದರಿಂದ

(ಅವಿಧಿಪೂರ್ವಕವಾಗಿ ಅರ್ಚಿಸಿ) ಜಾರಿಬೀಳುತ್ತಾರೆ.

**ಯಾಂತಿ ದೇವವ್ರತಾ ದೇವಾನ್ ಪಿತೄನ್ ಯಾಂತಿ ಪಿತೃವ್ರತಾಃ ।**
**ಭೂತಾನಿ ಯಾಂತಿ ಭೂತೇಜ್ಯಾ ಯಾಂತಿ ಮದ್ಯಾಜಿನೋಽಪಿ ಮಾಮ್ ॥**

ಆಯಾ ದೇವತಾವ್ರತಗಳನ್ನು ಮಾಡುವವರು ಆ ದೇವತೆಗಳನ್ನು ಹೋಗಿ ಸೇರುವರು. ಪಿತೃವ್ರತರು ಪಿತೃಗಳನ್ನು ಸೇರುವರು. ಭೂತಗಣಗಳನ್ನು ಪೂಜಿಸತಕ್ಕವರು ಆಯಾ ಭೂತವನ್ನು ಸೇರುತ್ತಾರೆ. ನನ್ನನ್ನು ಪೂಜಿಸತಕ್ಕವರು ನನ್ನನ್ನು ಸೇರುತ್ತಾರೆ.

**ಪತ್ರಂ ಪುಷ್ಪಂ ಫಲಂ ತೋಯಂ ಯೋ ಮೇ ಭಕ್ತ್ಯಾ ಪ್ರಯಚ್ಛತಿ ।**
**ತದಹಂ ಭಕ್ತ್ಯುಪಹೃತಮಶ್ನಾಮಿ ಪ್ರಯತಾತ್ಮನಃ ॥ ೨೬**

ಒಂದು ಎಲೆ, ಒಂದು ಹೂ, ಒಂದು ಹಣ್ಣು, ಕಡೆಗೆ (ಒಂದು ಬೊಗಸೆ) ನೀರು – ಇವುಗಳಲ್ಲಿ ಯಾವುದನ್ನಾದರೂ ಒಬ್ಬನು ಭಕ್ತಿಯಿಂದ ಅರ್ಪಿಸಿದರೆ, ಆ ಶುದ್ಧಚಿತ್ತನಾದವನು ಭಕ್ತಿಯಿಂದ ಅರ್ಪಿಸಿದ್ದಾನೆಂದು ತಿಳಿದು ನಾನು ಅದನ್ನು ಸ್ವೀಕರಿಸುವೆನು. (ನನ್ನ ಆರಾಧನೆ ಬಹಳ ಸುಲಭವೆಂದು ಅಭಿಪ್ರಾಯ.)

**ಯತ್ಕರೋಷಿ ಯದಶ್ನಾಸಿ ಯಜ್ಜುಹೋಷಿ ದದಾಸಿ ಯತ್ ।**
**ಯತ್ತಪಸ್ಯಸಿ ಕೌಂತೇಯ ತತ್ ಕುರುಷ್ವ ಮದರ್ಪಣಮ್ ॥ ೨೭**

ನೀನು ಏನನ್ನು ಮಾಡುತ್ತೀಯೋ, ಏನನ್ನು ತಿನ್ನುತ್ತೀಯೋ, ಯಾವುದನ್ನು ಹೋಮ ಮಾಡುತ್ತೀಯೋ, ಯಾವ ತಪಸ್ಸನ್ನು ಮಾಡುತ್ತೀಯೋ ಅದೆಲ್ಲವನ್ನೂ ಅರ್ಜುನ, (ಈಶ್ವರಾರ್ಪಣಮಸ್ತು ಎಂದು) ನನಗೆ ಅರ್ಪಿಸಿಬಿಡು.

**ಶುಭಾಶುಭಫಲೈರೇವಂ ಮೋಕ್ಷ್ಯಸೇ ಕರ್ಮಬಂಧನೈಃ ।**
**ಸಂನ್ಯಾಸಯೋಗಯುಕ್ತಾತ್ಮಾ ವಿಮುಕ್ತೋ ಮಾಮುಪೈಷ್ಯಸಿ ॥ ೨೮**

ಈ ರೀತಿಯಲ್ಲಿ (ಈಶ್ವರಾರ್ಪಣಬುದ್ಧಿಯಿಂದ ಕರ್ಮವನ್ನು ಮಾಡುತ್ತಿದ್ದರೆ) ಇಷ್ಟಾನಿಷ್ಟಫಲಗಳನ್ನು ಕೊಡುವ ಕರ್ಮಬಂಧನಗಳಿಂದ ಬಿಡುಗಡೆ ಹೊಂದುತ್ತೀಯೆ. (ಸರ್ವಫಲತ್ಯಾಗವೆಂಬ) ಸಂನ್ಯಾಸಸಹಿತವಾದ ಕರ್ಮಯೋಗದಿಂದ ಸಮಾಹಿತಚಿತ್ತನಾಗುವೆಯಲ್ಲದೆ ಕರ್ಮಪಾಶಗಳಿಂದ ವಿಮುಕ್ತನಾಗಿ ನನ್ನನ್ನು ಸೇರಿಕೊಳ್ಳುವೆ.

**ವಿವರಣೆ :** ಸರ್ವಫಲತ್ಯಾಗವನ್ನೇ ಇಲ್ಲಿ ಸಂನ್ಯಾಸವೆಂದು ಕರೆಯಲಾಗಿದೆ.

ಕೆಲವರನ್ನು ಮಾತ್ರ ಅನುಗ್ರಹಿಸುವುದರಿಂದ ಭಗವಂತನಲ್ಲಿ ರಾಗದ್ವೇಷಗಳಿವೆ

ಯೆಂದಾಯಿತು – ಎಂಬ ಶಂಕೆಗೆ, ಹಾಗಲ್ಲ –

**ಸಮೋಽಹಂ ಸರ್ವಭೂತೇಷು ನ ಮೇ ದ್ವೇಷ್ಯೋಽಸ್ತಿ ನ ಪ್ರಿಯಃ ।**
**ಯೇ ಭಜಂತಿ ತು ಮಾಂ ಭಕ್ತ್ಯಾ ಮಯಿ ತೇ ತೇಷು ಚಾಪ್ಯಹಮ್ ॥**

ನಾನು ಸರ್ವಪ್ರಾಣಿಗಳ ವಿಷಯದಲ್ಲಿಯೂ ಸಮನಾಗಿದ್ದೇನೆ. ನನಗೆ ವೈರಿಯೂ ಇಲ್ಲ, ಪ್ರಿಯನೂ ಇಲ್ಲ. ಆದರೆ ಯಾರು ನನ್ನನ್ನು ಭಕ್ತಿಯಿಂದ ಸೇವಿಸುತ್ತಾರೋ ಅವರು ನನ್ನಲ್ಲಿರುತ್ತಾರೆ. ನಾನು ಅವರಲ್ಲಿರುತ್ತೇನೆ.

**ವಿವರಣೆ :** ನನಗೆ ಪಕ್ಷಪಾತವಿಲ್ಲ. ನಾನು ಬೆಂಕಿಯಂತೆ ಇದ್ದೇನೆ. ಬೆಂಕಿಯ ಹತ್ತಿರ ಬಂದರೆ ಚಳಿ ಹೋಗುತ್ತದೆ. ದೂರವಿದ್ದರೆ ಇಲ್ಲ. ಹಾಗೆ ನನ್ನ ಹತ್ತಿರ ಬಂದರೆ, ಭಕ್ತರ ಕಷ್ಟ ನೀಗುತ್ತದೆ. ಬರದಿದ್ದರೆ ಇಲ್ಲ. ಇದೇನೂ ಪಕ್ಷಪಾತವಲ್ಲ. ಔಷಧವನ್ನು ಸೇವಿಸಿದರೆ ರೋಗವು ಗುಣವಾಗುತ್ತದೆ. ಇಲ್ಲದಿದ್ದರೆ ಇಲ್ಲ. ಔಷಧಕ್ಕೆ ರಾಗದ್ವೇಷಗಳಿಲ್ಲ.

**ಅಪಿ ಚೇತ್ಸುದುರಾಚಾರೋ ಭಜತೇ ಮಾಮನನ್ಯಭಾಕ್ ।**
**ಸಾಧುರೇವ ಸ ಮಂತವ್ಯಃ ಸಮ್ಯಗ್ ವ್ಯವಸಿತೋ ಹಿ ಸಃ ॥ ೩೦**

ಒಂದು ವೇಳೆ ಅವನು ದುರಾಚಾರಿಯೇ ಆಗಿರಲಿ, ಅನನ್ಯಭಾವದಿಂದ ಭಜಿಸತಕ್ಕವನಾದರೆ ಆತನು ಸಾಧುವೆಂದೇ ತಿಳಿಯಬೇಕು. ಏಕೆಂದರೆ, ಅವನು (ನನ್ನನ್ನು ಭಜಿಸಬೇಕೆಂದು) ಸರಿಯಾದ ನಿಶ್ಚಯವನ್ನೇ ಮಾಡಿರುತ್ತಾನಲ್ಲವೆ ?

**ಕ್ಷಿಪ್ರಂ ಭವತಿ ಧರ್ಮಾತ್ಮಾ ಶಶ್ವಚ್ಛಾಂತಿಂ ನಿಗಚ್ಛತಿ ।**
**ಕೌಂತೇಯ ಪ್ರತಿಜಾನೀಹಿ ನ ಮೇ ಭಕ್ತಃ ಪ್ರಣಶ್ಯತಿ ॥ ೩೧**

(ದುರಾಚಾರಿಯಾಗಿದ್ದರೂ ನನ್ನನ್ನು ಭಜಿಸುವುದರಿಂದ) ಅವನು ಬೇಗನೆ ಧರ್ಮಾತ್ಮನಾಗಿಬಿಡುತ್ತಾನೆ. ಅಲ್ಲದೆ ಪೂರ್ಣವಾಗಿ ಮನಃಶಾಂತಿಯನ್ನು ಪಡೆಯುತ್ತಾನೆ. ಅರ್ಜುನ, (ಈ ನುಡಿಯನ್ನು ಕೇಳು) ನನ್ನ ಭಕ್ತನು ಎಂದಿಗೂ ಹಾಳಾಗುವುದಿಲ್ಲ. ಇದು ನಿಶ್ಚಯವೆಂದು ತಿಳಿ.

**ವಿವರಣೆ :** ಪ್ರತಿಜಾನೀಹಿ ಎಂಬ ಪದಕ್ಕೆ ಶ್ರೀಶಾಂಕರಭಾಷ್ಯದಲ್ಲಿ 'ಪ್ರತಿಜ್ಞಾಂ ಕುರು' ಎಂದು ವಿವರಣೆ ಇದೆ. ಅದಕ್ಕೆ 'ನಿಶ್ಚಯವನ್ನು ಮಾಡು' ಎಂಬ ಅರ್ಥ ಸ್ವರಸವಾಗಿದೆ. ಆದರೂ ಶ್ರೀಕೃಷ್ಣನು ಅರ್ಜುನನಿಂದ 'ಭಗವಂತನ ಭಕ್ತನು ಹಾಳಾಗುವುದಿಲ್ಲ' ಎಂದು ಪ್ರತಿಜ್ಞೆಯನ್ನು ಮಾಡಿಸುತ್ತಾನೆ – ಎಂಬುದಾಗಿ ಕೆಲವರು ಅರ್ಥಮಾಡುತ್ತಾರೆ.

**ಮಾಂ ಹಿ ಪಾರ್ಥ ವ್ಯಪಾಶ್ರಿತ್ಯ ಯೇಽಪಿ ಸ್ಯುಃ ಪಾಪಯೋನಯಃ ।**
**ಸ್ತ್ರಿಯೋ ವೈಶ್ಯಾಸ್ತಥಾ ಶೂದ್ರಾಸ್ತೇಽಪಿ ಯಾಂತಿ ಪರಾಂ ಗತಿಮ್ ॥ ೩೨**

ಏಕೆಂದರೆ, ಅರ್ಜುನ, ಪೂರ್ವಾರ್ಜಿತವಾದ ಪಾಪದಿಂದ ಜನಿಸಿದ ಸ್ತ್ರೀ, ವೈಶ್ಯ, ಶೂದ್ರರೂ ಸಹ ನನ್ನನ್ನು ಆಶ್ರಯಿಸಿ ನನ್ನ ಭಕ್ತರಾದರೆ, ಅವರೂ ಸಹ ಉತ್ತಮ ಗತಿಯನ್ನೇ ಪಡೆಯುತ್ತಾರೆ.

**ವಿವರಣೆ :** ಸ್ತ್ರೀವೈಶ್ಯಾದಿಗಳಿಗೆ ಭಕ್ತಿಮಾರ್ಗದಲ್ಲಿ ಮುಂದುವರಿಯಲು ಕೆಲವು ಅಡ್ಡಿಗಳಿರುತ್ತವೆ. ಜನ್ಮಾಂತರದ ಕರ್ಮಲೇಶವು ಅಂಟಿಕೊಂಡದ್ದರಿಂದ ಆ ಜನ್ಮವು ಅವರಿಗೆ ಬಂದಿರುತ್ತದೆ – ಎಂದು ತಿಳಿಯಬೇಕಾಗುತ್ತದೆ. ಸ್ವತಃ ಈಗಲೂ ಅವರು ಪಾಪಿಷ್ಠರೆಂದು ಅಭಿಪ್ರಾಯವಲ್ಲ. ಅಥವಾ 'ಪಾಪಯೋನಯಃ' ಎಂಬುದನ್ನು ಸ್ತ್ರೀ ವೈಶ್ಯ ಶೂದ್ರರಿಗೆ ವಿಶೇಷಣವಾಗಿ ಬಳಸದೆ, ಪಾಪಯೋನಿಗಳಾದ ದುಷ್ಟರು ಮತ್ತು ಸ್ತ್ರೀವೈಶ್ಯಾದಿಗಳು ಎಂದೂ ಅರ್ಥ ಹೇಳಬಹುದು.

**ಕಿಂ ಪುನರ್ಬ್ರಾಹ್ಮಣಾಃ ಪುಣ್ಯಾ ಭಕ್ತಾ ರಾಜರ್ಷಯಸ್ತಥಾ ।**
**ಅನಿತ್ಯಮಸುಖಂ ಲೋಕಮಿಮಂ ಪ್ರಾಪ್ಯ ಭಜಸ್ವ ಮಾಮ್ ॥ ೩೩**

ಹೀಗಿರುವಲ್ಲಿ ಪುಣ್ಯಯೋನಿಗಳಾದ ಬ್ರಾಹ್ಮಣರೂ ರಾಜರ್ಷಿಗಳೂ ನನ್ನ ಭಕ್ತರಾದರೆ, (ಅವರು ಪರಮಗತಿಯನ್ನೈದುವರೆಂದು) ಹೇಳಬೇಕಾದ್ದೇನಿದೆ ? ಆದ್ದರಿಂದ, ಕ್ಷಣಭಂಗುರವೂ ಸುಖವರ್ಜಿತವೂ ಆದ ಈ ಮನುಷ್ಯಲೋಕ ವನ್ನು ಪಡೆದಿರುವ ನೀನು ನನ್ನನ್ನು ಭಜಿಸು (ಭಜಿಸಿ ಕೃತಾರ್ಥನಾಗು).

**ವಿವರಣೆ :** ಮನುಷ್ಯಲೋಕವನ್ನು ಎಂದರೆ ಮನುಷ್ಯತ್ವವನ್ನು ಎಂದೇ ತಾತ್ಪರ್ಯ. ಪುರುಷಾರ್ಥವನ್ನು ಸಾಧಿಸಲು ಮನುಷ್ಯಜನ್ಮಕ್ಕಿಂತ ಉತ್ತಮವಾದ ಸಾಧನವಿಲ್ಲ.

**ಮನ್ಮನಾ ಭವ ಮದ್ಭಕ್ತೋ ಮದ್ಯಾಜೀ ಮಾಂ ನಮಸ್ಕುರು ।**
**ಮಾಮೇವೈಷ್ಯಸಿ ಯುಕ್ತ್ವೈವಮಾತ್ಮಾನಂ ಮತ್ಪರಾಯಣಃ ॥ ೩೪**

**ಇತಿ ಶ್ರೀಮದ್ಭಗವದ್ಗೀತಾಸೂಪನಿಷತ್ಸು ಬ್ರಹ್ಮವಿದ್ಯಾಯಾಂ ಯೋಗಶಾಸ್ತ್ರೇ**
**ರಾಜವಿದ್ಯಾರಾಜಗುಹ್ಯಯೋಗೋ ನಾಮ ನವಮೋಽಧ್ಯಾಯಃ**

(ಭಜಿಸುವುದು ಹೇಗೆಂದರೆ) ವಾಸುದೇವನಾದ ನನ್ನಲ್ಲಿಯೇ ಮನಸ್ಸನ್ನಿಟ್ಟಿರು. ನನ್ನ ಭಕ್ತನಾಗಿ ನನ್ನನ್ನು ಪೂಜಿಸುತ್ತಿರು. ನನ್ನನ್ನೇ ನಮಸ್ಕರಿಸು. ನಾನೇ

ಪರಮಗತಿಯೆಂದು ನಂಬು. ಹೀಗೆ ನೀನು ಸಮಾಹಿತಚಿತ್ತನಾದರೆ, ಆತ್ಮನಾದ ನನ್ನನ್ನೇ ಸೇರಿಕೊಳ್ಳುವೆ.

**ಇಲ್ಲಿಗೆ ಶ್ರೀಮದ್ಭಗವದ್ಗೀತೆಯಲ್ಲಿ ರಾಜವಿದ್ಯಾರಾಜಗುಹ್ಯಯೋಗವೆಂಬ ಒಂಬತ್ತನೆಯ ಅಧ್ಯಾಯವು ಸಮಾಪ್ತವಾಯಿತು.**

## ೯ನೆಯ ಅಧ್ಯಾಯದ ಸಾರ

ಭಗವಂತನು ಹೇಳಿದ್ದು: ಎಲ್ಲದಕ್ಕಿಂತ ಹೆಚ್ಚಿನ ರಹಸ್ಯವನ್ನೀಗ ಹೇಳುವೆನು. ಅದೇ ಜ್ಞಾನ ಮತ್ತು ವಿಜ್ಞಾನ. ಇದನ್ನರಿತುಕೊಂಡರೆ ಸಂಸಾರಬಂಧನದಿಂದ ಬಿಡುಗಡೆ ಹೊಂದುತ್ತೀಯೆ. ಇದು ವಿದ್ಯೆಗಳಲ್ಲಿ ಹೆಚ್ಚಿನದು. ಪ್ರತ್ಯಕ್ಷವಾಗಿ ಅನುಭವಕ್ಕೆ ಬರತಕ್ಕದ್ದು. ಇದರಲ್ಲಿ ನಂಬಿಕೆಯಿಲ್ಲದವರು ಸಂಸಾರದಲ್ಲಿಯೇ ನರಳಬೇಕಾಗುತ್ತದೆ.

ಈ ಜಗತ್ತೆಲ್ಲವನ್ನೂ ನಾನು ಅವ್ಯಕ್ತರೂಪದಿಂದ ವ್ಯಾಪಿಸಿದ್ದೇನೆ. ಬ್ರಹ್ಮನಿಂದ ಹಿಡಿದು ಸಕಲ ಪದಾರ್ಥಗಳೂ ನನ್ನನ್ನು ಆಶ್ರಯಿಸಿಕೊಂಡಿವೆ. ಆಕಾಶದಲ್ಲಿ ವಾಯುವಿರುವಂತೆ ಯಾವ ಲೇಪವೂ ಇಲ್ಲದೆಯೇ ಅವು ನನ್ನಲ್ಲಿರುತ್ತವೆ. ಸ್ಥಿತಿಕಾಲ್ದದಲ್ಲಿ ನನ್ನಲ್ಲಿರುವ ಎಲ್ಲ ಭೂತಗಳೂ ಪ್ರಳಯಕಾಲದಲ್ಲಿ ನನ್ನ ಪ್ರಕೃತಿಯಲ್ಲಿಯೇ ಲೀನವಾಗುತ್ತವೆ. ಮತ್ತೆ ಸೃಷ್ಟಿಕಾಲ ಬಂದಾಗ ಸೃಷ್ಟಿಸುತ್ತೇನೆ. ಪ್ರಕೃತಿಯ ಮೂಲಕವೇ ಸೃಷ್ಟಿಸ್ಥಿತಿಲಯಗಳು ನಡೆಯುತ್ತವೆ. ನಾನು ಫಲದಲ್ಲಿ ಉದಾಸೀನನಾದ್ದರಿಂದ ನನಗೆ ಯಾವ ಕರ್ಮಬಂಧವೂ ಇಲ್ಲ. ಕೇವಲ ಸಾಕ್ಷಿಯಾಗಿರುವ ನನ್ನ ಸಾಂನಿಧ್ಯದಿಂದ ಪ್ರಕೃತಿಯು ಜಗದ್ರೂಪವಾಗಿ ಮಾರ್ಪಡುವುದು.

ನಾನೇ ಎಲ್ಲರ ಆತ್ಮನೆಂಬುದನ್ನರಿಯದ ಅಜ್ಞಾನಿಗಳು ಆಸುರಸಂಪತ್ತಿಗೆ ವಶರಾಗಿ ಒಬ್ಬರನ್ನೊಬ್ಬರು ಹಿಂಸಿಸುತ್ತಾರೆ. ದೈವಸಂಪತ್ತಿನಿಂದ ಕೂಡಿದ ಮಹಾತ್ಮರು ನಾನೇ ಸಕಲ ಪ್ರಾಣಿಗಳಿಗೂ ಕಾರಣನೆಂಬುದನ್ನು ನಿಶ್ಚಯಿಸಿ ನನ್ನನ್ನು ಭಜಿಸುತ್ತಾರೆ. ಈ ಸಜ್ಜನರು ನಾನೇ ಅದ್ವಿತೀಯಬ್ರಹ್ಮವೆಂದೂ ಸೂರ್ಯಚಂದ್ರಾದಿರೂಪದಲ್ಲಿದ್ದೇನೆಂದೂ ಸಮಸ್ತವಿಶ್ವದ ರೂಪದಲ್ಲಿದ್ದೇನೆಂದೂ ತಿಳಿದು ಜ್ಞಾನಯಜ್ಞಗಳಿಂದ ನನ್ನನ್ನೇ ಅರ್ಚಿಸುತ್ತಿರುವರು.

ಈ ಸತ್ಯವನ್ನರಿಯದ ಕಾಮಾತ್ಮರು ವೇದೋಕ್ತಕರ್ಮಗಳನ್ನಾಚರಿಸಿ,

ಸ್ವರ್ಗಾದಿಲೋಕಗಳನ್ನನುಭವಿಸಿ, ಪುಣ್ಯವು ಕ್ಷಯಿಸಿದಮೇಲೆ ಮತ್ತೆ ಮನುಷ್ಯ ಲೋಕಕ್ಕೆ ಹಿಂದಿರುಗುತ್ತಾರೆ. ನನ್ನನ್ನು ನಿಷ್ಕಾಮದಿಂದ ಭಜಿಸತಕ್ಕವರ ಯೋಗ ಕ್ಷೇಮಗಳನ್ನೂ ನಾನೇ ನೋಡಿಕೊಳ್ಳುತ್ತೇನೆ. ಯಾರು ಯಾರು ಯಾವ ದೇವತೆಗಳನ್ನು ಪೂಜಿಸುತ್ತಾರೋ ಅವರೆಲ್ಲರೂ ಪರ್ಯಾಯದಿಂದ ನನ್ನನ್ನೇ ಪೂಜಿಸುತ್ತಾರೆಂದು ತಿಳಿ. ಆದರೆ ಆ ಕಾಮಿಗಳು ಈ ರಹಸ್ಯವನ್ನರಿಯದೆ ಇತರ ದೇವತೆಗಳನ್ನರ್ಚಿಸಿ, ಅಲ್ಪಫಲವನ್ನು ಪಡೆಯುತ್ತಾರೆ. ಅವರೇ ನಿಷ್ಕಾಮರಾಗಿ ನನ್ನನ್ನು ಅರ್ಚಿಸಿದರೆ ಅನಂತಫಲವನ್ನು ಪಡೆಯುತ್ತಾರೆ.

ನನ್ನನ್ನು ಪೂಜಿಸುವುದೇನೂ ಕಷ್ಟವಲ್ಲ. ಅದಕ್ಕೆ ಅಧಿಕ ಸಾಮಗ್ರಿಗಳೂ ಬೇಕಿಲ್ಲ. ಒಂದು ಹೂ, ಒಂದು ಎಲೆ, ಒಂದು-ಹಣ್ಣು ಅಥವಾ ಒಂದಿಷ್ಟು ನೀರನ್ನು ಪರಮಭಕ್ತಿಯಿಂದ ಅರ್ಪಿಸಿದರೆ ಸಾಕು, ಅದರಿಂದಲೇ ನಾನು ತೃಪ್ತನಾಗುವೆನು. ಆದ್ದರಿಂದ, ಅರ್ಜುನ, ನೀನು ಮಾಡುವ ಸಕಲ ಕರ್ಮವನ್ನೂ ನನಗೆ ಅರ್ಪಿಸು. ಇದರಿಂದ ಎಲ್ಲ ಬಂಧನಗಳನ್ನೂ ಕಳಚಿಕೊಂಡು ನನ್ನನ್ನು ಸೇರುವೆ. ನನಗೆ ದ್ವೇಷಿಯಾಗಲಿ ಪ್ರಿಯನಾಗಲಿ ಇಲ್ಲ. ನಾನು ಎಲ್ಲರ ವಿಷಯದಲ್ಲಿಯೂ ಸಮಾನವಾಗಿ ವರ್ತಿಸುವೆನು. ಯಾರು ನನ್ನ ಹತ್ತಿರ ಬರುತ್ತಾರೋ ಅವರ ಕಷ್ಟ ನೀಗುತ್ತದೆ. (ಬೆಂಕಿಯ ಹತ್ತಿರ ಹೋದರೆ ಚಳಿ ಹೋಗುತ್ತದೆ. ಇಲ್ಲದಿದ್ದರೆ ಇಲ್ಲ. ಔಷಧವನ್ನು ಕುಡಿದರೆ ಜ್ವರ ಇಳಿಯುತ್ತದೆ. ಇಲ್ಲದಿದ್ದರೆ ಇಲ್ಲ. ಬೆಂಕಿಗಾಗಲಿ ಔಷಧಕ್ಕಾಗಲಿ ಪಕ್ಷಪಾತವೇನೂ ಇಲ್ಲ.)

ಎಂತಹ ಕೆಟ್ಟ ನಡತೆಯುವನೇ ಆಗಲಿ ನನ್ನನ್ನು ಆಶ್ರಯಿಸಿ ನನ್ನನ್ನೇ ಭಜಿಸಲು ಪ್ರಾರಂಭಿಸಿದರೆ, ಕ್ರಮವಾಗಿ ಅವನು ಸತ್ಪುರುಷನೇ ಆಗಿಬಿಡುವನು. ಭಕ್ತಿಯ ಸಾಮರ್ಥ್ಯ ಅಂತಹದು. ಇನ್ನು ಪುಣ್ಯಶಾಲಿಗಳಾಗಿ ಹುಟ್ಟಿ ನನ್ನನ್ನು ಭಜಿಸತಕ್ಕವರ ವಿಷಯವಾಗಿ ಹೇಳುವುದೇನು? ಈ ಮನುಷ್ಯಜನ್ಮದಲ್ಲಿ ಸುಖದ ಲೇಶವೂ ಇಲ್ಲ. ಮನುಷ್ಯರಾಗಿ ಹುಟ್ಟಿದವರೆಲ್ಲರೂ ಭಕ್ತಿಮಾರ್ಗದಲ್ಲಿ ತೊಡಗಲು ಸಾಧ್ಯವಿದೆ. ಅನಂತಫಲವನ್ನು ನಾನು ಕೊಡುವವನಾಗಿರುವಾಗ ಏಕೆ ನನ್ನ ಭಕ್ತರಾಗಿ ಸದ್ಗತಿಯನ್ನು ಪಡೆಯಬಾರದು? ಅರ್ಜುನ, ನನ್ನನ್ನು ಪೂಜಿಸುತ್ತ ನನ್ನ ಭಕ್ತನಾಗಿರು. ಹೀಗಿದ್ದರೆ ಕಡೆಯಲ್ಲಿ ನನ್ನನ್ನೇ ಬಂದು ಸೇರುತ್ತೀಯೆ.

## ಅಧ್ಯಾಯ ೧೦

# ವಿಭೂತಿಯೋಗ

ಏಳನೆಯ ಮತ್ತು ಒಂಬತ್ತನೆಯ ಅಧ್ಯಾಯಗಳಲ್ಲಿ ಭಗವಂತನ ತತ್ತ್ವವನ್ನೂ ವಿಭೂತಿಗಳನ್ನೂ ಹೇಳಿದ್ದಾಗಿದೆ. ಆದರೂ ತಿಳಿಯಲು ಕಷ್ಟವಾದ್ದರಿಂದ ಈ ಅಧ್ಯಾಯದಲ್ಲಿ ವಿಸ್ತರಿಸಲಾಗುತ್ತದೆ.

**ಶ್ರೀಭಗವಾನುವಾಚ –**

**ಭೂಯ ಏವ ಮಹಾಬಾಹೋ ಶೃಣು ಮೇ ಪರಮಂ ವಚಃ ।**
**ಯತ್ತೇऽಹಂ ಪ್ರೀಯಮಾಣಾಯ ವಕ್ಷ್ಯಾಮಿ ಹಿತಕಾಮ್ಯಯಾ ॥ ೧**

**ಭಗವಂತನಿಂತೆಂದನು** – ಮಹಾಬಾಹು – ಅರ್ಜುನ, ನನ್ನ ಈ ಉತ್ಕೃಷ್ಟವಾದ ನುಡಿಯನ್ನು ಇನ್ನೂ ಕೇಳು. ನನ್ನ ಮಾತಿನಿಂದ ಸಂಪ್ರೀತನಾಗುವ ನಿನಗೆ ನಿನ್ನ ಹಿತಕಾಮನೆಯಿಂದ ಹೇಳುತ್ತಿದ್ದೇನೆ.

**ನ ಮೇ ವಿದುಃ ಸುರಗಣಾಃ ಪ್ರಭವಂ ನ ಮಹರ್ಷಯಃ ।**
**ಅಹಮಾದಿರ್ಹಿ ದೇವಾನಾಂ ಮಹರ್ಷೀಣಾಂ ಚ ಸರ್ವಶಃ ॥ ೨**

ನನ್ನ ಉತ್ಪತ್ತಿಯ ವಿಷಯವನ್ನು ದೇವಗಣಗಳೂ ತಿಳಿದಿಲ್ಲ, ಮಹರ್ಷಿಗಳೂ ತಿಳಿದಿಲ್ಲ. ಏಕೆಂದರೆ, ಈ ದೇವತೆಗಳಿಗೂ ಮಹರ್ಷಿಗಳಿಗೂ ಸರ್ವಪ್ರಕಾರ ದಲ್ಲಿಯೂ ನಾನೇ ಆದಿಯಾಗಿದ್ದೇನೆ.

**ಯೋ ಮಾಮಜಮನಾದಿಂ ಚ ವೇತ್ತಿ ಲೋಕಮಹೇಶ್ವರಮ್ ।**
**ಅಸಂಮೂಢಃ ಸ ಮರ್ತ್ಯೇಷು ಸರ್ವಪಾಪೈಃ ಪ್ರಮುಚ್ಯತೇ ॥ ೩**

ಯಾವಾತನು ನನ್ನನ್ನು ಅನಾದಿಯೆಂದೂ ಆದ್ದರಿಂದಲೇ ಜನ್ಮರಹಿತನೆಂದೂ ಲೋಕಗಳಿಗೆ ಮಹೇಶ್ವರನೆಂದೂ ತಿಳಿಯುತ್ತಾನೋ ಅವನು ಮಾನವರಲ್ಲಿ ಮೋಹರಹಿತನಾದವನು. ಆತನು (ತಿಳಿದು ಮಾಡಿದ ಮತ್ತು ತಿಳಿಯದೆ ಮಾಡಿದ) ಸಕಲ ಪಾಪಗಳಿಂದಲೂ ಬಿಡುಗಡೆ ಹೊಂದುತ್ತಾನೆ.

**ಬುದ್ಧಿರ್ಜ್ಞಾನಮಸಂಮೋಹಃ ಕ್ಷಮಾ ಸತ್ಯಂ ದಮಃ ಶಮಃ ।**
**ಸುಖಂ ದುಃಖಂ ಭವೋऽಭಾವೋ ಭಯಂ ಚಾಭಯಮೇವ ಚ ॥ ೪**

**ಅಹಿಂಸಾ ಸಮತಾ ತುಷ್ಟಿಸ್ತಪೋ ದಾನಂ ಯಶೋಽಯಶಃ ।**
**ಭವಂತಿ ಭಾವಾ ಭೂತಾನಾಂ ಮತ್ತ ಏವ ಪೃಥಗ್ವಿಧಾಃ ॥ ೫**

ಬುದ್ಧಿ (ಸೂಕ್ಷ್ಮವಿಷಯವನ್ನರಿಯುವ ಸಾಮರ್ಥ್ಯ), ಜ್ಞಾನ (ಆತ್ಮಾದಿ ವಿಷಯಗಳ ತಿಳಿವಳಿಕೆ), ಯುಕ್ತಾಯುಕ್ತವಿವೇಚನೆ, ತಾಳ್ಮೆ, ಸತ್ಯ, ಬಾಹ್ಯೇಂದ್ರಿಯನಿಗ್ರಹ, ಮನೋನಿಗ್ರಹ, ಸುಖ, ದುಃಖ, ಹುಟ್ಟುವುದು, ಹುಟ್ಟದಿರುವುದು, ಭಯ, ಅಭಯ – ಇವುಗಳಲ್ಲದೆ ಅಹಿಂಸೆ, ಸಮತೆ (ಚಿತ್ತವನ್ನು ಏರುಪೇರಿಲ್ಲದೆ ಇಟ್ಟುಕೊಳ್ಳುವುದು), ದೊರಕಿದ್ದರಲ್ಲಿ ತೃಪ್ತಿ, ತಪಸ್ಸು (ಇಂದ್ರಿಯಗಳನ್ನು ಬಿಗಿಹಿಡಿದು ದೇಹವನ್ನು ದಂಡಿಸುವುದು), ದಾನ, ಕೀರ್ತಿ, ಅಪಕೀರ್ತಿ – ಈ ಪ್ರಕಾರವಾದ ಬುದ್ಧಿಯೇ ಮೊದಲಾದ ಭಾವಗಳು ಸಕಲ ಪ್ರಾಣಿಗಳಿಗೆ ನನ್ನಿಂದಲೇ (ಅವರವರ ಕರ್ಮಾನುಸಾರವಾಗಿ) ನಾನಾ ಪ್ರಕಾರಗಳಾಗಿ ದೊರೆಯುತ್ತವೆ.

**ಮಹರ್ಷಯಃ ಸಪ್ತ ಪೂರ್ವೇ ಚತ್ವಾರೋ ಮನವಸ್ತಥಾ ।**
**ಮದ್ಭಾವಾ ಮಾನಸಾ ಜಾತಾ ಯೇಷಾಂ ಲೋಕ ಇಮಾಃ ಪ್ರಜಾಃ ॥ ೬**

ಪ್ರಾಚೀನರಾದ ಭೃಗು ಮೊದಲಾದ ಏಳು ಮಹರ್ಷಿಗಳು ಮತ್ತು ಸಾವರ್ಣರೆಂಬ ನಾಲ್ವರು ಮನುಗಳು – ಇವರೆಲ್ಲರೂ ನನ್ನ ಮನಸ್ಸಿನಿಂದ ಹುಟ್ಟಿದವರು; ನನ್ನಲ್ಲಿಯೇ ಇಟ್ಟ ಭಾವನೆಯುಳ್ಳವರು. ಲೋಕದಲ್ಲಿರುವ ಈ ಪ್ರಜೆಗಳೆಲ್ಲರೂ ಇವರಿಂದ ಜನಿಸಿದರು.

**ವಿವರಣೆ :** ಸಪ್ತರ್ಷಿಗಳ ಹೆಸರು ಮೂರು ಪ್ರಕಾರದಲ್ಲಿರುವುದು ಪ್ರಾಚೀನ ಗ್ರಂಥಗಳಲ್ಲಿ ಕಂಡುಬರುತ್ತದೆ. ಮಹಾಭಾರತದ ನಾರಾಯಣೀಯೋಪಾಖ್ಯಾನ ದಲ್ಲಿ ಭೃಗು, ಮರೀಚಿ, ಅತ್ರಿ, ಪುಲಸ್ತ್ಯ, ಪುಲಹ, ಕ್ರತು, ವಸಿಷ್ಠ – ಎಂಬ ಸಪ್ತರ್ಷಿಗಳನ್ನು ಹೆಸರಿಸಿ ಇವರು ಪ್ರವೃತ್ತಿಧರ್ಮಕ್ಕೆ ಕಾರಣರೆಂದು ಹೇಳಿರುವುದರಿಂದ, ಪ್ರಕೃತ ಇವರನ್ನೇ ಗ್ರಹಿಸುವುದು ಯುಕ್ತ. ಇನ್ನು ಮನುಗಳು ಹದಿನಾಲ್ಕು ಮಂದಿ. ಸ್ವಾಯಂಭುವ, ಸ್ವಾರೋಚಿಷ, ಔತ್ತಮೀ, ತಾಮಸ, ರೈವತ, ಚಾಕ್ಷುಷ, ವೈವಸ್ವತ – ಎಂಬ ಏಳು ಮಂದಿ ಒಂದು ವರ್ಗ. ಸಾವರ್ಣಿ, ದಕ್ಷಸಾವರ್ಣಿ, ಬ್ರಹ್ಮಸಾವರ್ಣಿ, ಧರ್ಮಸಾವರ್ಣಿ, ರುದ್ರಸಾವರ್ಣಿ, ದೇವ ಸಾವರ್ಣಿ, ಇಂದ್ರಸಾವರ್ಣಿ – ಎಂಬ ಏಳು ಮಂದಿ ಇನ್ನೊಂದು ವರ್ಗ. ಈ ಹದಿನಾಲ್ಕು ಮನುಗಳು ಕ್ರಮವಾಗಿ ಒಂದೊಂದು ಮನ್ವಂತರದ ಪ್ರಭುಗಳು.

ಹೀಗಿರುವಲ್ಲಿ ನಾಲ್ವರು ಮನುಗಳನ್ನು ಮಾತ್ರ ಇಲ್ಲಿ ಹೇಳಲು

ಕಾರಣವೇನು ? ಅವರು ಯಾರು ? ಶ್ರೀಶಾಂಕರಭಾಷ್ಯದಲ್ಲಿ 'ಚತ್ವಾರೋ ಮನವಃ' ಎಂಬುದಕ್ಕೆ 'ಸಾವರ್ಣಾ ಇತಿ ಪ್ರಸಿದ್ಧಾಃ' ಎಂದು ವಿವರಣೆ ಇದೆ. ಏಳು ಮಂದಿ 'ಸವರ್ಣಿ'ಗಳಿರುವಾಗ ಈ ನಾಲ್ವರು ಯಾರು ? ನಾಲ್ವರನ್ನೇ ಗ್ರಹಿಸಲು ನಿಮಿತ್ತವೇನು ? ಶ್ರೀರಾಮಾನುಜಾಚಾರ್ಯರೂ ಸಹ ನಾಲ್ವರು ಸಾವರ್ಣಿಕ ಮನುಗಳೆಂದು ಬರೆದಿದ್ದಾರೆ. ಕೆಲವರು 'ಪೂರ್ವೇ ಚತ್ವಾರಃ' ಎಂದರೆ ಸನಕ, ಸನಂದನ, ಸನಾತನ, ಸನತ್ಕುಮಾರರೆಂಬ ನಾಲ್ವರು ಬ್ರಹ್ಮಮಾನಸಪುತ್ರರೆಂದು ಹೇಳಿದ್ದಾರೆ. ಆದರೆ ಅವರು ನಿವೃತ್ತಿಮಾರ್ಗದವರು. 'ಯೇಷಾಂ ಲೋಕ ಇಮಾಃ ಪ್ರಜಾಃ' ಎಂಬ ಮುಂದಿನ ಮಾತಿಗೆ ವಿರೋಧವಾಗುತ್ತದೆ.

ಲೋಕಮಾನ್ಯ ತಿಲಕರು ತಮ್ಮ ಗೀತಾರಹಸ್ಯದ ಇದೇ ಶ್ಲೋಕದ ವಿವರಣೆಯಲ್ಲಿ 'ಪೂರ್ವೇ ಚತ್ವಾರಃ' ಎಂದು ವಿಭಾಗಿಸಿ, ವಾಸುದೇವ, ಸಂಕರ್ಷಣ, ಪ್ರದ್ಯುಮ್ನ, ಅನಿರುದ್ಧರೇ ಅವರೆಂದು ಹೇಳಿದ್ದಾರೆ. ಇವರಲ್ಲಿ ಕಡೆಯವನಾದ ಅನಿರುದ್ಧನಿಂದ (ಬ್ರಹ್ಮದೇವನಿಂದ) ಮರೀಚ್ಯಾದಿಗಳು ಹುಟ್ಟಿದರೆಂದು ಮಹಾಭಾರತದಲ್ಲಿ ಹೇಳಿದೆ (ಶಾಂತಿ. ೩೩೯–೩೪೦ರಿಂದ ೪೦, ೬೦–೭೨, ೩೪೦–೭೨ರಿಂದ ೩೧). ಈ ನಾಲ್ಕು ಮೂರ್ತಿಗಳಿಗೆ ಚತುರ್ವ್ಯೂಹವೆಂಬ ಸಂಜ್ಞೆಯಿದ್ದು, ಈ ಮೂರ್ತಿಗಳು ಸ್ವತಂತ್ರವಾದವು ಗಳೆಂಬ ಇನ್ನೊಂದು ಭಾಗವತಪಂಥವಿದ್ದರೂ ಅದು ಇಲ್ಲಿ ಗ್ರಾಹ್ಯವಲ್ಲವೆಂದು ಶ್ರೀ ತಿಲಕರು ಹೇಳಿದ್ದಾರೆ. ಆಂಧ್ರಪ್ರದೇಶದ ಶ್ರೀ ರಾಮರಾಯ ಕವಿಗಳು ಬರೆದ ಭಾಷ್ಯಾರ್ಕಪ್ರಕಾಶವೆಂಬ ವ್ಯಾಖ್ಯೆಯಲ್ಲಿ – ಮನುಗಳು ಹದಿನಾಲ್ಕು ಮಂದಿ ಇದ್ದರೂ ಒಂದು ಮನ್ವಂತರದಲ್ಲಿ ನಾಲ್ವರೇ ಪ್ರಜಾಸೃಷ್ಟಿಗೆ ಕಾರಣರೆಂದೂ ಅವರ ಹೆಸರುಗಳು ಬ್ರಹ್ಮಸಾವರ್ಣ, ರುದ್ರಸಾವರ್ಣ, ಧರ್ಮಸಾವರ್ಣ ಮತ್ತು ದಕ್ಷಸಾವರ್ಣ – ಎಂದೂ ಬರೆದಿದ್ದಾರೆ. ಇದಕ್ಕೆ ಆಧಾರವನ್ನು ತಿಳಿಸಿಲ್ಲ. ಆಧಾರವು ದೊರಕಿದರೆ ಈ ಪಕ್ಷವೇ ಭಾಷ್ಯಸಂಮತವಾಗುತ್ತದೆ.

**ಏತಾಂ ವಿಭೂತಿಂ ಯೋಗಂ ಚ ಮಮ ಯೋ ವೇತ್ತಿ ತತ್ತ್ವತಃ ।**
**ಸೋಽವಿಕಂಪೇನ ಯೋಗೇನ ಯುಜ್ಯತೇ ನಾತ್ರ ಸಂಶಯಃ ॥ ೭**

ನನ್ನ ಈ ವಿಭೂತಿಯನ್ನೂ (ಮಾಹಾತ್ಮ್ಯದ ವಿಸ್ತಾರವನ್ನೂ) ಯೋಗವನ್ನೂ ಎಂದರೆ ನಾನು ಮಾಡಿರುವ ಘಟನೆಯನ್ನೂ ಅಥವಾ ಯೋಗಸಾಮರ್ಥ್ಯವನ್ನೂ ಯಾವಾತನು ಇದ್ದಂತೆ ಯಥಾರ್ಥವಾಗಿ ತಿಳಿದುಕೊಳ್ಳುತ್ತಾನೋ ಅವನು (ಆತ್ಮ ವಿಷಯಕ) ಚಿತ್ತಸ್ಥೈರ್ಯದಿಂದ ಕೂಡಿದವನಾಗುತ್ತಾನೆ. ಈ ವಿಷಯದಲ್ಲಿ ಸಂದೇಹವಿಲ್ಲ.

**ಅಹಂ ಸರ್ವಸ್ಯ ಪ್ರಭವೋ ಮತ್ತಃ ಸರ್ವಂ ಪ್ರವರ್ತತೇ ।**
**ಇತಿ ಮತ್ವಾ ಭಜಂತೇ ಮಾಂ ಬುಧಾ ಭಾವಸಮನ್ವಿತಾಃ ॥ ೮**

ನಾನು ಈ ಸಮಸ್ತ ಜಗತ್ತಿನ ಜನ್ಮಸ್ಥಾನವೆಂದೂ ಸ್ಥಿತಿ, ನಾಶ, ಭೋಗ ಮೊದಲಾದದ್ದೆಲ್ಲವೂ ನನ್ನಿಂದ ನಡೆಯುತ್ತದೆಯೆಂದೂ ತಿಳಿದುಕೊಂಡಿರುವ ತತ್ತ್ವವಿದರು ಪರಮಾರ್ಥದಲ್ಲಿ ಅಭಿನಿವೇಶವೆಂಬ ಭಾವದಿಂದ ಕೂಡಿದವರಾಗಿ ನನ್ನನ್ನು ಭಜಿಸುತ್ತಾರೆ.

**ಟಿಪ್ಪಣಿ –** ಅಭಿನಿವೇಶ = ಪರಮಾರ್ಥತತ್ತ್ವದಲ್ಲಿ ಅತಿಶಯವಾದ ಅಭಿಮಾನ.

**ಮಚ್ಚಿತ್ತಾ ಮದ್ಗತಪ್ರಾಣಾಃ ಬೋಧಯಂತಃ ಪರಸ್ಪರಮ್ ।**
**ಕಥಯಂತಶ್ಚ ಮಾಂ ನಿತ್ಯಂ ತುಷ್ಯಂತಿ ಚ ರಮಂತಿ ಚ ॥ ೯**

ಆ ಜನರು ನನ್ನಲ್ಲಿಯೇ ಚಿತ್ತವನ್ನಿಟ್ಟು, ನನ್ನಲ್ಲಿಯೇ ಪ್ರಾಣವನ್ನಿಟ್ಟು ಎಂದರೆ – ನನಗಾಗಿಯೇ ಬಾಳತಕ್ಕವರಾಗಿ, ಪರಸ್ಪರ ನನ್ನ ವಿಷಯವನ್ನು ತಿಳಿಸುತ್ತ, ನನ್ನ ವಿಚಾರವನ್ನು ಸದಾ ಹೇಳುತ್ತ ತೃಪ್ತರಾಗಿ ಆನಂದಿಸುತ್ತಾರೆ.

**ತೇಷಾಂ ನಿತ್ಯಾಭಿಯುಕ್ತಾನಾಂ ಭಜತಾಂ ಪ್ರೀತಿಪೂರ್ವಕಮ್ ।**
**ದದಾಮಿ ಬುದ್ಧಿಯೋಗಂ ತಂ ಯೇನ ಮಾಮುಪಯಾಂತಿ ತೇ ॥ ೧೦**

ಹೀಗೆ (ಬಾಹ್ಯವಿಷಯಗಳನ್ನು ತೊರೆದು) ಸರ್ವದಾ ನನ್ನಲ್ಲಿ ಆಸಕ್ತರಾಗಿ ಕೇವಲ ಪ್ರೇಮದಿಂದಲೇ ನನ್ನನ್ನು ಸೇವಿಸುವವರಿಗೆ ನಾನು ಬುದ್ಧಿಯೋಗವನ್ನು – ಎಂದರೆ – ಸಮ್ಯಗ್ದರ್ಶನದ ಯೋಗವನ್ನು ನೀಡುತ್ತೇನೆ. ಆ ಸಮ್ಯಗ್ ದರ್ಶನದಿಂದ ಅವರು ನನ್ನನ್ನು ಸೇರಿಕೊಳ್ಳುತ್ತಾರೆ.

**ತೇಷಾಮೇವಾನುಕಂಪಾರ್ಥಮಹಮಜ್ಞಾನಜಂ ತಮಃ ।**
**ನಾಶಯಾಮ್ಯಾತ್ಮಭಾವಸ್ಥೋ ಜ್ಞಾನದೀಪೇನ ಭಾಸ್ವತಾ ॥ ೧೧**

ನಾನು ಆ ಭಕ್ತಜನರ ಮೇಲಿರುವ ಕನಿಕರದಿಂದ, ಅವರ ಅಂತಃಕರಣ ದಲ್ಲಿಯೇ ಇದ್ದುಕೊಂಡು ಅವಿವೇಕಜನ್ಯವಾದ ತಪ್ಪು ತಿಳಿವಳಿಕೆಯೆಂಬ ಕತ್ತಲೆಯನ್ನು ಪ್ರಕಾಶಮಾನವಾದ ಜ್ಞಾನದೀಪದಿಂದ ನಾಶ ಮಾಡುವೆನು. (ಅವರಿಗೆ ಆತ್ಮಜ್ಞಾನವನ್ನು ನೀಡುವೆನು ಎಂದು ಅಭಿಪ್ರಾಯ)

**ವಿವರಣೆ :** ಅಜ್ಞಾನವೇ ಕತ್ತಲೆಯಾದರೂ 'ಅಜ್ಞಾನಜಂ ತಮಃ' ಎಂದು ಹೇಳಿರುವುದರಿಂದ ಅಜ್ಞಾನಶಬ್ದಕ್ಕೆ ಅವಿವೇಕವೆಂದು ಅರ್ಥವನ್ನು ಹೇಳಿದೆ.

ಉಳಿದ ಕಡೆ ಅಜ್ಞಾನವೆಂದರೆ ತಪ್ಪು ತಿಳಿವಳಿಕೆ. ಇಲ್ಲಿ ಜ್ಞಾನದೀಪ ಎಂಬ ರೂಪಕವನ್ನು ಭಾಷ್ಯಕಾರರು ಸುಂದರವಾಗಿ ಉಪಪಾದಿಸಿದ್ದಾರೆ – ಆತ್ಮನೇ ಸತ್ಯ, ಉಳಿದದ್ದು ಮಿಥ್ಯೆ – ಎಂಬ ವಿವೇಕಪ್ರತ್ಯಯವೇ ಜ್ಞಾನದೀಪದ ಆಕಾರ, ಭಕ್ತಿ ಈ ದೀಪದ ಎಣ್ಣೆ, ನನ್ನಲ್ಲಿಟ್ಟಿರುವ ಅಭಿಮಾನವೇ ಗಾಳಿ, ಬ್ರಹ್ಮಚರ್ಯಾದಿ ಸಾಧನಗಳಿಂದ ಸಂಸ್ಕೃತವಾದ ಪ್ರಜ್ಞೆಯೇ ಬತ್ತಿ, ವೈರಾಗ್ಯವನ್ನು ತಳೆದ ಅಂತಃಕರಣವೇ ದೀಪದ ಹಣತೆ, ರಾಗದ್ವೇಷಾದಿಗಳೆಂಬ ಗಾಳಿಯ ಹೊಡೆತ ವಿಲ್ಲದ ಮನಸ್ಸು ದೀಪವಿಡುವ ಕೋಣೆ, ಸಮ್ಯಗ್ದರ್ಶನವೆಂಬುದೇ ಜ್ಞಾನದೀಪದ ಪ್ರಭೆ.

**ಅರ್ಜುನ ಉವಾಚ –**

**ಪರಂ ಬ್ರಹ್ಮ ಪರಂ ಧಾಮ ಪವಿತ್ರಂ ಪರಮಂ ಭವಾನ್ ।**
**ಪುರುಷಂ ಶಾಶ್ವತಂ ದಿವ್ಯಮಾದಿದೇವಮಜಂ ವಿಭುಮ್ ॥ ೧೨**

**ಆಹುಸ್ತ್ವಾಮೃಷಯಃ ಸರ್ವೇ ದೇವರ್ಷಿರ್ನಾರದಸ್ತಥಾ ।**
**ಅಸಿತೋ ದೇವಲೋ ವ್ಯಾಸಃ ಸ್ವಯಂ ಚೈವ ಬ್ರವೀಷಿ ಮೇ ॥ ೧೩**

**ಅರ್ಜುನನು ಹೀಗೆಂದನು** – ನೀನು ಪರಮಾತ್ಮ, ಪರಮ ತೇಜಸ್ಸು, ಪರಮ ಪಾವನ. ನೀನು ಶಾಶ್ವತನಾದ ಪುರುಷನೆಂದೂ ಸ್ವರ್ಗದಲ್ಲಿರುವ ಆದಿದೇವನೆಂದೂ ಜನ್ಮರಹಿತನೆಂದೂ ಸರ್ವವ್ಯಾಪಕನಾದ ವಿಭುವೆಂದೂ ಋಷಿಗಳೆಲ್ಲರೂ ಹೇಳುತ್ತಾರೆ. ದೇವರ್ಷಿಯಾದ ನಾರದನೂ ಅಸಿತದೇವಲನೂ ವ್ಯಾಸಮುನಿಯೂ ಹಾಗೆಯೇ ಹೇಳುತ್ತಾರೆ. ಅಲ್ಲದೆ ಸ್ವತಃ ನೀನೇ ಹಾಗೆಂದು ನನಗೆ ಹೇಳುತ್ತಿದ್ದೀಯೆ.

**ಟಿಪ್ಪಣಿ :** ಅಸಿತ, ದೇವಲ – ಎಂದು ಇಬ್ಬರಲ್ಲ. ಅಸಿತದೇವಲನೆಂದು ಒಬ್ಬನೇ ಆದ ಋಷಿಯ ಹೆಸರು.

**ಸರ್ವಮೇತದೃತಂ ಮನ್ಯೇ ಯನ್ಮಾಂ ವದಸಿ ಕೇಶವ ।**
**ನ ಹಿ ತೇ ಭಗವನ್ ವ್ಯಕ್ತಿಂ ವಿದುರ್ದೇವಾ ನ ದಾನವಾಃ ॥ ೧೪**

ಹೇ ಕೇಶವ, ಇದೆಲ್ಲವೂ – ಋಷಿಗಳು ಹೇಳುವುದೂ–ನೀನು ಹೇಳುವುದೂ ಸತ್ಯವೆಂದೇ ನಾನು ನಂಬುತ್ತೇನೆ. ಹೇ ಭಗವನ್, ನಿನ್ನ ಅಭಿವ್ಯಕ್ತಿಯ ಮೂಲವೇನೆಂಬುದು ದೇವತೆಗಳಿಗೂ ಗೊತ್ತಿಲ್ಲ, ದಾನವರಿಗೂ ಗೊತ್ತಿಲ್ಲ. (ಏಕೆಂದರೆ, ನೀನು ಅವರೆಲ್ಲರಿಗೂ ಆದಿಯಾಗಿದ್ದೀಯೆ.)

**ಸ್ವಯಮೇವಾತ್ಮನಾತ್ಮಾನಂ ವೇತ್ಥ ತ್ವಂ ಪುರುಷೋತ್ತಮ ।**
**ಭೂತಭಾವನ ಭೂತೇಶ ದೇವದೇವ ಜಗತ್ಪತೇ ॥ ೧೫**

ಹೇ ಪುರುಷೋತ್ತಮ, ಭೂತಭಾವನ, ಭೂತೇಶ, ದೇವದೇವ, ಜಗದೀಶ್ವರ –ನೀನೇ ನಿನ್ನನ್ನು ನಿನ್ನಿಂದ ಅರಿತುಕೊಂಡಿದ್ದೀಯೆ.

**ವಿವರಣೆ :** ಭೂತಭಾವನ = ಸ್ಥಾವರಜಂಗಮಗಳೆಂಬ ಭೂತವಸ್ತುಗಳನ್ನು ಉತ್ಪಾದಿಸತಕ್ಕವನು.

**ವಕ್ತುಮರ್ಹಸ್ಯಶೇಷೇಣ ದಿವ್ಯಾ ಹ್ಯಾತ್ಮವಿಭೂತಯಃ ।**
**ಯಾಭಿರ್ವಿಭೂತಿಭಿರ್ಲೋಕಾನಿಮಾಂಸ್ತ್ವಂ ವ್ಯಾಪ್ಯ ತಿಷ್ಠಸಿ ॥ ೧೬**

ಯಾವ ವಿಭೂತಿಗಳಿಂದ – ಮಹಿಮಾನ್ವಿತ ವಸ್ತುರೂಪಗಳಿಂದ ನೀನು ಈ ಸಮಸ್ತ ಲೋಕಗಳನ್ನು ವ್ಯಾಪಿಸಿಕೊಂಡಿರುವೆಯೋ ಆ ವಿಭೂತಿಗಳು ದಿವ್ಯವಾದವುಗಳೇ ಸರಿ. ಅವನ್ನು ಒಂದೂ ಬಿಡದಂತೆ ಪೂರ್ತಿಯಾಗಿ ನೀನು ಹೇಳಬೇಕು.

**ಕಥಂ ವಿದ್ಯಾಮಹಂ ಯೋಗಿನ್ ತ್ವಾಂ ಸದಾ ಪರಿಚಿಂತಯನ್ ।**
**ಕೇಷು ಕೇಷು ಚ ಭಾವೇಷು ಚಿಂತ್ಯೋಽಸಿ ಭಗವನ್ಮಯಾ ॥ ೧೭**

ಎಲೈ ಯೋಗಿಯೆ, ನಿನ್ನನ್ನು ನಾನು ಸದಾ ಧ್ಯಾನಿಸುತ್ತಿದ್ದರೆ, ನಿನ್ನನ್ನು ಅರಿತುಕೊಳ್ಳುವುದು ಹೇಗೆ ? ಯಾವ ಯಾವ ಭಾವಗಳಲ್ಲಿ – ಪದಾರ್ಥಗಳಲ್ಲಿ, ಹೇ ಭಗವಂತ, ನಿನ್ನನ್ನು ಚಿಂತಿಸಬೇಕು ?

**ವಿಸ್ತರೇಣಾತ್ಮನೋ ಯೋಗಂ ವಿಭೂತಿಂ ಚ ಜನಾರ್ದನ ।**
**ಭೂಯಃ ಕಥಯ ತೃಪ್ತಿರ್ಹಿ ಶೃಣ್ವತೋ ನಾಸ್ತಿ ಮೇಽಮೃತಮ್ ॥ ೧೮**

ಜನಾರ್ದನ, ನಿನ್ನ ಯೋಗಸಾಮರ್ಥ್ಯವನ್ನೂ ಮಾಹಾತ್ಮ್ಯದ ವಿಸ್ತಾರವನ್ನೂ ಇನ್ನೂ ಹೇಳು. ನಿನ್ನ ವಾಕ್ಯಾಮೃತವನ್ನು ಎಷ್ಟು ಕೇಳಿದರೂ ನನಗೆ ತೃಪ್ತಿಯಾಗುವುದಿಲ್ಲ.

ಶ್ರೀಭಗವಾನುವಾಚ –

**ಹಂತ ತೇ ಕಥಯಿಷ್ಯಾಮಿ ದಿವ್ಯಾ ಹ್ಯಾತ್ಮವಿಭೂತಯಃ ।**
**ಪ್ರಾಧಾನ್ಯತಃ ಕುರುಶ್ರೇಷ್ಠ ನಾಸ್ತ್ಯಂತೋ ವಿಸ್ತರಸ್ಯ ಮೇ ॥ ೧೯**

**ಆಗ ಭಗವಂತನಿಂತೆಂದನು** – ಆಹಾ ! ಆಗಲಪ್ಪ ಅರ್ಜುನ, ದಿವ್ಯವಾದ ನನ್ನ ಆತ್ಮವಿಭೂತಿಗಳಿವೆಯಲ್ಲ, ಇವುಗಳಲ್ಲಿ ಮುಖ್ಯವಾದವನ್ನು ಆರಿಸಿ ನಿನಗೆ

ಹೇಳುವೆನು. ಅವುಗಳ ವಿಸ್ತಾರಕ್ಕೆ ಕೊನೆಯಿಲ್ಲ.

**ಅಹಮಾತ್ಮಾ ಗುಡಾಕೇಶ ಸರ್ವಭೂತಾಶಯಸ್ಥಿತಃ ।**
**ಅಹಮಾದಿಶ್ಚ ಮಧ್ಯಂ ಚ ಭೂತಾನಾಮಂತ ಏವ ಚ ॥ ೨೦**

ಎಲೈ ಗುಡಾಕೇಶ (ಅರ್ಜುನ), ನಾನು ಸರ್ವಪ್ರಾಣಿಗಳ ಹೃದಯುದಲ್ಲಿರುವ ಪ್ರತ್ಯಗಾತ್ಮನಾಗಿದ್ದೇನೆ. ಸಕಲ ಭೂತಗಳಿಗೂ ನಾನೇ ಆದಿಯಾದ ಉತ್ಪತ್ತಿ, ಮಧ್ಯದ ಸ್ಥಿತಿ, ಅಂತ್ಯದ ಪ್ರಳಯವೂ ಆಗಿದ್ದೇನೆ.

**ವಿವರಣೆ :** ಹೃದಯಸ್ಥನಾದ ಆತ್ಮನು ನಾನೆಂದು ಮೊದಲು ಹೇಳಿದ್ದರಿಂದ ಇದು ಬಹುಮುಖ್ಯವಾದ ವಿಭೂತಿ. 'ಹೃದಯಗತನಾದ ಪ್ರತ್ಯಗಾತ್ಮನೇ ನಾನು' ಎಂದು ಧ್ಯಾನಿಸುತ್ತಿರಬೇಕು. ಇದಾಗದಿದ್ದರೆ ಮುಂದೆ ಹೇಳುವ ವಸ್ತುಗಳಲ್ಲಿ ಪರಮಾತ್ಮನಿದ್ದಾನೆಂದು ಚಿಂತಿಸಬೇಕು. ಗುಡಾಕಾ ಎಂದರೆ ನಿದ್ರೆ ಅಥವಾ ಜಾಡ್ಯ. ಅದನ್ನು ಜಯಿಸಿದವನು – ಅದರ ಮೇಲೆ ಪ್ರಭುತ್ವವುಳ್ಳವನು ಗುಡಾಕೇಶ. ಕೆಲವರು ಗುಡಾ ಎಂದರೆ ದಟ್ಟವಾದ ಕೇಶ. ಕೇಶಗಳುಳ್ಳವನು ಗುಡಾಕೇಶ ಎಂದು ಹೇಳುತ್ತಾರೆ. ಗುಡಾಕೇಶನೆಂದರೆ ಅರ್ಜುನ. ಇದೊಂದು ರೂಢಶಬ್ದ.

**ಆದಿತ್ಯಾನಾಮಹಂ ವಿಷ್ಣುರ್ಜ್ಯೋತಿಷಾಂ ರವಿರಂಶುಮಾನ್ ।**
**ಮರೀಚಿರ್ಮರುತಾಮಸ್ಮಿ ನಕ್ಷತ್ರಾಣಾಮಹಂ ಶಶೀ ॥ ೨೧**

ದ್ವಾದಶಾದಿತ್ಯರಲ್ಲಿ ನಾನು ವಿಷ್ಣುವೆಂಬ ಆದಿತ್ಯನಾಗಿದ್ದೇನೆ. ಬೆಳಗುವ ಜ್ಯೋತಿಗಳಲ್ಲಿ ಪ್ರಶಸ್ತ ಕಿರಣಗಳುಳ್ಳ ರವಿಯಾಗಿದ್ದೇನೆ. ಮರುತ್ತುಗಳಲ್ಲಿ ಮರೀಚಿ ನಾನು. ನಕ್ಷತ್ರಗಳಿಗೆ ಪತಿಯಾದ ಚಂದ್ರ ನಾನು.

**ವಿವರಣೆ :** ದ್ವಾದಶಾದಿತ್ಯರು : ಧಾತೃ, ಮಿತ್ರ, ಅರ್ಯಮ, ಶಕ್ರ, ವರುಣ, ಅಂಶ, ಭಗ, ವಿವಸ್ವಾನ್, ಪೂಷ, ಸವಿತೃ, ತ್ವಷ್ಟೃ, ವಿಷ್ಣು – ಇದೊಂದು ಕ್ರಮ. ಇನ್ನೊಂದು ಕ್ರಮದಿಂದ – ಅಂಶ, ಭಗ, ಮಿತ್ರ, ವರುಣ, ಧಾತೃ, ಅರ್ಯಮ, ಜಯಂತ, ಭಾಸ್ಕರ, ತ್ವಷ್ಟೃ, ಪೂಷ, ಇಂದ್ರ, ವಿಷ್ಣು. ಇವರು ಅದಿತಿಯ ಮಕ್ಕಳಾದ್ದರಿಂದ ಆದಿತ್ಯರು. ಮರುದ್ದೇವತೆಗಳು ಏಳು ಜನರೆಂದೂ ನಲವತ್ತೊಂಬತ್ತು ಜನರೆಂದೂ ವರ್ಣನೆ ಇದೆ. ಅಶ್ವಿನ್ಯಾದಿ ತಾರೆಗಳಿಗೆ ಚಂದ್ರನು ಪತಿ.

**ವೇದಾನಾಂ ಸಾಮವೇದೋऽಸ್ಮಿ ದೇವಾನಾಮಸ್ಮಿ ವಾಸವಃ ।**
**ಇಂದ್ರಿಯಾಣಾಂ ಮನಶ್ಚಾಸ್ಮಿ ಭೂತಾನಾಮಸ್ಮಿ ಚೇತನಾ ॥ ೨೨**

ವೇದಗಳಲ್ಲಿ ಸಾಮವೇದವಾಗಿದ್ದೇನೆ. ರುದ್ರರು, ಆದಿತ್ಯರು – ಮೊದಲಾದ ದೇವತೆಗಳಲ್ಲಿ ಇಂದ್ರನೇ ನಾನು. ಇಂದ್ರಿಯಗಳಲ್ಲಿ ಮನಸ್ಸಾಗಿದ್ದೇನೆ. ದೇಹೇಂದ್ರಿಯಗಳಿಂದ ಕೂಡಿದ ಪ್ರಾಣಿದೇಹಗಳಲ್ಲಿ ಬುದ್ಧಿಯೆಂಬ ಅಂತಃಕರಣ ವೃತ್ತಿ ನಾನು.

**ವಿವರಣೆ :** ಸಾಮವೇದವು ಗೀತಿಯುಕ್ತವಾದ್ದರಿಂದಲೂ ಋಗ್ವೇದದ ಸಾರವೇ ಸಾಮವೇದವೆಂದೂ ಅದರಿಂದ ಓಂಕಾರವು ಹುಟ್ಟಿತೆಂದು ಛಾಂದೋಗ್ಯ ದಲ್ಲಿ (೧–೧–೨) ವರ್ಣನೆಯಿರುವುದರಿಂದಲೂ ಸಾಮವೇದಕ್ಕೆ ಪ್ರಾಶಸ್ತ್ಯವನ್ನು ಹೇಳಿರಬಹುದು. ಮನಸ್ಸು ಇಂದ್ರಿಯವೆಂದೂ ಇಂದ್ರಿಯವಲ್ಲವೆಂದೂ ಎರಡು ಪಕ್ಷಗಳಿವೆ. ಇಲ್ಲಿ ಮನಸ್ಸು ಇಂದ್ರಿಯವೆಂದು ಒಪ್ಪಲಾಗಿದೆ.

**ರುದ್ರಾಣಾಂ ಶಂಕರಶ್ಚಾಸ್ಮಿ ವಿತ್ತೇಶೋ ಯಕ್ಷರಕ್ಷಸಾಮ್ ।**
**ವಸೂನಾಂ ಪಾವಕಶ್ಚಾಸ್ಮಿ ಮೇರುಃ ಶಿಖರಿಣಾಮಹಮ್ ॥** ೨೩

ಏಕಾದಶರುದ್ರರಿಗೆ ಒಡೆಯನಾದ ಶಂಕರನಾಗಿದ್ದೇನೆ. ಯಕ್ಷರಾಕ್ಷಸರಲ್ಲಿ ಕುಬೇರನಾಗಿದ್ದೇನೆ. ಅಷ್ಟವಸುಗಳಲ್ಲಿ ಅನಲ ಎಂಬ ಹೆಸರಿನ ಪಾವಕನು ನಾನು. ಪರ್ವತಗಳಲ್ಲಿ ಮೇರುವಾಗಿದ್ದೇನೆ.

**ವಿವರಣೆ :** ಏಕಾದಶರುದ್ರರಲ್ಲಿ ಶಂಕರ ಎಂಬ ಹೆಸರು ಎಲ್ಲಿಯೂ ಇಲ್ಲದ ಕಾರಣ ಏಕಾದಶರುದ್ರರಿಗೆ ಒಡೆಯನೆಂದು ಅರ್ಥವನ್ನು ಬರೆದಿದೆ. ಅವರು ಯಾರೆಂದರೆ – ಅಜೈಕಪಾತ್, ಅಹಿರ್ಬುಧ್ನ್ಯ, ಪಿನಾಕಿ, ಅಪರಾಜಿತ, ಋತ, ಪಿತೃರೂಪ, ತ್ರ್ಯಂಬಕ, ವೃಷಾಕಪಿ, ಶಂಭು, ಹವನ ಮತ್ತು ಈಶ್ವರ (ಅನು. ಪರ್ವ ೧೫೦–೧೩) ಹರಿವಂಶ, ಪದ್ಮಪುರಾಣಗಳಲ್ಲಿ ಈ ಹೆಸರುಗಳ ವ್ಯತ್ಯಾಸವಿದೆ.

**ಪುರೋಧಸಾಂ ಚ ಮುಖ್ಯಂ ಮಾಂ ವಿದ್ಧಿ ಪಾರ್ಥ ಬೃಹಸ್ಪತಿಮ್ ।**
**ಸೇನಾನೀನಾಮಹಂ ಸ್ಕಂದಃ ಸರಸಾಮಸ್ಮಿ ಸಾಗರಃ ॥** ೨೪

ಪಾರ್ಥ, ರಾಜಪುರೋಹಿತರಲ್ಲಿ ಮುಖ್ಯನಾದ ಬೃಹಸ್ಪತಿಯೇ ನಾನೆಂದು ತಿಳಿ. ಸೇನಾಪತಿಗಳಲ್ಲಿ (ದೇವಸೇನಾಪತಿಯಾದ) ಷಣ್ಮುಖನು ನಾನು. ಜಲಾಶಯಗಳಲ್ಲಿ ಸಾಗರ ನಾನು.

**ಮಹರ್ಷೀಣಾಂ ಭೃಗುರಹಂ ಗಿರಾಮಸ್ಮ್ಯೇಕಮಕ್ಷರಮ್ ।**
**ಯಜ್ಞಾನಾಂ ಜಪಯಜ್ಞೋಽಸ್ಮಿ ಸ್ಥಾವರಾಣಾಂ ಹಿಮಾಲಯಃ ॥** ೨೫

ಮಹರ್ಷಿಗಳಲ್ಲಿ ನಾನು ಭೃಗುವಾಗಿದ್ದೇನೆ. ವಾಕ್ಕುಗಳಲ್ಲಿ ಏಕಾಕ್ಷರವಾದ

ಓಂಕಾರವಾಗಿದ್ದೇನೆ. ಯಜ್ಞಗಳಲ್ಲಿ ಜಪಯಜ್ಞವಾಗಿದ್ದೇನೆ. ಸ್ಥಾವರಗಳಲ್ಲಿ ಹಿಮಾಲಯಪರ್ವತವೇ ನಾನು.

**ವಿವರಣೆ :** ತ್ರಿಲೋಕಜನನಿಯಾದ ಲಕ್ಷ್ಮೀದೇವಿಗೆ ತಂದೆಯಾದ ಪ್ರಯುಕ್ತ ಭೃಗುವಿಗೆ ಪ್ರಾಶಸ್ತ್ಯ. ಜಪಯಜ್ಞವು ಹಿಂಸಾರಾಹಿತ್ಯದಿಂದಲೂ ಅಲ್ಪವ್ಯಯ ಸಾಧ್ಯವಾದ್ದರಿಂದಲೂ ಪ್ರಶಸ್ತ. ಅದು ಚಿತ್ತದ ಏಕಾಗ್ರತೆಗೂ ಚಿತ್ತಶುದ್ಧಿಗೂ ಹೆಚ್ಚು ಉಪಯುಕ್ತ.

**ಅಶ್ವತ್ಥಃ ಸರ್ವವೃಕ್ಷಾಣಾಂ ದೇವರ್ಷೀಣಾಂ ಚ ನಾರದಃ ।**
**ಗಂಧರ್ವಾಣಾಂ ಚಿತ್ರರಥಃ ಸಿದ್ಧಾನಾಂ ಕಪಿಲೋ ಮುನಿಃ ॥ ೨೬**

ವೃಕ್ಷಗಳಲ್ಲೆಲ್ಲ ಅಶ್ವತ್ಥವೃಕ್ಷವಾಗಿದ್ದೇನೆ. ದೇವರ್ಷಿಗಳಲ್ಲಿ ನಾರದನೂ ಗಂಧರ್ವರಲ್ಲಿ ಚಿತ್ರರಥನೂ ಆಗಿದ್ದೇನೆ. ಸಿದ್ಧಪುರುಷರಲ್ಲಿ – ಧರ್ಮ, ಜ್ಞಾನ, ವೈರಾಗ್ಯ, ಅಣಿಮಾದಿಸಿದ್ಧಿಗಳನ್ನು ಪಡೆದವರಲ್ಲಿ – ಕಪಿಲಮುನಿ ನಾನು.

**ಉಚ್ಚೈಃಶ್ರವಸಮಶ್ವಾನಾಂ ವಿದ್ಧಿ ಮಾಮಮೃತೋದ್ಭವಮ್ ।**
**ಐರಾವತಂ ಗಜೇಂದ್ರಾಣಾಂ ನರಾಣಾಂ ಚ ನರಾಧಿಪಮ್ ॥ ೨೭**

ಕುದುರೆಗಳ ನಡುವೆ, ಅಮೃತಕ್ಕಾಗಿ ಸಮುದ್ರವನ್ನು ಕಡೆದ ನಿಮಿತ್ತದಿಂದ, ಉಚ್ಚೈಃಶ್ರವಸ್ಸೆಂಬ ಅಶ್ವರಾಜನೇ ನಾನೆಂದು ತಿಳಿ. ಆನೆಗಳಲ್ಲಿ ನಾನು ಐರಾವತವೆಂದೂ ಮನುಷ್ಯರಲ್ಲಿ ಮನುಜೇಂದ್ರನಾದ ರಾಜನೆಂದೂ ತಿಳಿ.

**ಆಯುಧಾನಾಮಹಂ ವಜ್ರಂ ಧೇನೂನಾಮಸ್ಮಿ ಕಾಮಧುಕ್ ।**
**ಪ್ರಜನಶ್ಚಾಸ್ಮಿ ಕಂದರ್ಪಃ ಸರ್ಪಾಣಾಮಸ್ಮಿ ವಾಸುಕಿಃ ॥ ೨೮**

ಆಯುಧಗಳಲ್ಲಿ ನಾನು ವಜ್ರಾಯುಧ, ಧೇನುಗಳಲ್ಲಿ ಕಾಮಧೇನು, ಸಂತತಿಗೆ ಕಾರಣನಾದ ಮನ್ಮಥನು ನಾನು. ಸರ್ಪಗಳಲ್ಲಿ ವಾಸುಕಿಯಾಗಿರುವೆನು.

**ಅನಂತಶ್ಚಾಸ್ಮಿ ನಾಗಾನಾಂ ವರುಣೋ ಯಾದಸಾಮಹಮ್ ।**
**ಪಿತೄಣಾಮರ್ಯಮಾ ಚಾಸ್ಮಿ ಯಮಃ ಸಂಯಮತಾಮಹಮ್ ॥ ೨೯**

ನಾಗಗಳಲ್ಲಿ ನಾನು ನಾಗರಾಜನಾದ ಅನಂತನು. ಜಲವಾಸಿಗಳಲ್ಲಿ ನಾನು ವರುಣ. ಪಿತೃಗಳಲ್ಲಿ ನಾನು ಅರ್ಯಮನೆಂಬ ಪಿತೃವಾಗಿದ್ದೇನೆ. ನಿಯಾಮಕರಲ್ಲಿ ನಾನು ಯಮನಾಗಿದ್ದೇನೆ.

**ವಿವರಣೆ :** ಸರ್ಪ, ನಾಗ – ಇವೆರಡರಲ್ಲಿ ಒಳಭೇದವಿದೆ. ಅದೇನೆಂಬುದು ನಿಶ್ಚಿತವಾಗಿ ತಿಳಿಯುವುದಿಲ್ಲ. ಶ್ರೀಧರೀಯ ಟೀಕೆಯಲ್ಲಿ ಸರ್ಪವು

ವಿಷವುಳ್ಳದ್ದೆಂದೂ ನಾಗವು ವಿಷರಹಿತವೆಂದೂ ಹೇಳಿದೆ. ಶ್ರೀರಾಮಾನುಜ ಭಾಷ್ಯದಲ್ಲಿ ಸರ್ಪವು ಒಂದು ಹೆಡೆಯುಳ್ಳದ್ದೆಂದೂ ನಾಗವು ಅನೇಕ ಹೆಡೆಯುಳ್ಳ ದ್ದೆಂದೂ ಬರೆದಿದೆ. ಅನಂತ, ವಾಸುಕಿಗಳೆರಡೂ ಅನೇಕ ಹೆಡೆಯುಳ್ಳವೂ ವಿಷಸಹಿತಗಳೂ ಎಂದು ಪುರಾಣಗಳಲ್ಲಿ ವರ್ಣಿಸಿದ್ದುಂಟು. ಅನಂತನು ಅಗ್ನಿವರ್ಣದವನೆಂದೂ ವಾಸುಕಿಯು ಅರಿಸಿನ ಬಣ್ಣದವನೆಂದೂ ಹೇಳಿದ್ದುಂಟು. ಸರ್ಪಗಳು ಮಹಾತಲದಲ್ಲಿಯೂ ನಾಗಗಳು ಪಾತಾಳದಲ್ಲಿಯೂ ಇರುತ್ತವೆ ಯೆಂದು ಭಾಗವತದಲ್ಲಿ ಹೇಳಿದೆ (೫. ೨೪–೨೯, ೩೧).

**ಪ್ರಹ್ಲಾದಶ್ಚಾಸ್ಮಿ ದೈತ್ಯಾನಾಂ ಕಾಲಃ ಕಲಯತಾಮಹಮ್ ।**
**ಮೃಗಾಣಾಂ ಚ ಮೃಗೇಂದ್ರೋಽಹಂ ವೈನತೇಯಶ್ಚ ಪಕ್ಷಿಣಾಮ್ ॥ ೩೦**

ದೈತ್ಯರಲ್ಲಿ ನಾನು ಪ್ರಹ್ಲಾದನೂ ಗಣನೆಮಾಡತಕ್ಕವರಲ್ಲಿ ಕಾಲನೂ ಆಗಿದ್ದೇನೆ. ಮೃಗಗಳಲ್ಲಿ ಸಿಂಹ ಅಥವಾ ಹುಲಿ ನಾನು. ಪಕ್ಷಿಗಳಲ್ಲಿ ನಾನು ಗರುಡನಾಗಿದ್ದೇನೆ.

**ಪವನಃ ಪವತಾಮಸ್ಮಿ ರಾಮಃ ಶಸ್ತ್ರಭೃತಾಮಹಮ್ ।**
**ಝಷಾಣಾಂ ಮಕರಶ್ಚಾಸ್ಮಿ ಸ್ರೋತಸಾಮಸ್ಮಿ ಜಾಹ್ನವೀ ॥ ೩೧**

ಪಾವನಮಾಡತಕ್ಕವರಲ್ಲಿ ವಾಯು ನಾನು. ಶಸ್ತ್ರಧಾರಿಗಳಲ್ಲಿ (ದಶರಥ ಪುತ್ರನಾದ) ಶ್ರೀರಾಮ ನಾನು. ಮೀನುಗಳಲ್ಲಿ (ಜಲಚರಗಳಲ್ಲಿ) ಮಕರವೇ (shark) ನಾನು. ನದಿಗಳಲ್ಲಿ ಗಂಗಾನದಿಯಾಗಿದ್ದೇನೆ.

**ಸರ್ಗಾಣಾಮಾದಿರಂತಶ್ಚ ಮಧ್ಯಂ ಚೈವಾಹಮರ್ಜುನ ।**
**ಅಧ್ಯಾತ್ಮವಿದ್ಯಾ ವಿದ್ಯಾನಾಂ ವಾದಃ ಪ್ರವದತಾಮಹಮ್ ॥ ೩೨**

ಎಲ್ಲ ಸೃಷ್ಟಿಗಳಿಗೂ ಆದಿ, ಮಧ್ಯ, ಅಂತಗಳು ನಾನೇ. ಅರ್ಜುನ, ವಿದ್ಯೆಗಳಲ್ಲಿ ಅಧ್ಯಾತ್ಮವಿದ್ಯೆಯಾಗಿದ್ದೇನೆ. ವಾದ ಮಾಡುವವರಲ್ಲಿರುವ (ತತ್ತ್ವನಿರ್ಣಯಕ್ಕೆ ಉಪಯುಕ್ತವಾದ) ವಾದವೇ ನಾನು.

**ಅಕ್ಷರಾಣಾಮಕಾರೋಽಸ್ಮಿ ದ್ವಂದ್ವಃ ಸಾಮಾಸಿಕಸ್ಯ ಚ ।**
**ಅಹಮೇವಾಕ್ಷಯಃ ಕಾಲೋ ಧಾತಾಽಹಂ ವಿಶ್ವತೋಮುಖಃ ॥ ೩೩**

ಅಕ್ಷರಗಳಲ್ಲಿ ನಾನು ಅಕಾರವಾಗಿದ್ದೇನೆ. ಸಮಾಸಗಳ ಸಮೂಹದಲ್ಲಿ ನಾನು ದ್ವಂದ್ವಸಮಾಸ. ನಾನೇ ಎಂದಿಗೂ ಕ್ಷಯಿಸದಿರುವ ಕಾಲವಾಗಿದ್ದೇನೆ. ಅಥವಾ ಕಾಲಕ್ಕೂ ಮೂಲನಾದ ಕಾಲ(ಪರಮೇಶ್ವರ)ನಾಗಿದ್ದೇನೆ. ಸಕಲರಿಗೂ ಕರ್ಮ

ಫಲಗಳನ್ನು ನೀಡುವ ವಿಶ್ವತೋಮುಖನು ನಾನು.

**ವಿವರಣೆ :** ವರ್ಣಮಾಲೆಯಲ್ಲಿ ಆದಿಯಾದ್ದರಿಂದಲೂ ಬಾಯನ್ನು ತೆರೆದೊಡನೆ ಮೊದಲು ಅನಾಯಾಸವಾಗಿ ಹೊರಡುವುದರಿಂದಲೂ ಅಕಾರಕ್ಕೆ ಪ್ರಾಧಾನ್ಯ. ಸಮಾಸಗಳಲ್ಲಿ ಎಲ್ಲ ಶಬ್ದಾರ್ಥಗಳಿಗೂ ಪ್ರಾಧಾನ್ಯವಿರುವುದು ದ್ವಂದ್ವಸಮಾಸದಲ್ಲಿ ಮಾತ್ರ. ಆದ್ದರಿಂದ ಅದಕ್ಕೆ ಪ್ರಾಧಾನ್ಯ.

**ಮೃತ್ಯುಃ ಸರ್ವಹರಶ್ಚಾಹಮುದ್ಭವಶ್ಚ ಭವಿಷ್ಯತಾಮ್ ।**
**ಕೀರ್ತಿಃ ಶ್ರೀರ್ವಾಕ್ ಚ ನಾರೀಣಾಂ ಸ್ಮೃತಿರ್ಮೇಧಾ ಧೃತಿಃ ಕ್ಷಮಾ ॥**

ಸರ್ವಸ್ವವನ್ನೂ ಸರ್ವಜಗತ್ತನ್ನೂ ನಾಶಮಾಡಿಬಿಡಬಲ್ಲ ಮೃತ್ಯು ನಾನು. ಭವಿಷ್ಯತ್ತಿನಲ್ಲಿ ಯಾರಿಗೆ ಕಲ್ಯಾಣವಾಗಲಿದೆಯೋ ಅವರಿಗೆ ಅಭ್ಯುದಯ ಕಾರಣನು ನಾನು. ಸ್ತ್ರೀವರ್ಗದಲ್ಲಿ ಕೀರ್ತಿ, ಶ್ರೀ, ವಾಕ್, ಸ್ಮೃತಿ, ಮೇಧಾ, ಧೃತಿ, ಕ್ಷಮೆಗಳು ನಾನು.

**ವಿವರಣೆ :** ಕೀರ್ತಿ ಮೊದಲಾದ ಶಬ್ದಗಳು ಸ್ತ್ರೀಲಿಂಗದಲ್ಲಿರುವುದರಿಂದ ಸ್ತ್ರೀಯರೆಂದು ಗಣಿಸಿದೆ. ಅಥವಾ ಕೀರ್ತಿ ಮೊದಲಾದವುಗಳ ಅಧಿದೇವತೆಗಳೆಂದೂ ಹೇಳಬಹುದು. ಇವರು ಸ್ತ್ರೀಯರಲ್ಲಿ ಉತ್ತಮರು. ಇವರ ನೆರಳು ಸೋಂಕಿದರೂ ಮನುಷ್ಯನು ತನ್ನನ್ನು ಕೃತಾರ್ಥನೆಂದು ತಿಳಿಯುತ್ತಾನೆ.

**ಬೃಹತ್ಸಾಮ ತಥಾ ಸಾಮ್ನಾಂ ಗಾಯತ್ರೀ ಛಂದಸಾಮಹಮ್ ।**
**ಮಾಸಾನಾಂ ಮಾರ್ಗಶೀರ್ಷೋಽಹಮೃತೂನಾಂ ಕುಸುಮಾಕರಃ ॥ ೩೫**

ಸಾಮಗಳಲ್ಲಿ ಪ್ರಧಾನವಾದ ಬೃಹತ್ಸಾಮವು ನಾನು. ಛಂದಸ್ಸುಗಳಲ್ಲಿ ನಾನು ಗಾಯತ್ರೀಛಂದಸ್ಸು (ಛಂದೋವಿಶಿಷ್ಟವಾದ ಋಕ್ಕುಗಳಲ್ಲಿ ಗಾಯತ್ರೀ ಮಂತ್ರ ನಾನು ಎಂದರ್ಥ). ಮಾಸಗಳಲ್ಲಿ ಮಾರ್ಗಶೀರ್ಷ ಮಾಸವೂ ಋತುಗಳಲ್ಲಿ ವಸಂತಋತುವೂ ಆಗಿದ್ದೇನೆ.

**ವಿವರಣೆ :** ಪೈರುಗಳು ಪಕ್ವವಾಗುವ ಕಾಲವು ಮಾರ್ಗಶೀರ್ಷ. ಚೈತ್ರಾದಿ ಮಾಸಗಳನ್ನು ಹಿಂದೆ ಮಾರ್ಗಶೀರ್ಷದಿಂದ ಗಣಿಸುತ್ತಿದ್ದರೆಂದೂ ಆದ್ದರಿಂದ ಆ ಮಾಸಕ್ಕೆ ಆಗ್ರಹಾಯಣೀ (ವರ್ಷದ ಆದಿಮಾಸ) ಎಂಬ ಹೆಸರಿತ್ತೆಂದೂ ಲೋಕಮಾನ್ಯ ತಿಲಕರ ಅಭಿಪ್ರಾಯವಿದೆ.

**ದ್ಯೂತಂ ಛಲಯತಾಮಸ್ಮಿ ತೇಜಸ್ತೇಜಸ್ವಿನಾಮಹಮ್ ।**
**ಜಯೋಽಸ್ಮಿ ವ್ಯವಸಾಯೋಽಸ್ಮಿ ಸತ್ತ್ವಂ ಸತ್ತ್ವವತಾಮಹಮ್ ॥ ೩೬**

ವಂಚಕರಲ್ಲಿ ನಾನು ಜೂಜಾಗಿದ್ದೇನೆ. ತೇಜಸ್ವಿಗಳ ತೇಜಸ್ಸು ನಾನು. ಜಯಶಾಲಿಗಳಿಗೆ ಜಯವೂ ನಿಶ್ಚಯಿಸತಕ್ಕವರ ನಿಶ್ಚಯವೂ ಸಾತ್ತ್ವಿಕರಲ್ಲಿ ಸತ್ತ್ವವೂ ನಾನೇ ಆಗಿದ್ದೇನೆ.

**ವೃಷ್ಣೀನಾಂ ವಾಸುದೇವೋಽಸ್ಮಿ ಪಾಂಡವಾನಾಂ ಧನಂಜಯಃ ।**
**ಮುನೀನಾಮಪ್ಯಹಂ ವ್ಯಾಸಃ ಕವೀನಾಮುಶನಾ ಕವಿಃ ॥ ೩೭**

ಯಾದವರಲ್ಲಿ ವಸುದೇವನ ಮಗನಾದ ವಾಸುದೇವ ನಾನು. ಪಾಂಡವರಲ್ಲಿ ಅರ್ಜುನ(ನೀನೇ)ನಾಗಿದ್ದೇನೆ. ಜ್ಞಾನಿಗಳಾದ ಮುನಿಗಳಲ್ಲಿ ನಾನು ವ್ಯಾಸ ಮಹರ್ಷಿ. ಕ್ರಾಂತದರ್ಶಿಗಳಲ್ಲಿ (ದೂರದರ್ಶಿಗಳಲ್ಲಿ) ಉಶನನೆಂಬ ಕವಿ (ಶುಕ್ರಾಚಾರ್ಯ) ನಾನು.

**ದಂಡೋ ದಮಯತಾಮಸ್ಮಿ ನೀತಿರಸ್ಮಿ ಜಿಗೀಷತಾಮ್ ।**
**ಮೌನಂ ಚೈವಾಸ್ಮಿ ಗುಹ್ಯಾನಾಂ ಜ್ಞಾನಂ ಜ್ಞಾನವತಾಮಹಮ್ ॥ ೩೮**

ದಮನಮಾಡುವವರಲ್ಲಿ ದಮನಸಾಧನವಾದ ದಂಡ ನಾನು. ಜಯೇಚ್ಛುಗಳ ಕಾರ್ಯನೀತಿಯೇ ನಾನು. ಗೋಪ್ಯವಿಷಯಗಳಲ್ಲಿ ಮುಖ್ಯ ಕಾರಣವಾದ ಮೌನವೇ ನಾನು. ಜ್ಞಾನಿಗಳ ಜ್ಞಾನವು ನಾನು.

**ಯಚ್ಚಾಪಿ ಸರ್ವಭೂತಾನಾಂ ಬೀಜಂ ತದಹಮರ್ಜುನ ।**
**ನ ತದಸ್ತಿ ವಿನಾ ಯತ್ ಸ್ಯಾನ್ ಮಯಾ ಭೂತಂ ಚರಾಚರಮ್ ॥ ೩೯**

ಅರ್ಜುನ, ಸರ್ವಭೂತಗಳೂ ಹುಟ್ಟುವುದಕ್ಕೆ ಕಾರಣವಾದ ಬೀಜ ಯಾವುದೋ ಆ ಬೀಜವೇ ನಾನು. ನಾನಿಲ್ಲದೆ ಇರಬಹುದಾದ ಯಾವುದೇ ಒಂದು ಚರಾಚರವಸ್ತುವೂ ಇಲ್ಲ.

**ವಿವರಣೆ :** ಸ್ಥಾವರವಾಗಲಿ ಜಂಗಮವಾಗಲಿ ಯಾವುದೂ ನಾನಿಲ್ಲದೆ ಇರುವುದಿಲ್ಲ. ಏಕೆಂದರೆ, ನನ್ನನ್ನು ಬಿಟ್ಟರೆ ಆತ್ಮನೇ ಇಲ್ಲವಾಗಿ ಶೂನ್ಯವಾಗಿ ಬಿಡುವುದು. ಆದ್ದರಿಂದ ನಾನು ಎಲ್ಲಕ್ಕೂ ಆತ್ಮ ನಾನೇ ಎಲ್ಲವೂ ಎಂದು ತಾತ್ಪರ್ಯ. ಶೂನ್ಯವೆಂಬ ಕಲ್ಪನೆಗೂ ಸಾಕ್ಷಿಯಾಗಿ ಆತ್ಮನಿರಬೇಕಾಗುತ್ತದೆ. 'ಐತದಾತ್ಮ್ಯಮಿದಂ ಸರ್ವಂ' (ಛಾಂ. ೬–೭–೮).

**ನಾಂತೋಽಸ್ತಿ ಮಮ ದಿವ್ಯಾನಾಂ ವಿಭೂತೀನಾಂ ಪರಂತಪ ।**
**ಏಷ ತೂದ್ದೇಶತಃ ಪ್ರೋಕ್ತೋ ವಿಭೂತೇರ್ವಿಸ್ತರೋ ಮಯಾ ॥ ೪೦**

ಪರಂತಪ – ಅರ್ಜುನ, ನನ್ನ ದಿವ್ಯವಿಭೂತಿಗಳಿಗೆ ಕೊನೆಯೆಂಬುದೇ ಇಲ್ಲ.

ನನ್ನ ವಿಭೂತಿಯ ವಿಸ್ತರವನ್ನು ಕೇವಲ ಒಂದು ಅಂಶವಾಗಿ ನಿನಗೆ ಹೇಳಿದ್ದೇನೆ.

**ಯದ್ಯದ್ವಿಭೂತಿಮತ್ ಸತ್ತ್ವಂ ಶ್ರೀಮದೂರ್ಜಿತಮೇವ ವಾ ।**
**ತತ್ತದೇವಾವಗಚ್ಛ ತ್ವಂ ಮಮ ತೇಜೋಽಂಶಸಂಭವಮ್ ॥ ೪೧**

ಲೋಕದಲ್ಲಿ ಯಾವ ಸತ್ತ್ವವು ವೈಭವೋಪೇತವಾಗಿದೆಯೋ ಸಂಪದ್ಯುಕ್ತವಾಗಿದೆಯೋ ಅಥವಾ ಉತ್ಸಾಹಶಕ್ತಿಯುಕ್ತವಾಗಿದೆಯೋ ಅದೆಲ್ಲವೂ ನನ್ನ ತೇಜಸ್ಸಿನ ಒಂದು ಅಂಶದಿಂದಾಗಿದೆಯೆಂದು ತಿಳಿದುಕೊ.

**ಅಥವಾ ಬಹುನೈತೇನ ಕಿಂ ಜ್ಞಾತೇನ ತವಾರ್ಜುನ ।**
**ವಿಷ್ಟಭ್ಯಾಹಮಿದಂ ಕೃತ್ಸ್ನಮೇಕಾಂಶೇನ ಸ್ಥಿತೋ ಜಗತ್ ॥ ೪೨**

**ಇತಿ ಶ್ರೀಮದ್ಭಗವದ್ಗೀತಾಸೂಪನಿಷತ್ಸು ಬ್ರಹ್ಮವಿದ್ಯಾಯಾಂ ಯೋಗಶಾಸ್ತ್ರೇ**
**ವಿಭೂತಿಯೋಗೋ ನಾಮ ದಶಮೋಽಧ್ಯಾಯಃ**

ಅಥವಾ ಇಷ್ಟೊಂದು ಬಹಳವಾಗಿ ತಿಳಿದದ್ದರಿಂದ ನಿನಗೆ ಆಗುವುದೇನು, ಅರ್ಜುನ ? (ಎಷ್ಟು ಹೇಳಿದರೂ ಉಳಿದೇ ಇರುತ್ತದೆ). ಈ ಇಡಿಯ ಜಗತ್ತನ್ನೂ ಏಕಾಂಶದಿಂದ (ಸರ್ವಭೂತಗಳ ಸ್ವರೂಪವಾದ ಒಂದು ಪಾದದಿಂದ) ಹಿಡಿದಿಟ್ಟುಕೊಂಡಿದ್ದೇನೆ.

**ವಿವರಣೆ :** "ಪಾದೋಽಸ್ಯ ವಿಶ್ವಾಭೂತಾನಿ । ತ್ರಿಪಾದಸ್ಯಾಮೃತಂ ದಿವಿ ।... ಏತಾವಾನಸ್ಯ ಮಹಿಮಾ । ಅತೋ ಜ್ಯಾಯಾಗ್ಁಶ್ಚ ಪುರುಷಃ" ಎಂಬ ಪುರುಷ ಸೂಕ್ತದ ಸಾಲುಗಳಿಗೆ ಹೋಲಿಸಿ ನೋಡಬಹುದು.

**ಇಲ್ಲಿಗೆ ಶ್ರೀಮದ್ಭಗವದ್ಗೀತೆಯಲ್ಲಿ ವಿಭೂತಿಯೋಗವೆಂಬ**
**ಹತ್ತನೆಯ ಅಧ್ಯಾಯವು ಸಮಾಪ್ತವಾಯಿತು.**

## ೧೦ನೆಯ ಅಧ್ಯಾಯದ ಸಾರ

ಶ್ರೀಕೃಷ್ಣನು ಹೇಳಿದ್ದು : ಅರ್ಜುನ, ನಿನಗೆ ಒಳ್ಳೆಯದಾಗಲೆಂದು ಇನ್ನೂ ಹೇಳುತ್ತೇನೆ. ನನ್ನ ಆದಿಯು ದೇವತೆಗಳಿಗೂ ಗೊತ್ತಿಲ್ಲ, ಮಹರ್ಷಿಗಳಿಗೂ ಗೊತ್ತಿಲ್ಲ. ಏಕೆಂದರೆ, ನಾನೇ ಅವರಿಗೆಲ್ಲ ಆದಿಕಾರಣನಾಗಿದ್ದೇನೆ. ನಾನು ಅನಾದಿಯೆಂದೂ ವಿಶ್ವದ ಸಕಲ ಪ್ರಾಣಿಗಳಿಗೂ ಬುದ್ಧಿಯೇ ಮೊದಲಾದ್ದನ್ನು ಅನುಗ್ರಹಿಸತಕ್ಕವನೆಂದೂ ನನ್ನ ಸಂಕಲ್ಪಮಾತ್ರದಿಂದ ಮಹರ್ಷಿಗಳೇ

ಮೊದಲಾದವರೆಲ್ಲರೂ ಹುಟ್ಟುತ್ತಾರೆಂದೂ ಯಾರು ತಿಳಿಯುತ್ತಾರೋ ಅವರು ಉತ್ತಮವಾದ ಭಕ್ತಿಯೋಗವನ್ನು ಪಡೆಯುತ್ತಾರೆ. ಅವರ ಹೃದಯದಲ್ಲಿ ನಾನು ನೆಲೆಸಿ ಅವರ ಅಜ್ಞಾನವನ್ನು ಹೋಗಲಾಡಿಸಿ ಜ್ಞಾನದ ಬೆಳಕನ್ನು ನೀಡಿ ಅನುಗ್ರಹಿಸುತ್ತೇನೆ.

ನನ್ನ ವಿಭೂತಿಗಳಿಗೆ ಮಿತಿಯೇ ಇಲ್ಲ. ಅವು ಎಣಿಸಲು ಶಕ್ಯವಾದುವುಗಳಲ್ಲ. ಆದರೆ ಮುಖ್ಯವಾದ ಕೆಲವು ನನ್ನ ವಿಭೂತಿಗಳನ್ನು ತಿಳಿಸುತ್ತೇನೆ. ಅವುಗಳೇ ನಾನೆಂದು ಧ್ಯಾನಿಸಬಹುದು. ಅವುಗಳ ಅಂತರ್ಯಾಮಿಯೇ ನಾನೆಂದೂ ಇಟ್ಟುಕೊಳ್ಳಬಹುದು. ಎಲ್ಲರ ಹೃದಯದಲ್ಲಿಯೂ ನಾನು ನೆಲೆಸಿದ್ದೇನೆ. ಅವರ ಆತ್ಮವೇ ನಾನು. ಮನಸ್ಸು, ಚೇತನಾವ್ಯಾಪಾರ, ಶಂಕರ, ಕುಬೇರ, ಪಾವಕನೆಂಬ ವಸು, ಮೇರುಗಿರಿ, ಬೃಹಸ್ಪತಿ, ಸ್ಕಂದ, ಸಾಗರ, ಭೃಗುಮಹರ್ಷಿ, ಓಂಕಾರ, ಜಪಯಜ್ಞ, ಹಿಮಾಲಯ, ಅಶ್ವತ್ಥ, ನಾರದ – ಇತ್ಯಾದಿಗಳೆಲ್ಲವೂ ನಾನೇ. ಗಂಗಾನದಿಯೂ ನಾನು, ಅಕ್ಷರಗಳಲ್ಲಿ ಅಕಾರವೂ ಸಮಾಸಗಳಲ್ಲಿ ದ್ವಂದ್ವಸಮಾಸವೂ ನಾನೇ ಆಗಿದ್ದೇನೆ. ಅಧ್ಯಾತ್ಮವಿದ್ಯೆ, ವಾದ, ಕಾಲ – ಎಲ್ಲವೂ ನಾನೇ. ಗಾಯತ್ರೀಮಂತ್ರ ಮಾರ್ಗಶೀರ್ಷಮಾಸಗಳೂ ನಾನು. ಜೂಜಾಟವೂ ನಾನು. ಜಯವೂ ನಾನು. ರಾಜನೀತಿ, ಮೌನ, ಜೂಜು, ತೇಜಸ್ಸು, ವಾಸುದೇವ, ಅರ್ಜುನ, ವ್ಯಾಸ, ಶುಕ್ರಾಚಾರ್ಯ – ಎಲ್ಲವೂ ನಾನೇ. ನನ್ನ ವಿಭೂತಿಗಳೇ.

ನನ್ನನ್ನು ಬಿಟ್ಟು ಯಾವುದೂ ಇಲ್ಲ. ನನ್ನ ವಿಭೂತಿಗಳಿಗೆ ಪಾರವೇ ಇಲ್ಲದ್ದರಿಂದ ಕೆಲವನ್ನು ಮಾತ್ರ ಇಲ್ಲಿ ಹೇಳಿದ್ದೇನೆ. ಲೋಕದಲ್ಲಿ ಯಾವ ಯಾವುದು ತೇಜಸ್ಸು, ಮಹಿಮೆ, ಉತ್ಸಾಹಗಳಿಂದ ಕೂಡಿದೆಯೋ ಅದೆಲ್ಲವೂ ನನ್ನ ತೇಜಸ್ಸಿನ ಒಂದು ಅಂಶದಿಂದ ಹುಟ್ಟಿದೆಯೆಂದು ತಿಳಿ. ಸಮಸ್ತ ಜಗತ್ತೂ ನನ್ನ ಒಂದೇ ಒಂದು ಅಂಶದಿಂದ ಆಗಿದೆಯೆಂದು ತಿಳಿದುಕೊ.

## ಅಧ್ಯಾಯ ೧೧

# ವಿಶ್ವರೂಪದರ್ಶನಯೋಗ

ಹಿಂದಿನ ಅಧ್ಯಾಯದ ಕಡೆಯಲ್ಲಿ 'ವಿಷ್ಟಭ್ಯಾಹಮಿದಂ ಕೃತ್ಸ್ನಮೇಕಾಂಶೇನ ಸ್ಥಿತೋ ಜಗತ್' ಎಂದು ಭಗವಂತನು ತನ್ನ ವಿರಾಡ್ರೂಪವನ್ನು ಸೂಚಿಸಿದ್ದರಿಂದ ಅದನ್ನು ನೋಡಬೇಕೆಂದು ಬಯಸಿ ಅರ್ಜುನನು ಹೇಳುತ್ತಾನೆ.

**ಅರ್ಜುನ ಉವಾಚ -**

**ಮದನುಗ್ರಹಾಯ ಪರಮಂ ಗುಹ್ಯಮಧ್ಯಾತ್ಮಸಂಜ್ಞಿತಮ್ ।**
**ಯತ್ತ್ವಯೋಕ್ತಂ ವಚಸ್ತೇನ ಮೋಹೋಽಯಂ ವಿಗತೋ ಮಮ ॥ ೧**

**ಅರ್ಜುನನು ಇಂತೆಂದನು –** ನನ್ನನ್ನು ಅನುಗ್ರಹಿಸುವುದಕ್ಕಾಗಿ ಅತ್ಯಂತ ರಹಸ್ಯವಾದ ಅಧ್ಯಾತ್ಮವಿಷಯವನ್ನು ಹೇಳಿದೆಯಷ್ಟೆ; ಅದರಿಂದ ನನ್ನ ಮೋಹವು ತೊಲಗಿತು.

**ವಿವರಣೆ :** ಇಲ್ಲಿರುವ ಅಧ್ಯಾತ್ಮಶಬ್ದದಲ್ಲಿ ಆತ್ಮನೆಂದರೆ ಚೈತನ್ಯರೂಪನಾದ ಆತ್ಮನೇ, ದೇಹವಲ್ಲ. ಆತ್ಮ–ಅನಾತ್ಮಗಳನ್ನು ವಿಂಗಡಿಸಿ ತಿಳಿದುಕೊಳ್ಳದ್ದರಿಂದ ಉಂಟಾದ ಆತ್ಮವಿಷಯಕ ಭ್ರಾಂತಿಯೇ ಮೋಹ. ಈ ಶ್ಲೋಕದ ೧ನೆಯ ಪಾದದಲ್ಲಿ ೯ ಅಕ್ಷರಗಳಿರುವುದು ವಿಶೇಷ.

**ಭವಾಪ್ಯಯೌ ಹಿ ಭೂತಾನಾಂ ಶ್ರುತೌ ವಿಸ್ತರಶೋ ಮಯಾ ।**
**ತ್ವತ್ತಃ ಕಮಲಪತ್ರಾಕ್ಷ ಮಾಹಾತ್ಮ್ಯಮಪಿ ಚಾವ್ಯಯಮ್ ॥ ೨**

ಹೇ ಕಮಲಪತ್ರಾಕ್ಷ – ಶ್ರೀಕೃಷ್ಣ, ಈ ಭೂತವಸ್ತುಗಳ ಹುಟ್ಟು ನಾಶಗಳನ್ನು ವಿಸ್ತಾರವಾಗಿ ನಿನ್ನಿಂದ ಕೇಳಿದೆನು. ಶಾಶ್ವತವಾದ ನಿನ್ನ ಮಹಿಮೆಯನ್ನು ಕೇಳಿದ್ದಾಯಿತು.

**ಏವಮೇತದ್ಯಥಾತ್ಥ ತ್ವಮಾತ್ಮಾನಂ ಪರಮೇಶ್ವರ ।**
**ದ್ರಷ್ಟುಮಿಚ್ಛಾಮಿ ತೇ ರೂಪಮೈಶ್ವರಂ ಪುರುಷೋತ್ತಮ ॥ ೩**

ಪರಮೇಶ್ವರ, ನೀನು ಯಾವ ಪ್ರಕಾರ ಹೇಳುತ್ತಿದ್ದೀಯೋ ಅದೆಲ್ಲವೂ ಹಾಗೆಯೇ ಇದೆಯೆಂಬುದು ನಿಶ್ಚಯ. ಹೇ ಪುರುಷೋತ್ತಮ, ನಿನ್ನ ಈಶ್ವರೀಯ ರೂಪವನ್ನು ನೋಡಬೇಕೆಂದು ನನಗೆ ಬಯಕೆಯಾಗಿದೆ.

**ಮನ್ಯಸೇ ಯದಿ ತಚ್ಛಕ್ಯಂ ಮಯಾ ದ್ರಷ್ಟುಮಿತಿ ಪ್ರಭೋ ।**
**ಯೋಗೇಶ್ವರ ತತೋ ಮೇ ತ್ವಂ ದರ್ಶಯಾತ್ಮಾನಮವ್ಯಯಮ್ ॥ ೪**

ಹೇ ಸ್ವಾಮಿ, ಆ ರೂಪವನ್ನು ನೋಡಲು ನನಗೆ ಸಾಧ್ಯವೆಂದು ನೀನು ಭಾವಿಸುವುದಾದರೆ, ಯೋಗೇಶ್ವರ, ಅವ್ಯಯವಾದ ನಿನ್ನ ಆ ರೂಪವನ್ನು ನನಗೆ ತೋರಿಸು.

**ವಿವರಣೆ :** ಯೋಗೇಶ್ವರ = ಯೋಗಗಳ ಈಶ್ವರ. ಅಥವಾ ಯೋಗವುಳ್ಳವರು ಯೋಗಗಳು ಅವರೇ ಯೋಗಿಗಳು. ಯೋಗೀಶ್ವರನೆಂದರ್ಥ.

**ಶ್ರೀಭಗವಾನುವಾಚ –**

**ಪಶ್ಯ ಮೇ ಪಾರ್ಥ ರೂಪಾಣಿ ಶತಶೋಽಥ ಸಹಸ್ರಶಃ ।**
**ನಾನಾವಿಧಾನಿ ದಿವ್ಯಾನಿ ನಾನಾವರ್ಣಾಕೃತೀನಿ ಚ ॥ ೫**

**ಭಗವಂತನು ಹೀಗೆಂದನು –** ಹಾಗಾದರೆ, ಅರ್ಜುನ, ನಾನಾ ಪ್ರಕಾರವಾಗಿಯೂ ನಾನಾವರ್ಣಗಳಿಂದಲೂ ಆಕಾರಗಳಿಂದಲೂ ಕೂಡಿದ, ನನ್ನ ನೂರಾರು ಸಾವಿರಾರು ದಿವ್ಯರೂಪಗಳನ್ನು ನೋಡು !

**ಪಶ್ಯಾದಿತ್ಯಾನ್ ವಸೂನ್ ರುದ್ರಾನಶ್ವಿನೌ ಮರುತಸ್ತಥಾ ।**
**ಬಹೂನ್ಯದೃಷ್ಟಪೂರ್ವಾಣಿ ಪಶ್ಯಾಶ್ಚರ್ಯಾಣಿ ಭಾರತ ॥ ೬**

ಭರತಕುಲೋದ್ಭವ, ಆದಿತ್ಯರನ್ನೂ ವಸುಗಳನ್ನೂ ರುದ್ರರನ್ನೂ ಅಶ್ವಿನೀದೇವತೆಗಳನ್ನೂ ಮರುತ್ತುಗಳನ್ನೂ ನೋಡು. ಮತ್ತು ಯಾರೂ ಹಿಂದೆಂದೂ ಕಾಣದಿರುವ ವಿಪುಲವಾದ ಅದ್ಭುತಗಳನ್ನೂ ನೋಡು.

**ವಿವರಣೆ :** ದ್ವಾದಶ ಆದಿತ್ಯರು, ಅಷ್ಟವಸುಗಳು, ಏಕಾದಶರುದ್ರರು, ಇಬ್ಬರು ಅಶ್ವಿನೀದೇವತೆಗಳು, ನಲವತ್ತೊಂಬತ್ತು ಮರುತ್ತುಗಳು.

**ಇಹೈಕಸ್ಥಂ ಜಗತ್ ಕೃತ್ಸ್ನಂ ಪಶ್ಯಾದ್ಯ ಸಚರಾಚರಮ್ ।**
**ಮಮ ದೇಹೇ ಗುಡಾಕೇಶ ಯಚ್ಚಾನ್ಯದ್ದ್ರಷ್ಟುಮಿಚ್ಛಸಿ ॥ ೭**

ಗುಡಾಕೇಶ – ಅರ್ಜುನ, ಚರಾಚರಾತ್ಮಕವಾದ ಸಕಲಪ್ರಪಂಚವೂ ಒಂದೇ ಕಡೆಯಲ್ಲಿರುವುದನ್ನು ನನ್ನ ದೇಹದಲ್ಲಿ ನೋಡು. ಅಲ್ಲದೆ ಇನ್ನೇನನ್ನು ನೋಡಬೇಕೆಂದು ಬಯಸುವೆಯೋ, ಯುದ್ಧದಲ್ಲಿ ನಾವು ಜಯಿಸುತ್ತೇವೋ ಅಥವಾ ಅವರೇ ಜಯಿಸುತ್ತಾರೋ ಎಂಬ ಶಂಕೆಯನ್ನು ತೆಗೆದಿದ್ದೆಯಲ್ಲ, ಆ ಭವಿಷ್ಯತ್ತನ್ನೂ ನೋಡು !

**ನ ತು ಮಾಂ ಶಕ್ಯಸೇ ದ್ರಷ್ಟುಮನೇನೈವ ಸ್ವಚಕ್ಷುಷಾ ।**
**ದಿವ್ಯಂ ದದಾಮಿ ತೇ ಚಕ್ಷುಃ ಪಶ್ಯ ಮೇ ಯೋಗಮೈಶ್ವರಮ್ ॥ ೮**

ಆದರೆ ನಿನ್ನ ಈ ಪ್ರಾಕೃತವಾದ ಕಣ್ಣಿಂದಲೇ ನನ್ನನ್ನು ನೀನು ನೋಡಲು ಸಾಧ್ಯವಿಲ್ಲ. ಆದ್ದರಿಂದ ನಿನಗೆ ದಿವ್ಯಚಕ್ಷುಸ್ಸನ್ನು ಕೊಡುತ್ತೇನೆ. ಅದರಿಂದ ನನ್ನ ಈಶ್ವರೀಯ ಯೋಗಸಾಮರ್ಥ್ಯವನ್ನು ನೋಡು.

**ಸಂಜಯ ಉವಾಚ -**

**ಏವಮುಕ್ತ್ವಾ ತತೋ ರಾಜನ್ ಮಹಾಯೋಗೇಶ್ವರೋ ಹರಿಃ ।**
**ದರ್ಶಯಾಮಾಸ ಪಾರ್ಥಾಯ ಪರಮಂ ರೂಪಮೈಶ್ವರಮ್ ॥ ೯**

ಸಂಜಯನು ಹೀಗೆಂದನು –

ಮಹಾರಾಜ–ಧೃತರಾಷ್ಟ್ರ, ಈ ಪ್ರಕಾರವಾಗಿ ನುಡಿದು ಮಹಾಯೋಗೇಶ್ವರನಾದ ಶ್ರೀಹರಿಯು ತನ್ನ ಈಶ್ವರೀಯವಾದ ಪರಮರೂಪವನ್ನು (ವಿಶ್ವರೂಪವನ್ನು) ಅರ್ಜುನನಿಗೆ ತೋರಿಸಿದನು.

**ಅನೇಕವಕ್ತ್ರನಯನಮನೇಕಾದ್ಭುತದರ್ಶನಮ್ ।**
**ಅನೇಕದಿವ್ಯಾಭರಣಂ ದಿವ್ಯಾನೇಕೋದ್ಯತಾಯುಧಮ್ ॥ ೧೦**

ಆ ವಿಶ್ವರೂಪವು ಅನೇಕ ಮುಖಗಳಿಂದಲೂ ನಯನಗಳಿಂದಲೂ ಯುಕ್ತವಾಗಿ ಆಶ್ಚರ್ಯಕರವಾದ ಅನೇಕ ನೋಟಗಳಿಂದ ಕೂಡಿತ್ತು. ಅನೇಕ ದಿವ್ಯಾಭರಣಗಳನ್ನು ತೊಟ್ಟು ನಾನಾಬಗೆಯ ದಿವ್ಯಾಯುಧಗಳನ್ನು ಎತ್ತಿ ಹಿಡಿದಿತ್ತು. (ಅಂತಹ ರೂಪವನ್ನು ಅರ್ಜುನನಿಗೆ ತೋರಿಸಿದನು. ಹಿಂದಿನ ಶ್ಲೋಕದ 'ದರ್ಶಯಾಮಾಸ' ಎಂಬುದರೊಡನೆ ಸಂಬಂಧಿಸಿಕೊಳ್ಳಬೇಕು.)

**ದಿವ್ಯಮಾಲ್ಯಾಂಬರಧರಂ ದಿವ್ಯಗಂಧಾನುಲೇಪನಮ್ ।**
**ಸರ್ವಾಶ್ಚರ್ಯಮಯಂ ದೇವಮನಂತಂ ವಿಶ್ವತೋಮುಖಮ್ ॥ ೧೧**

ಅನಂತನೂ ಸರ್ವತೋಮುಖನೂ ಆದ ಆ ವಿಶ್ವರೂಪಧಾರಿ ದೇವನು ದಿವ್ಯವಾದ ಹೂಗಳನ್ನೂ ವಸ್ತ್ರಗಳನ್ನೂ ಧರಿಸಿದ್ದನು. ದಿವ್ಯಗಂಧವನ್ನು ಲೇಪಿಸಿಕೊಂಡು ಸರ್ವಾಶ್ಚರ್ಯಗಳಿಗೆ ನೆಲೆಯಾಗಿದ್ದನು. (ಅರ್ಜುನನು ಆ ದೇವನನ್ನು ನೋಡಿದನು. ಇಲ್ಲಿ 'ದದರ್ಶ' ಎಂದು ಅಧ್ಯಾಹಾರ. ಅಥವಾ ಇಂತಹ ದೇವನನ್ನು ತೋರಿಸಿದನು ಎಂದರ್ಥ. 'ದರ್ಶಯಾಮಾಸ' ಎಂಬುದರೊಡನೆ ಅನ್ವಯ.)

**ದಿವಿ ಸೂರ್ಯಸಹಸ್ರಸ್ಯ ಭವೇದ್ಯುಗಪದುತ್ಥಿತಾ ।**
**ಯದಿ ಭಾಃ ಸದೃಶೀ ಸಾ ಸ್ಯಾದ್ಭಾಸಸ್ತಸ್ಯ ಮಹಾತ್ಮನಃ ॥ ೧೨**

ಒಂದು ವೇಳೆ ದ್ಯುಲೋಕದಲ್ಲಿ ಸಾವಿರ ಸೂರ್ಯರು ಒಮ್ಮೆಗೇ ಉದಿಸಿದರೆ ಎಷ್ಟು ಪ್ರಕಾಶ ಉಂಟಾದೀತೋ ಆ ಪ್ರಕಾಶವು ಮಹಾತ್ಮನಾದ ಆ ಭಗವಂತನ ಪ್ರಕಾಶಕ್ಕೆ ಸಮವಾದೀತೋ ಏನೋ!

**ತತ್ರೈಕಸ್ಥಂ ಜಗತ್ ಕೃತ್ಸ್ನಂ ಪ್ರವಿಭಕ್ತಮನೇಕಧಾ ।**
**ಅಪಶ್ಯದ್ದೇವದೇವಸ್ಯ ಶರೀರೇ ಪಾಂಡವಸ್ತದಾ ॥ ೧೩**

ಆಗ ಆ ದೇವದೇವನ ದೇಹದಲ್ಲಿ ಸಮಸ್ತವಿಶ್ವವೂ ನಾನಾಪ್ರಕಾರವಾಗಿ (ದೇವಮನುಷ್ಯಾದಿರೂಪಗಳನ್ನು ಧರಿಸಿದ್ದಾಗಿ) ಒಂದೆಡೆಯಲ್ಲಿ ವಿಂಗಡವಾಗಿರುವುದನ್ನು ಅರ್ಜುನನು ಕಂಡನು.

**ತತಃ ಸ ವಿಸ್ಮಯಾವಿಷ್ಟೋ ಹೃಷ್ಟರೋಮಾ ಧನಂಜಯಃ ।**
**ಪ್ರಣಮ್ಯ ಶಿರಸಾ ದೇವಂ ಕೃತಾಂಜಲಿರಭಾಷತ ॥ ೧೪**

ಆ ವಿಶ್ವರೂಪವನ್ನು ನೋಡಿ ಅರ್ಜುನನು ಬೆರಗಾದನು. ಅವನ ರೋಮಗಳು ನಿಮಿರಿ ರೋಮಾಂಚಿತನಾದನು. ಅವನು ತಲೆಬಾಗಿ ಆ ದೇವನಿಗೆ ನಮಸ್ಕರಿಸಿ ಕೈಮುಗಿದುಕೊಂಡು ಹೀಗೆಂದನು :

**ಅರ್ಜುನ ಉವಾಚ –**

**ಪಶ್ಯಾಮಿ ದೇವಾಂಸ್ತವ ದೇವ ದೇಹೇ**
**ಸರ್ವಾಂಸ್ತಥಾ ಭೂತವಿಶೇಷಸಂಘಾನ್ ।**
**ಬ್ರಹ್ಮಾಣಮೀಶಂ ಕಮಲಾಸನಸ್ಥಂ**
**ಋಷೀಂಶ್ಚ ಸರ್ವಾನುರಗಾಂಶ್ಚ ದಿವ್ಯಾನ್ ॥ ೧೫**

**ಅರ್ಜುನನು ಹೇಳಿದ್ದೇನೆಂದರೆ –** ದೇವ, ನಿನ್ನ ದೇಹದಲ್ಲಿ ಎಲ್ಲ ದೇವತೆಗಳನ್ನೂ ಸ್ಥಾವರಜಂಗಮಾತ್ಮಕವಾದ ವಿವಿಧಾಕೃತಿಯ ಭೂತ ಸಂಘಗಳನ್ನೂ ನೋಡುತ್ತಿದ್ದೇನೆ. ಹಾಗೆಯೇ ಕಮಲಾಸನದಲ್ಲಿ ಕುಳಿತಿರುವ – ಎಂದರೆ – ಭೂಮಿಯೆಂಬ ಕಮಲದ ನಡುವೆ ಮೇರುವೆಂಬ ಕರ್ಣಿಕೆಯ ಮೇಲೆ ಕುಳಿತಿರುವ – ಪ್ರಜೇಶ್ವರನಾದ ಬ್ರಹ್ಮದೇವನನ್ನು ನೋಡುತ್ತಿದ್ದೇನೆ. ಸರ್ವಋಷಿಗಳನ್ನೂ ದಿವ್ಯರಾದ ವಾಸುಕಿಯೇ ಮೊದಲಾದ ಉರಗರನ್ನೂ ಕಾಣುತ್ತಿದ್ದೇನೆ.

**ಅನೇಕಬಾಹೂದರವಕ್ತ್ರನೇತ್ರಂ**
**ಪಶ್ಯಾಮಿ ತ್ವಾ ಸರ್ವತೋಽನಂತರೂಪಮ್ ।**
**ನಾಂತಂ ನ ಮಧ್ಯಂ ನ ಪುನಸ್ತವಾದಿಂ**
**ಪಶ್ಯಾಮಿ ವಿಶ್ವೇಶ್ವರ ವಿಶ್ವರೂಪ ॥** ೧೬

ಅನೇಕ ಬಾಹುಗಳಿಂದಲೂ ಅನೇಕ ಉದರಗಳಿಂದಲೂ ಅನೇಕ ಮುಖನೇತ್ರಗಳಿಂದಲೂ ಯುಕ್ತನಾದ ನೀನು ಅನಂತರೂಪನಾಗಿ ಎತ್ತ ನೋಡಿದರೆ ಅತ್ತ ಇರುವುದನ್ನು ಕಾಣುತ್ತಿದ್ದೇನೆ. ಹೇ ವಿಶ್ವೇಶ್ವರ, ವಿಶ್ವರೂಪ, ನಿನ್ನ ಕಡೆ ಯಾವುದೋ, ಮಧ್ಯ ಯಾವುದೋ, ಆದಿ ಯಾವುದೋ – ಎಂಬುದನ್ನು ಕಾಣದೆ ಹೋಗಿದ್ದೇನೆ.

**ಕಿರೀಟನಂ ಗದಿನಂ ಚಕ್ರಿಣಂ ಚ**
**ತೇಜೋರಾಶಿಂ ಸರ್ವತೋ ದೀಪ್ತಿಮಂತಮ್ ।**
**ಪಶ್ಯಾಮಿ ತ್ವಾಂ ದುರ್ನಿರೀಕ್ಷ್ಯಂ ಸಮಂತಾತ್**
**ದೀಪ್ತಾನಲಾರ್ಕದ್ಯುತಿಮಪ್ರಮೇಯಮ್ ॥** ೧೭

ಕಿರೀಟಧಾರಿಯಾಗಿ ಗದಾಚಕ್ರಗಳನ್ನು ಹಿಡಿದು ಎಲ್ಲ ಕಡೆಗೂ ಪ್ರಭೆಯನ್ನು ಚೆಲ್ಲುತ್ತಿರುವ ತೇಜೋರಾಶಿಯಾದ ನಿನ್ನನ್ನು ವೀಕ್ಷಿಸುತ್ತಿದ್ದೇನೆ. ಧಗಧಗಿಸುವ ಬೆಂಕಿಯಂತೆಯೂ ಸೂರ್ಯನಂತೆಯೂ ಸರ್ವತ್ರ ಬೆಳಕನ್ನು ಬೀರುತ್ತಿರುವ ನೀನು ಬುದ್ಧಿಗೆ ನಿಲುಕದವನು. ಕಣ್ಣು ಕುಕ್ಕುವಂತೆ ದುರ್ನಿರೀಕ್ಷ್ಯನಾದ ನಿನ್ನನ್ನು ಹೇಗೋ ಕಷ್ಟದಿಂದ ನೋಡುತ್ತಿದ್ದೇನೆ.

**ತ್ವಮಕ್ಷರಂ ಪರಮಂ ವೇದಿತವ್ಯಂ**
**ತ್ವಮಸ್ಯ ವಿಶ್ವಸ್ಯ ಪರಂ ನಿಧಾನಮ್ ।**
**ತ್ವಮವ್ಯಯಃ ಶಾಶ್ವತಧರ್ಮಗೋಪ್ತಾ**
**ಸನಾತನಸ್ತ್ವಂ ಪುರುಷೋ ಮತೋ ಮೇ ॥** ೧೮

(ಮುಮುಕ್ಷುಗಳು) ತಿಳಿಯಬೇಕಾಗಿರುವ ಶಾಶ್ವತವಾದ ಪರಮವಸ್ತು ನೀನು. ಈ ವಿಶ್ವಕ್ಕೆ ನೀನೇ ಪರಮಾಧಾರನಾಗಿದ್ದೀಯೆ. ನೀನು ಅವ್ಯಯ. ಶಾಶ್ವತವಾಗಿ ಧರ್ಮವನ್ನು ರಕ್ಷಿಸತಕ್ಕವನು ನೀನು. ಸನಾತನಪುರುಷ ನೀನೇ. ಇದು ನನ್ನ ನಿಶ್ಚಯ.

**ಅನಾದಿಮಧ್ಯಾಂತಮನಂತವೀರ್ಯಂ**
**ಅನಂತಬಾಹುಂ ಶಶಿಸೂರ್ಯನೇತ್ರಮ್ ।**
**ಪಶ್ಯಾಮಿ ತ್ವಾಂ ದೀಪ್ತಹುತಾಶವಕ್ತ್ರಂ**
**ಸ್ವತೇಜಸಾ ವಿಶ್ವಮಿದಂ ತಪಂತಮ್ ॥ ೧೯**

ಆದಿಮಧ್ಯಾಂತರಹಿತನೂ ಅನಂತವೀರ್ಯಶಾಲಿಯೂ ಆಗಿದ್ದೀಯೆ. ಲೆಕ್ಕವಿಲ್ಲದಷ್ಟು ನಿನಗೆ ತೋಳುಗಳಿವೆ. ಚಂದ್ರಸೂರ್ಯರೇ ನಿನ್ನ ಕಣ್ಣುಗಳಾಗಿದ್ದಾರೆ. ನಿನ್ನ ಬಾಯಿ ಉರಿಯುವ ಬೆಂಕಿಯಾಗಿದೆ. ನಿನ್ನ ತೇಜಸ್ಸಿನಿಂದ ಈ ವಿಶ್ವವನ್ನೇ ಸುಡುತ್ತಿದ್ದೀಯೆ. ಇಂತಹ ನಿನ್ನನ್ನು ನಾನು ಕಾಣುತ್ತಿದ್ದೇನೆ.

**ದ್ಯಾವಾಪೃಥಿವ್ಯೋರಿದಮಂತರಂ ಹಿ**
**ವ್ಯಾಪ್ತಂ ತ್ವಯೈಕೇನ ದಿಶಶ್ಚ ಸರ್ವಾಃ ।**
**ದೃಷ್ಟ್ವಾಽದ್ಭುತಂ ರೂಪಮುಗ್ರಂ ತವೇದಂ**
**ಲೋಕತ್ರಯಂ ಪ್ರವ್ಯಥಿತಂ ಮಹಾತ್ಮನ್ ॥ ೨೦**

ಸ್ವರ್ಗ-ಭೂಲೋಕಗಳ ನಡುವಣ ಭಾಗವನ್ನೂ ಸಮಸ್ತ ದಿಕ್ಕುಗಳನ್ನೂ (ವಿಶ್ವರೂಪಧರನಾದ) ನೀನೊಬ್ಬನೇ ವ್ಯಾಪಿಸಿಬಿಟ್ಟಿದ್ದೀಯೆ! ಓ ಮಹಾತ್ಮ, ಅದ್ಭುತವೂ ಉಗ್ರವೂ ಆದ ನಿನ್ನ ಈ ರೂಪವನ್ನು ಕಂಡು ಮೂರು ಲೋಕವೂ ತಲ್ಲಣಿಸಿಹೋಗಿದೆ.

**ಅಮೀ ಹಿ ತ್ವಾ ಸುರಸಂಘಾ ವಿಶಂತಿ**
**ಕೇಚಿದ್ಭೀತಾಃ ಪ್ರಾಂಜಲಯೋ ಗೃಣಂತಿ ।**
**ಸ್ವಸ್ತೀತ್ಯುಕ್ತ್ವಾ ಮಹರ್ಷಿಸಿದ್ಧಸಂಘಾಃ**
**ಸ್ತುವಂತಿ ತ್ವಾಂ ಸ್ತುತಿಭಿಃ ಪುಷ್ಕಲಾಭಿಃ ॥ ೨೧**

ಇದೋ ಈ ದೇವತಾಸಮುದಾಯಗಳು ನಿನ್ನ ದೇಹದೊಳಗೆ ಸೇರಿಹೋಗುತ್ತಿದ್ದಾರೆ. ಕೆಲವರು ಅಂಜಿ ಕೈಮುಗಿದು ಸ್ತುತಿಸುತ್ತಿದ್ದಾರೆ. ಈ ಮಹರ್ಷಿಗಳೂ ಸಿದ್ಧಪುರುಷರೂ "ಸ್ವಸ್ತಿ–ಲೋಕಕ್ಕೆ ಶುಭವಾಗಲಿ!" ಎಂದು ಹೇಳುತ್ತ ಪರಿಪರಿಯ ಸ್ತೋತ್ರಗಳಿಂದ ನಿನ್ನನ್ನು ಸ್ತುತಿಸುತ್ತಿದ್ದಾರೆ.

**ವಿವರಣೆ :** ಮುಂದಿನ ಶ್ಲೋಕದಲ್ಲಿ "ಎಲ್ಲ ದೇವತೆಗಳೂ ವಿಸ್ಮಿತರಾಗಿ ನಿನ್ನನ್ನು ನೋಡುತ್ತಿದ್ದಾರೆ" ಎಂದು ಹೇಳಿರುವುದರಿಂದ ಈ ಶ್ಲೋಕದಲ್ಲಿರುವ 'ಸುರ ಸಂಘಾಃ' ಎಂಬುದಕ್ಕೆ ಅರ್ಥಾಂತರವನ್ನು ಹೇಳುವುದು ಉಚಿತ. ಆದ್ದರಿಂದಲೇ ಶ್ರೀಶಾಂಕರಭಾಷ್ಯದಲ್ಲಿ "ಭೂಭಾರಹರಣಕ್ಕಾಗಿ ಅವತರಿಸಿ

ಮಾನುಷಜನ್ಮವನ್ನು ತಳೆದು ಯೋಧರಾಗಿ ಎದುರಿಗೆ ನಿಂತಿರುವ ದೇವತೆಗಳು" ಎಂದು ಅರ್ಥವನ್ನು ಹೇಳಲಾಗಿದೆ. ಅವರು ಮುಂದಿನ ಯುದ್ಧದಲ್ಲಿ ಸಾಯುತ್ತಾರೆ – ಎಂಬುದರ ಸೂಚನೆ ಇಲ್ಲಿದೆ. ಅವರೇ ಭೀಷ್ಮಾದಿಗಳು.

**ರುದ್ರಾದಿತ್ಯಾ ವಸವೋ ಯೇ ಚ ಸಾಧ್ಯಾಃ**
**ವಿಶ್ವೇಽಶ್ವಿನೌ ಮರುತಶ್ಚೋಷ್ಮಪಾಶ್ಚ ।**
**ಗಂಧರ್ವಯಕ್ಷಾಸುರಸಿದ್ಧಸಂಘಾಃ**
**ವೀಕ್ಷಂತೇ ತ್ವಾಂ ವಿಸ್ಮಿತಾಶ್ಚೈವ ಸರ್ವೇ ॥ ೨೨**

ಅಲ್ಲದೆ ರುದ್ರರು, ಆದಿತ್ಯರು, ವಸುಗಳು, ಸಾಧ್ಯರು, ವಿಶ್ವೇದೇವರು, ಅಶ್ವಿನೀ ದೇವತೆಗಳು, ಮರುತ್ತುಗಳು, ಪಿತೃಗಳು, ಗಂಧರ್ವಯಕ್ಷಾಸುರ ಸಿದ್ಧ ಸಮುದಾಯುಗಳು – ಎಲ್ಲರೂ ವಿಸ್ಮಿತರಾಗಿ ನಿನ್ನನ್ನೇ ನೋಡುತ್ತಿದ್ದಾರೆ.

**ರೂಪಂ ಮಹತ್ತೇ ಬಹುವಕ್ತ್ರನೇತ್ರಂ**
**ಮಹಾಬಾಹೋ ಬಹುಬಾಹೂರುಪಾದಮ್ ।**
**ಬಹೂದರಂ ಬಹುದಂಷ್ಟ್ರಾಕರಾಲಂ**
**ದೃಷ್ಟ್ವಾ ಲೋಕಾಃ ಪ್ರವ್ಯಥಿತಾಸ್ತಥಾಽಹಮ್ ॥ ೨೩**

ಓ ಮಹಾಬಾಹು – ಪರಮಾತ್ಮ ಅನೇಕ ಮುಖಗಳಿಂದಲೂ ಅನೇಕ ನೇತ್ರ ಗಳಿಂದಲೂ ಕೂಡಿರುವ, ಅಸಂಖ್ಯಾತವಾದ ತೋಳು, ತೊಡೆ, ಪಾದಗಳುಳ್ಳ, ಲೆಕ್ಕವಿಲ್ಲದಷ್ಟು ಉದರಗಳಿಂದ ಸಹಿತವಾದ, ಅಲ್ಲದೆ ಅಸಂಖ್ಯಾತ ಕೋರೆ ಹಲ್ಲುಗಳಿಂದ ಕರಾಳವಾದ ನಿನ್ನ ಅಳತೆಮೀರಿದ ರೂಪವನ್ನು ಕಂಡು ಲೋಕಗಳು ಹೆದರಿಹೋಗಿವೆ. ಹಾಗೆಯೇ ನಾನೂ ಹೆದರಿದ್ದೇನೆ.

**ನಭಃಸ್ಪೃಶಂ ದೀಪ್ತಮನೇಕವರ್ಣಂ**
**ವ್ಯಾತ್ತಾನನಂ ದೀಪ್ತವಿಶಾಲನೇತ್ರಮ್ ।**
**ದೃಷ್ಟ್ವಾ ಹಿ ತ್ವಾಂ ಪ್ರವ್ಯಥಿತಾಂತರಾತ್ಮಾ**
**ಧೃತಿಂ ನ ವಿಂದಾಮಿ ಶಮಂ ಚ ವಿಷ್ಣೋ ॥ ೨೪**

ಆಕಾಶಕ್ಕೆ ತಾಗುವಂತಹವನೂ ಜಗಜಗಿಸುವ ಕಾಂತಿಯುಳ್ಳವನೂ ನಾನಾ ಬಣ್ಣಗಳುಳ್ಳವನೂ ತೆರೆದ ಬಾಯಿಯುಳ್ಳವನಾಗಿ ಕೆಂಪಡರಿದ ಹೆಗ್ಗಣ್ಣುಗಳಿಂದ ಕೂಡಿದ ನಿನ್ನನ್ನು ನೋಡಿ, ಓ ಮಹಾವಿಷ್ಣುವೆ, ಒಳಗೊಳಗೆ ಬೆದರಿಹೋಗಿ ದ್ದೇನೆ. ನನಗೆ ಧೈರ್ಯವಿಲ್ಲ. ಮನಸ್ಸಿಗೆ ಶಾಂತಿ ಇಲ್ಲ.

**ದಂಷ್ಟ್ರಾಕರಾಲಾನಿ ಚ ತೇ ಮುಖಾನಿ**
**ದೃಷ್ಟ್ವೈವ ಕಾಲಾನಲಸಂನಿಭಾನಿ ।**
**ದಿಶೋ ನ ಜಾನೇ ನ ಲಭೇ ಚ ಶರ್ಮ**
**ಪ್ರಸೀದ ದೇವೇಶ ಜಗನ್ನಿವಾಸ ॥ ೨೫**

ಕೋರೆಹಲ್ಲುಗಳಿಂದ ವಿಕಾರವಾಗಿರುವ ಮತ್ತು ಪ್ರಳಯಕಾಲಾಗ್ನಿಯಂತೆ ಜಗಜಗಿಸುವ ನಿನ್ನ ಮುಖಗಳನ್ನು ಕಂಡಮಾತ್ರದಿಂದಲೇ ನಾನು ದಿಕ್ಕುಗೆಟ್ಟು ಹೋಗಿದ್ದೇನೆ. (ಏನು ಮಾಡಿದರೂ) ಮನಸ್ಸಿಗೆ ನೆಮ್ಮದಿಯಾಗದು. ದೇವೇಶ್ವರ, ಜಗನ್ನಿವಾಸ, ಪ್ರಸನ್ನನಾಗು.

**ಅಮೀ ಚ ತ್ವಾಂ ಧೃತರಾಷ್ಟ್ರಸ್ಯ ಪುತ್ರಾಃ**
**ಸರ್ವೇ ಸಹೈವಾವನಿಪಾಲಸಂಘೈಃ ।**
**ಭೀಷ್ಮೋ ದ್ರೋಣಃ ಸೂತಪುತ್ರಸ್ತಥಾಽಸೌ**
**ಸಹಾಸ್ಮದೀಯೈರಪಿ ಯೋಧಮುಖ್ಯೈಃ ॥ ೨೬**

ಭೂಪಾಲರ ಸಮುದಾಯದೊಡನೆ ಈ ಧೃತರಾಷ್ಟ್ರನ ಎಲ್ಲ ಮಕ್ಕಳೂ ಭೀಷ್ಮರೂ ದ್ರೋಣರೂ ಸೂತಪುತ್ರನಾದ ಆ ಕರ್ಣನೂ ಸಹ ನಮ್ಮವರಾದ ಕೆಲವು ಯೋಧಮುಖ್ಯರೊಡನೆ –

**ವಕ್ತ್ರಾಣಿ ತೇ ತ್ವರಮಾಣಾ ವಿಶಂತಿ**
**ದಂಷ್ಟ್ರಾಕರಾಲಾನಿ ಭಯಾನಕಾನಿ ।**
**ಕೇಚಿದ್ವಿಲಗ್ನಾ ದಶನಾಂತರೇಷು**
**ಸಂದೃಶ್ಯಂತೇ ಚೂರ್ಣಿತೈರುತ್ತಮಾಂಗೈಃ ॥ ೨೭**

ಕೋರೆಹಲ್ಲುಗಳಿಂದ ವಿಕಾರವಾಗಿಯೂ ಭೀಕರವಾಗಿಯೂ ಇರುವ ನಿನ್ನ ಬಾಯಿಗಳಲ್ಲಿ ತ್ವರೆಯಿಂದ ಬಂದು ಬಂದು ಬೀಳುತ್ತಲಿದ್ದಾರೆ. ಕೆಲವರು ನಿನ್ನ ಹಲ್ಲುಸಂದುಗಳಲ್ಲಿ ಸಿಕ್ಕಿಕೊಂಡು, ಅವರ ತಲೆಗಳು ಜಜ್ಜಿ ನುಚ್ಚುನೂರಾಗಿ ಕಾಣಿಸುತ್ತಾರೆ.

**ಯಥಾ ನದೀನಾಂ ಬಹವೋಽಂಬುವೇಗಾಃ**
**ಸಮುದ್ರಮೇವಾಭಿಮುಖಾ ದ್ರವಂತಿ ।**
**ತಥಾ ತವಾಮೀ ನರಲೋಕವೀರಾ**
**ವಿಶಂತಿ ವಕ್ತ್ರಾಣ್ಯಭಿವಿಜ್ವಲಂತಿ ॥ ೨೮**

ನದಿಗಳ ಅಸಂಖ್ಯಾತ ಜಲಪ್ರವಾಹಗಳು ಸಮುದ್ರದ ಕಡೆಗೆ ಅಭಿಮುಖವಾಗಿ

ಹೇಗೆ ಧಾವಿಸುತ್ತವೆಯೋ, ಹಾಗೆ ಈ ನರಲೋಕವೀರರು ಉರಿಯುವ ನಿನ್ನ ಬಾಯಿಗಳೊಳಗೆ ಧಾವಿಸಿ ಬಂದು ಬೀಳುತ್ತಿದ್ದಾರೆ!

**ಯಥಾ ಪ್ರದೀಪ್ತಂ ಜ್ವಲನಂ ಪತಂಗಾಃ**
**ವಿಶಂತಿ ನಾಶಾಯ ಸಮೃದ್ಧವೇಗಾಃ ।**
**ತಥೈವ ನಾಶಾಯ ವಿಶಂತಿ ಲೋಕಾಃ**
**ತವಾಪಿ ವಕ್ತ್ರಾಣಿ ಸಮೃದ್ಧವೇಗಾಃ ॥ ೨೯**

ದೀಪದ ಹುಳುಗಳು ಉರಿಯುವ ಬೆಂಕಿಯಲ್ಲಿ ಸಾಯುವುದಕ್ಕಾಗಿ ವೇಗದಿಂದ ಬಂದು ಹೇಗೆ ನುಗ್ಗುತ್ತವೆಯೋ ಹಾಗೆ ಈ ಲೋಕಗಳು ವೇಗದಿಂದ ಬಂದು ನಾಶವಾಗುವುದಕ್ಕಾಗಿ ನಿನ್ನ ಮುಖಗಳಲ್ಲಿ ನುಗ್ಗಿಹೋಗುತ್ತಿವೆ!

**ಲೇಲಿಹ್ಯಸೇ ಗ್ರಸಮಾನಃ ಸಮಂತಾತ್**
**ಲೋಕಾನ್ ಸಮಗ್ರಾನ್ ವದನೈರ್ಜ್ವಲದ್ಭಿಃ ।**
**ತೇಜೋಭಿರಾಪೂರ್ಯ ಜಗತ್ಸಮಗ್ರಂ**
**ಭಾಸಸ್ತವೋಗ್ರಾಃ ಪ್ರತಪಂತಿ ವಿಷ್ಣೋ ॥ ೩೦**

ಸುತ್ತಲೂ ಇರುವ ಸಮಸ್ತಲೋಕಗಳನ್ನೂ ನೀನು ನಿನ್ನ ಉರಿಯುವ ಬಾಯಿಗಳಿಂದ ನುಂಗುತ್ತ ಚಪ್ಪರಿಸುತ್ತಿದ್ದೀಯೆ! ಹೇ ವಿಷ್ಣುವೆ, ನಿನ್ನ ಉಗ್ರಕಿರಣಗಳು ಸಮಗ್ರ ಜಗತ್ತನ್ನೂ ತೇಜಸ್ಸುಗಳಿಂದ ವ್ಯಾಪಿಸಿ ಸುಡುತ್ತಿವೆ.

**ಆಖ್ಯಾಹಿ ಮೇ ಕೋ ಭವಾನುಗ್ರರೂಪೋ**
**ನಮೋಽಸ್ತು ತೇ ದೇವವರ ಪ್ರಸೀದ ।**
**ವಿಜ್ಞಾತುಮಿಚ್ಛಾಮಿ ಭವಂತಮಾದ್ಯಂ**
**ನ ಹಿ ಪ್ರಜಾನಾಮಿ ತವ ಪ್ರವೃತ್ತಿಮ್ ॥ ೩೧**

ಉಗ್ರರೂಪನಾದ ನೀನು ಯಾರೆಂದು ನನಗೆ ಹೇಳು. ಓ ದೇವೋತ್ತಮ! ನಿನಗೆ ನಮಸ್ಕಾರ! ಪ್ರಸನ್ನನಾಗು! ಸರ್ವಕ್ಕೂ ಆದಿಯಾದ ನಿನ್ನನ್ನು ತಿಳಿಯಲು ಬಯಸುತ್ತೇನೆ. ನಿನ್ನ ಉದ್ದೇಶವೇನೆಂಬುದನ್ನು ಅರಿಯದೆ ಹೋಗಿದ್ದೇನೆ.

**ಶ್ರೀಭಗವಾನುವಾಚ –**

**ಕಾಲೋಽಸ್ಮಿ ಲೋಕಕ್ಷಯಕೃತ್ ಪ್ರವೃದ್ಧೋ**
**ಲೋಕಾನ್ ಸಮಾಹರ್ತುಮಿಹ ಪ್ರವೃತ್ತಃ ।**

**ಋತೇऽಪಿ ತ್ವಾ ನ ಭವಿಷ್ಯಂತಿ ಸರ್ವೇ**
**ಯೇऽವಸ್ಥಿತಾಃ ಪ್ರತ್ಯನೀಕೇಷು ಯೋಧಾಃ ॥ ೩೨**

**ಭಗವಂತನು ಹೀಗೆಂದನು –** ಲೋಕಕ್ಷಯಕಾರಿಯಾಗಿ ಬೆಳೆದು ನಿಂತಿರುವ ಕಾಲಪುರುಷ ನಾನು! ಈ ಲೋಕದಲ್ಲಿರುವ ಈ ಜನರನ್ನು ಕೊಲ್ಲುವುದಕ್ಕೆ ತೊಡಗಿದ್ದೇನೆ! ಎದುರುಪಕ್ಷದಲ್ಲಿರುವ ಸಮಸ್ತ ಯೋಧರೂ (ಭೀಷ್ಮ ದ್ರೋಣಾದಿಗಳೂ ಸಹ) ನೀನಿಲ್ಲದಿದ್ದರೂ–ನೀನು ಯುದ್ಧ ಮಾಡದಿದ್ದರೂ ಯಾರೂ ಉಳಿಯುವುದಿಲ್ಲ!

**ತಸ್ಮಾತ್ತ್ವಮುತ್ತಿಷ್ಠ ಯಶೋ ಲಭಸ್ವ**
**ಜಿತ್ವಾ ಶತ್ರೂನ್ ಭುಂಕ್ಷ್ವ ರಾಜ್ಯಂ ಸಮೃದ್ಧಮ್ ।**
**ಮಯ್ಯೈವೈತೇ ನಿಹತಾಃ ಪೂರ್ವಮೇವ**
**ನಿಮಿತ್ತಮಾತ್ರಂ ಭವ ಸವ್ಯಸಾಚಿನ್ ॥ ೩೩**

ಆದ್ದರಿಂದ ನೀನು ಎದ್ದು ನಿಲ್ಲು. (ಭೀಷ್ಮದ್ರೋಣಾದಿ) ಶತ್ರುವೀರರನ್ನು ಅರ್ಜುನನು ಗೆದ್ದನೆಂಬ ಕೀರ್ತಿಯನ್ನು ಪಡೆ. ಸಕಲ ಸಮೃದ್ಧಿಯುಳ್ಳ ರಾಜ್ಯವನ್ನೂ ಉಪಭೋಗಿಸು. ಇವರೆಲ್ಲರನ್ನೂ ನಾನು ಮೊದಲೇ ಕೊಂದು ಬಿಟ್ಟಿದ್ದೇನೆ! ಸವ್ಯಸಾಚಿ – ಅರ್ಜುನ, ಕೇವಲ ನೆವದ ಮಟ್ಟಿಗೆ ನೀನು ಇರು!

**ದ್ರೋಣಂ ಚ ಭೀಷ್ಮಂ ಚ ಜಯದ್ರಥಂ ಚ**
**ಕರ್ಣಂ ತಥಾನ್ಯಾನಪಿ ಯೋಧವೀರಾನ್ ।**
**ಮಯಾ ಹತಾಂಸ್ತ್ವಂ ಜಹಿ ಮಾ ವ್ಯಥಿಷ್ಠಾಃ**
**ಯುಧ್ಯಸ್ವ ಜೇತಾಸಿ ರಣೇ ಸಪತ್ನಾನ್ ॥ ೩೪**

ದ್ರೋಣನನ್ನೂ ಭೀಷ್ಮನನ್ನೂ ಜಯದ್ರಥನನ್ನೂ ಕರ್ಣನನ್ನೂ ಅಲ್ಲದೆ ಇತರ ವೀರಯೋಧರನ್ನೂ ನಾನು ಈಗಾಗಲೇ ಕೊಂದುಬಿಟ್ಟಿದ್ದೇನೆ! ಅವರನ್ನು ನೀನು ನಿಮಿತ್ತಮಾತ್ರನಾಗಿ ಕೊಲ್ಲು. ಸುಮ್ಮನೆ ವ್ಯಥೆಪಡಬೇಡ. ಯುದ್ಧ ಮಾಡು. ಯುದ್ಧದಲ್ಲಿ ಶತ್ರುಗಳನ್ನು ನೀನು ಗೆಲ್ಲುವೆ.

**ವಿವರಣೆ :** ಭೀಷ್ಮ ದ್ರೋಣ, ಕರ್ಣ – ಈ ಮೂವರು ಮಹಾವೀರರೆಂಬುದು ಸರ್ವವಿದಿತ.

ಜಯದ್ರಥನ ತಂದೆ ವೃದ್ಧಕ್ಷತ್ರನೆಂಬುವನು "ನನ್ನ ಮಗ ಜಯದ್ರಥನ ತಲೆಯನ್ನು ಯಾವನು ನೆಲದ ಮೇಲೆ ಬೀಳಿಸುವನೋ ಅವನ ತಲೆಯೂ ನೆಲದ ಮೇಲುರುಳಲಿ!" ಎಂದು ತಪಸ್ಸು ಮಾಡಿದ್ದನು. ಮುಂದೆ ಅರ್ಜುನನು

ಜಯದ್ರಥನ ತಲೆಯನ್ನು ಕತ್ತರಿಸಿ, ವೃದ್ಧಕ್ಷತ್ರನ ಕೈಯಲ್ಲಿ ಬೀಳುವಂತೆ ಮಾಡಿದನು! ವೃದ್ಧಕ್ಷತ್ರನು ಸತ್ತುಹೋದನು. ಈ ನಾಲ್ವರನ್ನು ಗೆಲ್ಲುವುದು ಹೇಗೆಂದು ಅರ್ಜುನನಿಗೆ ಶಂಕೆ ಇತ್ತು.

**ಸಂಜಯ ಉವಾಚ –**

**ಏತಚ್ಛ್ರುತ್ವಾ ವಚನಂ ಕೇಶವಸ್ಯ**
**ಕೃತಾಂಜಲಿರ್ವೇಪಮಾನಃ ಕಿರೀಟೀ ।**
**ನಮಸ್ಕೃತ್ವಾ ಭೂಯ ಏವಾಹ ಕೃಷ್ಣಂ**
**ಸಗದ್ಗದಂ ಭೀತಭೀತಃ ಪ್ರಣಮ್ಯ ॥** ೩೫

ಸಂಜಯನು ಹೀಗೆಂದನು – ಮಹಾರಾಜ–ಧೃತರಾಷ್ಟ್ರ ವಿಶ್ವರೂಪ ಧಾರಿಯಾದ ಶ್ರೀಕೃಷ್ಣನ ಈ ಮಾತನ್ನು ಕೇಳಿದ ಅರ್ಜುನನು ಥರಥರನೆ ನಡುಗುತ್ತ ನಮಸ್ಕರಿಸಿ ಬೊಗಸೆಯೊಡ್ಡಿಕೊಂಡು ಹೆದಹೆದರುತ್ತಲೇ ತಲೆಬಾಗಿ ಗದ್ಗದ ಸ್ವರದಿಂದ ಶ್ರೀಕೃಷ್ಣನಿಗೆ ಮತ್ತೆ ಇಂತೆಂದನು.

**ಅರ್ಜುನ ಉವಾಚ –**

**ಸ್ಥಾನೇ ಹೃಷೀಕೇಶ ತವ ಪ್ರಕೀರ್ತ್ಯಾ**
**ಜಗತ್ ಪ್ರಹೃಷ್ಯತ್ಯನುರಜ್ಯತೇ ಚ ।**
**ರಕ್ಷಾಂಸಿ ಭೀತಾನಿ ದಿಶೋ ದ್ರವಂತಿ**
**ಸರ್ವೇ ನಮಸ್ಯಂತಿ ಚ ಸಿದ್ಧಸಂಘಾಃ ॥** ೩೬

ಹೃಷೀಕೇಶ, ನಿನ್ನ ಮಹಿಮೆಯ ಕೀರ್ತನದಿಂದ ಜಗತ್ತು ಆನಂದಿಸುವುದೂ ಕೀರ್ತನದಲ್ಲಿ ಅನುರಾಗವನ್ನಿಡುವುದೂ ಯುಕ್ತವೇ ಸರಿ. (ಜಗತ್ತಿನ ಹರ್ಷವೂ ಅನುರಾಗವೂ ಸರಿಯಾದ ಪಾತ್ರದಲ್ಲಿಯೇ). ರಾಕ್ಷಸರು ಹೆದರಿ ದಿಕ್ಕುದಿಕ್ಕಿಗೆ ಓಡಿಹೋಗುವುದೂ ಸಮಸ್ತ ಸಿದ್ಧಪುರುಷರೂ ನಿನಗೆ ನಮಸ್ಕಾರ ಮಾಡುತ್ತಿರುವುದೂ ಯುಕ್ತವಾಗಿಯೇ ಇದೆ.

**ಕಸ್ಮಾಚ್ಚ ತೇ ನ ನಮೇರನ್ ಮಹಾತ್ಮನ್**
**ಗರೀಯಸೇ ಬ್ರಹ್ಮಣೋಽಪ್ಯಾದಿಕರ್ತ್ರೇ ।**
**ಅನಂತ ದೇವೇಶ ಜಗನ್ನಿವಾಸ**
**ತ್ವಮಕ್ಷರಂ ಸದಸತ್ ತತ್ಪರಂ ಯತ್ ॥** ೩೭

ಓ ಮಹಾತ್ಮ ಹಿರಣ್ಯಗರ್ಭನಾದ ಬ್ರಹ್ಮದೇವನಿಗೂ ಮೂಲಕಾರಣನೂ

ಬಹು ದೊಡ್ಡವನೂ ಆದ ನಿನಗೆ ಆ ಸಿದ್ಧಪುರುಷರು ಹೇಗೆ ತಾನೇ ನಮಸ್ಕರಿಸದೆ ಇದ್ದಾರು ? ಹೇ ಅನಂತ, ದೇವೇಶ್ವರ, ಜಗತ್ತಿಗೆ ಆಧಾರಭೂತನೆ, ನೀನು ಸತ್ ಆಗಿದ್ದೀಯೆ, ಅಸತ್ ಆಗಿದ್ದೀಯೆ. ಪರಮಾರ್ಥದಲ್ಲಿ ಸದಸತ್ತುಗಳೆರಡನ್ನೂ ಮೀರಿದ ಶ್ರೇಷ್ಠವಾದ ಅಕ್ಷರವೇ ನೀನು.

**ವಿವರಣೆ :** ಜಗತ್ತು ಕಾಣುವಾಗ 'ಸತ್' ಎನಿಸುತ್ತದೆ. ಪ್ರಳಯದಲ್ಲಿ ವಿನಾಶವಾಗಿ ಸೂಕ್ಷ್ಮರೂಪದಲ್ಲಿದ್ದಾಗ 'ಅಸತ್' ಎನಿಸುತ್ತದೆ. ಇವೆರಡೂ ನೀನೇ. ಇವು ಕೇವಲ ಉಪಾಧಿಗಳು. ಪರಮಾರ್ಥದಲ್ಲಿ ಇವೆರಡನ್ನೂ ಮೀರಿ ನಿರ್ವಿಕಾರನೂ ಅಸಂಗನೂ ಆದ ಅಕ್ಷರನೇ ನೀನು ಎಂದು ಅಭಿಪ್ರಾಯ. ಪರಮಾತ್ಮನನ್ನು ಅಕ್ಷರನೆಂದು ಉಪನಿಷತ್ತುಗಳಲ್ಲಿ ಹೇಳಿದೆ (ಬೃಹ. ೩–೩–೮), (ಮುಂ. ೧–೧–೫).

**ತ್ವಮಾದಿದೇವಃ ಪುರುಷಃ ಪುರಾಣಃ**
**ತ್ವಮಸ್ಯ ವಿಶ್ವಸ್ಯ ಪರಂ ನಿಧಾನಮ್ ।**
**ವೇತ್ತಾಽಸಿ ವೇದ್ಯಂ ಚ ಪರಂ ಚ ಧಾಮ**
**ತ್ವಯಾ ತತಂ ವಿಶ್ವಮನಂತರೂಪ ॥** ೩೮

ಆದಿದೇವನೇ ನೀನು. ಪುರಾತನ ಪುರುಷ ನೀನು. ಈ ವಿಶ್ವಕ್ಕೆ ಪ್ರಕೃಷ್ಟವಾದ ಆಶ್ರಯವೇ ನೀನು. ತಿಳಿಯತಕ್ಕವನು ತಿಳಿಯಬೇಕಾದದ್ದು ಏನೇನಿದೆಯೋ ಅದೂ ನೀನೇ. ಉತ್ತಮವಾದ ಪರಂಧಾಮವೇ ನೀನು. ಹೇ ಅನಂತರೂಪ, ಈ ವಿಶ್ವವೆಲ್ಲವೂ ನಿನ್ನಿಂದ ವ್ಯಾಪ್ತವಾಗಿದೆ.

**ವಾಯುರ್ಯಮೋಽಗ್ನಿರ್ವರುಣಃ ಶಶಾಂಕಃ**
**ಪ್ರಜಾಪತಿಸ್ತ್ವಂ ಪ್ರಪಿತಾಮಹಶ್ಚ ।**
**ನಮೋ ನಮಸ್ತೇಽಸ್ತು ಸಹಸ್ರಕೃತ್ವಃ**
**ಪುನಶ್ಚ ಭೂಯೋಽಪಿ ನಮೋ ನಮಸ್ತೇ ॥** ೩೯

ವಾಯು, ಯಮ, ಅಗ್ನಿ, ವರುಣ, ಚಂದ್ರ – ಇವರೆಲ್ಲರೂ ನೀನೇ. (ಕಶ್ಯಪ, ದಕ್ಷ– ಮೊದಲಾದ) ಪ್ರಜಾಪತಿಗಳ ರೂಪದಲ್ಲಿರುವವನೂ ನೀನೇ. ಪಿತಾಮಹನಾದ ಬ್ರಹ್ಮನಿಗೂ ತಂದೆ ನೀನು. ನಿನಗೆ ನಮಸ್ಕಾರ. ನಿನಗೆ ಸಾವಿರ ಬಾರಿ ನಮಸ್ಕಾರವಿರಲಿ. ಮತ್ತು ಇನ್ನೊಮ್ಮೆ ನಮಸ್ಕಾರ ! ನಮೋ ನಮಃ !

**ನಮಃ ಪುರಸ್ತಾದಥ ಪೃಷ್ಠತಸ್ತೇ**
**ನಮೋऽಸ್ತು ತೇ ಸರ್ವತ ಏವ ಸರ್ವ ।**
**ಅನಂತವೀರ್ಯಾಮಿತವಿಕ್ರಮಸ್ತ್ವಂ**
**ಸರ್ವಂ ಸಮಾಪ್ನೋಷಿ ತತೋऽಸಿ ಸರ್ವಃ ॥ ೪೦**

ಹೇ ಸರ್ವಸ್ವರೂಪನೆ, ನಿನಗೆ ಮುಂದೆ ನಮಸ್ಕಾರ, ಹಿಂದೆ ನಮಸ್ಕಾರ, ಎಲ್ಲ ಕಡೆಯಲ್ಲಿಯೂ ನಿನಗೆ ನಮಸ್ಕಾರವಿರಲಿ! ನೀನು ಅನಂತವೀರ್ಯನು, ಅಮಿತಪರಾಕ್ರಮನು. ಸರ್ವವನ್ನೂ ವ್ಯಾಪಿಸಿಕೊಂಡದ್ದರಿಂದ ನೀನು ಸರ್ವನೆನಿಸುವೆ.

**ಸಖೇತಿ ಮತ್ವಾ ಪ್ರಸಭಂ ಯದುಕ್ತಂ**
**ಹೇ ಕೃಷ್ಣ ಹೇ ಯಾದವ ಹೇ ಸಖೇತಿ ।**
**ಅಜಾನತಾ ಮಹಿಮಾನಂ ತವೇದಂ**
**ಮಯಾ ಪ್ರಮಾದಾತ್ ಪ್ರಣಯೇನ ವಾಪಿ ॥ ೪೧**

ನಿನ್ನ ಮಹಿಮೆಯನ್ನೂ ಈ ವಿಶ್ವರೂಪವನ್ನೂ ಅರಿಯದೆ ಮೂಢನಾದ ನಾನು ನಿನ್ನನ್ನು ಮಿತ್ರನೆಂದು ಬಗೆದು, ಪ್ರಮಾದದಿಂದಲೋ ಸ್ನೇಹದ ಸಲಿಗೆಯಿಂದಲೋ 'ಎಲೆ ಕೃಷ್ಣ, ಎಲೆ ಯಾದವ, ಎಲೈ ಗೆಳೆಯ' ಎಂದು ದಿಟ್ಟತನದ ಮಾತನ್ನಾಡಿದ್ದೇನೆ. ಅದನ್ನೂ –

ವಿವರಣೆ : 'ಮಹಿಮಾನಂ ತವೇಮಂ' ಎಂದು ಪಾಠಾಂತರ ಉಂಟು. ಆಗ 'ನಿನ್ನ ಈ ಮಹಿಮೆಯನ್ನೂ' ಎಂದಿಷ್ಟೇ ಅರ್ಥ. 'ವಿಶ್ವರೂಪವನ್ನೂ' ಎಂದು ಹೇಳಬೇಕಾಗಿಲ್ಲ. 'ಮಹಿಮಾನಂ' 'ಇಮಂ' ಎರಡೂ ಪುಲ್ಲಿಂಗದಲ್ಲಿದ್ದರೆ ಅಭೇದದಿಂದ ಅನ್ವಯಿಸಲು ಬರುತ್ತದೆ.

**ಯಚ್ಚಾವಹಾಸಾರ್ಥಮಸತ್ಕೃತೋऽಸಿ**
**ವಿಹಾರಶಯ್ಯಾಸನಭೋಜನೇಷು ।**
**ಏಕೋऽಥವಾಪ್ಯಚ್ಯುತ ತತ್ಸಮಕ್ಷಂ**
**ತತ್ ಕ್ಷಾಮಯೇ ತ್ವಾಮಹಮಪ್ರಮೇಯಮ್ ॥ ೪೨**

ಮತ್ತು ತಿರುಗಾಡುವಾಗ, ಮಲಗುವಾಗ, ಕುಳಿತಾಗ, ಅಥವಾ ಭೋಜನಕಾಲದಲ್ಲಿ ನೀನೊಬ್ಬನೇ ಇದ್ದಾಗ ಎಂದರೆ ನಿನ್ನ ಪರೋಕ್ಷದಲ್ಲಿ ಮತ್ತು ಎದುರಿಗೆ ಹಾಸ್ಯಕ್ಕಾಗಿ ನಿನ್ನನ್ನು ನಾನು ಗೇಲಿ ಮಾಡಿದ್ದುಂಟು. ಹೇ ಅಚ್ಯುತ, ಅದೆಲ್ಲವನ್ನೂ ಕ್ಷಮಿಸಬೇಕೆಂದು ಊಹಾತೀತಮಹಿಮನಾದ ನಿನ್ನನ್ನು ಬೇಡಿ

ಕೊಳ್ಳುತ್ತೇನೆ.

**ಪಿತಾಽಸಿ ಲೋಕಸ್ಯ ಚರಾಚರಸ್ಯ**
**ತ್ವಮಸ್ಯ ಪೂಜ್ಯಶ್ಚ ಗುರುರ್ಗರೀಯಾನ್ ।**
**ನ ತ್ವತ್ಸಮೋಽಸ್ತ್ಯಭ್ಯಧಿಕಃ ಕುತೋಽನ್ಯೋ**
**ಲೋಕತ್ರಯೇಽಪ್ಯಪ್ರತಿಮಪ್ರಭಾವ ॥ ೪೩**

ಈ ಚರಾಚರಲೋಕಕ್ಕೆ ನೀನು ತಂದೆಯಾಗಿದ್ದೀಯೆ. ಬಹಳ ದೊಡ್ಡ ಗುರುವಾದ್ದರಿಂದ ಪೂಜಾರ್ಹನಾಗಿದ್ದೀಯೆ. ಹೇ ಅಸದೃಶ ಪ್ರಭಾವಶಾಲಿಯೆ, ಮೂರು ಲೋಕದಲ್ಲಿಯೂ ನಿನಗೆ ಸಮಾನನಾದವನೇ ಇಲ್ಲ. ಹೀಗಿರುವಾಗ ನಿನಗಿಂತ ಅಧಿಕನಾದವನು ಎಲ್ಲಿಂದ ಬಂದಾನು ?

**ತಸ್ಮಾತ್ ಪ್ರಣಮ್ಯ ಪ್ರಣಿಧಾಯ ಕಾಯಂ**
**ಪ್ರಸಾದಯೇ ತ್ವಾಮಹಮೀಶಮೀಡ್ಯಮ್ ।**
**ಪಿತೇವ ಪುತ್ರಸ್ಯ ಸಖೇವ ಸಖ್ಯುಃ**
**ಪ್ರಿಯಃ ಪ್ರಿಯಾಯಾರ್ಹಸಿ ದೇವ ಸೋಢುಮ್ ॥ ೪೪**

ಆದ್ದರಿಂದ ದೇಹವನ್ನು ಬಗ್ಗಿಸಿ ಪ್ರಣಾಮಗಳನ್ನರ್ಪಿಸಿ, ಈಶ್ವರನೂ ಸ್ತುತ್ಯನೂ ಆದ ನಿನ್ನನ್ನು ಪ್ರಸನ್ನನಾಗೆಂದು ಬೇಡಿಕೊಳ್ಳುತ್ತೇನೆ. ಹೇ ದೇವ, ತಂದೆಯು ಮಗನ ತಪ್ಪನ್ನೂ ಮಿತ್ರನು ಮಿತ್ರನ ಅಪರಾಧವನ್ನೂ ಪ್ರಿಯನು ತನ್ನ ಪ್ರಿಯೆಯ ಅಪರಾಧವನ್ನೂ ಮನ್ನಿಸುವಂತೆ ನನ್ನ ತಪ್ಪನ್ನು ನೀನು ಸಹಿಸಿಕೊಳ್ಳಬೇಕು.

**ವಿವರಣೆ :** ಪ್ರಿಯಾಯಾರ್ಹಸಿ – ಎಂಬಲ್ಲಿ ಪ್ರಿಯಾಯಾಃ ಅರ್ಹಸಿ ಎಂದು ಪದಚ್ಛೇದ. ಸಂಧಿಯು ಆರ್ಷ. ಉಪಮಾನೋಪಮೇಯಗಳಿಗೆ ಲಿಂಗವು ಸಮಾನವಾಗಿರಬೇಕೆಂಬ ನಿರ್ಬಂಧವಿಲ್ಲ. ಕೆಲವರು ಪ್ರಿಯಾಯ + ಅರ್ಹಸಿ ಎಂದು ಪದಚ್ಛೇದ ಮಾಡಿ 'ಪ್ರಿಯನು ಪ್ರಿಯನಾದವನಿಗೆ' ಎಂದು ಅರ್ಥ ಹೇಳುತ್ತಾರೆ. ಷಷ್ಠೀ ಚತುರ್ಥೀ ವಿಭಕ್ತಿಗಳಿಗೆ ಅನ್ವಯ ಹೊಂದುವುದಿಲ್ಲ.

**ಅದೃಷ್ಟಪೂರ್ವಂ ಹೃಷಿತೋಽಸ್ಮಿ ದೃಷ್ಟ್ವಾ**
**ಭಯೇನ ಚ ಪ್ರವ್ಯಥಿತಂ ಮನೋ ಮೇ ।**
**ತದೇವ ಮೇ ದರ್ಶಯ ದೇವ ರೂಪಂ**
**ಪ್ರಸೀದ ದೇವೇಶ ಜಗನ್ನಿವಾಸ ॥ ೪೫**

ಹಿಂದೆಂದೂ ಕಾಣದ ಈ ವಿಶ್ವರೂಪವನ್ನು ಕಂಡು ರೋಮಾಂಚಿತ

ನಾಗಿದ್ದೇನೆ. ನನ್ನ ಮನಸ್ಸು ಭಯದಿಂದ ಕಂಗಾಲಾಗಿದೆ. ಸ್ವಾಮಿ, ಅದೇ ಹಿಂದಿನ ರೂಪವನ್ನು ನನಗೆ ತೋರಿಸು. ದೇವೇಶ್ವರ, ಜಗನ್ನಿವಾಸ, ಪ್ರಸನ್ನನಾಗು.

**ಕಿರೀಟಿನಂ ಗದಿನಂ ಚಕ್ರಹಸ್ತ-**
**ಮಿಚ್ಛಾಮಿ ತ್ವಾಂ ದ್ರಷ್ಟುಮಹಂ ತಥೈವ ।**
**ತೇನೈವ ರೂಪೇಣ ಚತುರ್ಭುಜೇನ**
**ಸಹಸ್ರಬಾಹೋ ಭವ ವಿಶ್ವಮೂರ್ತೇ ॥ ೪೬**

ಮೊದಲಿನಂತೆಯೇ ಕಿರೀಟಿಯೂ ಗದಾಧಾರಿಯೂ ಚಕ್ರವನ್ನು ಕೈಯಲ್ಲಿ ಹಿಡಿದವನೂ ಆದ ನಿನ್ನನ್ನು ನೋಡಲು ಬಯಸುತ್ತೇನೆ. ಓ ಸಹಸ್ರಬಾಹು, ವಿಶ್ವರೂಪಧಾರಿಯೆ, ಚತುರ್ಬಾಹುವಾದ ಆ ಹಿಂದಿನ ರೂಪವುಳ್ಳವನಾಗು.

ಶ್ರೀಭಗವಾನುವಾಚ –

**ಮಯಾ ಪ್ರಸನ್ನೇನ ತವಾರ್ಜುನೇದಂ**
**ರೂಪಂ ಪರಂ ದರ್ಶಿತಮಾತ್ಮಯೋಗಾತ್ ।**
**ತೇಜೋಮಯಂ ವಿಶ್ವಮನಂತಮಾದ್ಯಂ**
**ಯನ್ಮೇ ತ್ವದನ್ಯೇನ ನ ದೃಷ್ಟಪೂರ್ವಮ್ ॥ ೪೭**

**ಭಗವಂತನು ಹೇಳಿದನು :** ಅರ್ಜುನ, ನಿನ್ನನ್ನು (ಅನುಗ್ರಹಿಸುವುದಕ್ಕೋಸ್ಕರ) ನಾನು ಪ್ರಸನ್ನನಾಗಿ ಶ್ರೇಷ್ಠವಾದ ಈ ರೂಪವನ್ನು ನನ್ನ ಯೋಗಸಾಮರ್ಥ್ಯದಿಂದ ನಿನಗೆ ತೋರಿಸಿದ್ದೇನೆ. ತೇಜೋಮಯವೂ ಅಂತರಹಿತವೂ ಆದ್ಯವೂ ಆದ ಈ ವಿಶ್ವರೂಪವನ್ನು ನಿನ್ನ ಹೊರತು ಮತ್ತೊಬ್ಬನು ಕಂಡದ್ದಿಲ್ಲ.

**ವಿವರಣೆ :** ಇಲ್ಲಿ ಯೋಗವೆಂದರೆ –

**ಅಣಿಮಾ ಮಹಿಮಾ ಚೈವ ಗರಿಮಾ ಲಘಿಮಾ ತಥಾ ।**
**ಪ್ರಾಪ್ತಿಃ ಪ್ರಾಕಾಮ್ಯಮೀಶಿತ್ವಂ ವಶಿತ್ವಂ ಚಾಷ್ಟಸಿದ್ಧಯಃ ॥**

ಎಂಬ ಅಷ್ಟಸಿದ್ಧಿಗಳು.

**ನ ವೇದಯಜ್ಞಾಧ್ಯಯನೈರ್ನ ದಾನೈಃ**
**ನ ಚ ಕ್ರಿಯಾಭಿರ್ನ ತಪೋಭಿರುಗ್ರೈಃ ।**
**ಏವಂ ರೂಪಃ ಶಕ್ಯ ಅಹಂ ನೃಲೋಕೇ**
**ದ್ರಷ್ಟುಂ ತ್ವದನ್ಯೇನ ಕುರುಪ್ರವೀರ ॥ ೪೮**

ಕುರುವೀರ–ಅರ್ಜುನ, ನಿನಗೆ ತೋರಿಸಿದಂತೆ ವಿಶ್ವರೂಪನಾದ ನನ್ನನ್ನು ಈ ಮನುಷ್ಯಲೋಕದಲ್ಲಿ ನಿನ್ನನ್ನುಳಿದು ಇನ್ನೊಬ್ಬನಿಂದ ನೋಡಲು ಶಕ್ಯವಿಲ್ಲ. ವೇದಗಳ ಅಧ್ಯಯನದಿಂದಲೂ ಯಜ್ಞ ವಿಚಾರಗಳನ್ನು ತಿಳಿದುಕೊಳ್ಳುವುದರಿಂದಲೂ ಸಾಧ್ಯವಿಲ್ಲ. ಮಹತ್ತರ ದಾನಗಳನ್ನು ಮಾಡಿದರೂ ಅಗ್ನಿಹೋತ್ರಾದಿ ಶ್ರೌತಕ್ರಿಯೆಗಳನ್ನು ಆಚರಿಸಿದರೂ ಸಾಧ್ಯವಾಗದು. ಚಾಂದ್ರಾಯಣವೇ ಮುಂತಾದ ಉಗ್ರತಪಸ್ಸುಗಳನ್ನಾಚರಿಸಿದರೂ ಈ ವಿಶ್ವರೂಪವನ್ನು ಕಾಣಲು ಶಕ್ಯವಲ್ಲ!

**ಮಾ ತೇ ವ್ಯಥಾ ಮಾ ಚ ವಿಮೂಢಭಾವೋ**
**ದೃಷ್ಟ್ವಾ ರೂಪಂ ಘೋರಮೀದೃಙ್ಮಮೇದಮ್ ।**
**ವ್ಯಪೇತಭೀಃ ಪ್ರೀತಮನಾಃ ಪುನಸ್ತ್ವಂ**
**ತದೇವ ಮೇ ರೂಪಮಿದಂ ಪ್ರಪಶ್ಯ ॥ ೪೯**

ಈ ಪರಿಯ ನನ್ನ ಘೋರರೂಪವನ್ನು ಕಂಡು ತಲ್ಲಣಗೊಳ್ಳಬೇಡ; ದಿಙ್ಮೂಢನಾಗಬೇಡ. ಅಂಜಿಕೆಯನ್ನು ಬಿಟ್ಟು ಪ್ರಸನ್ನಚಿತ್ತನಾಗಿ ನನ್ನ ಆ ಹಿಂದಿನ ರೂಪವನ್ನು ಮತ್ತೆ ನೋಡು!

**ಸಂಜಯ ಉವಾಚ –**

**ಇತ್ಯರ್ಜುನಂ ವಾಸುದೇವಸ್ತಥೋಕ್ತ್ವಾ**
**ಸ್ವಕಂ ರೂಪಂ ದರ್ಶಯಾಮಾಸ ಭೂಯಃ ।**
**ಆಶ್ವಾಸಯಾಮಾಸ ಚ ಭೀತಮೇನಂ**
**ಭೂತ್ವಾ ಪುನಃ ಸೌಮ್ಯವಪುರ್ಮಹಾತ್ಮಾ ॥ ೫೦**

**ಸಂಜಯನು ಹೀಗೆಂದನು –** ಧೃತರಾಷ್ಟ್ರ ಮಹಾರಾಜ, ವಾಸುದೇವನು ಈ ಪ್ರಕಾರವಾಗಿ ಅರ್ಜುನನಿಗೆ ಇಷ್ಟು ಹೇಳಿ, ಪುನಃ ತನ್ನ ಹಿಂದಿನ ನಿಜರೂಪವನ್ನು ತೋರಿಸಿದನು. ಆ ಮಹಾತ್ಮನು ಸೌಮ್ಯದೇಹವುಳ್ಳವನಾಗಿ, ಹೆದರಿಹೋಗಿದ್ದ ಅರ್ಜುನನನ್ನು ಸಂತೈಸಿದನು.

**ಅರ್ಜುನ ಉವಾಚ –**

**ದೃಷ್ಟ್ವೇದಂ ಮಾನುಷಂ ರೂಪಂ ತವ ಸೌಮ್ಯಂ ಜನಾರ್ದನ ।**
**ಇದಾನೀಮಸ್ಮಿ ಸಂವೃತ್ತಃ ಸಚೇತಾಃ ಪ್ರಕೃತಿಂ ಗತಃ ॥ ೫೧**

**ಅರ್ಜುನನು ಹೇಳಿದನು :** ಶ್ರೀಕೃಷ್ಣ, ಸೌಮ್ಯವಾದ ನಿನ್ನ ಈ ಮಾನುಷರೂಪವನ್ನು ನೋಡಿದಮೇಲೆ, ಈಗ ನಾನು ಸ್ವಸ್ಥಚಿತ್ತನಾದೆನು! ಮೊದಲಿನಂತೆ ನೆಮ್ಮದಿಯನ್ನು ಪಡೆದೆನು.

ಶ್ರೀಭಗವಾನುವಾಚ –

**ಸುದುರ್ದರ್ಶಮಿದಂ ರೂಪಂ ದೃಷ್ಟವಾನಸಿ ಯನ್ಮಮ ।**
**ದೇವಾ ಅಪ್ಯಸ್ಯ ರೂಪಸ್ಯ ನಿತ್ಯಂ ದರ್ಶನಕಾಂಕ್ಷಿಣಃ ॥** ೫೨

**ಭಗವಂತನು ಹೇಳಿದನು :** ಬಲುಕಷ್ಟದಿಂದ ಲಭ್ಯವಾಗಬಹುದಾದ ಈ ನನ್ನ ರೂಪವನ್ನು ನೋಡಿದೆಯಲ್ಲ, ಈ ರೂಪವನ್ನು ನೋಡಲು ದೇವತೆಗಳೂ ಸಹ ಯಾವಾಗಲೂ ಬಯಸುತ್ತಲೇ ಇದ್ದಾರೆ.

**ನಾಹಂ ವೇದೈರ್ನ ತಪಸಾ ನ ದಾನೇನ ನ ಚೇಜ್ಯಯಾ ।**
**ಶಕ್ಯ ಏವಂ ವಿಧೋ ದ್ರಷ್ಟುಂ ದೃಷ್ಟವಾನಸಿ ಮಾಂ ಯಥಾ ॥** ೫೩

ನನ್ನನ್ನು ಈ ಪ್ರಕಾರವಾಗಿ ನೋಡಿದೆಯಲ್ಲ, ಹೀಗೆ ನೋಡುವುದಕ್ಕೆ ನಾನು ವೇದಗಳ ಅಧ್ಯಯನದಿಂದಾಗಲಿ ತಪಸ್ಸಿನಿಂದಾಗಲಿ ಮಹತ್ತರದಾನದಿಂದಾಗಲಿ ಯಜ್ಞಸಾಧನದಿಂದಾಗಲಿ ಎಂದಿಗೂ ಯಾರಿಗೂ ಶಕ್ಯನಲ್ಲ.

**ಭಕ್ತ್ಯಾ ತ್ವನನ್ಯಯಾ ಶಕ್ಯ ಅಹಮೇವಂ ವಿಧೋಽರ್ಜುನ ।**
**ಜ್ಞಾತುಂ ದ್ರಷ್ಟುಂ ಚ ತತ್ತ್ವೇನ ಪ್ರವೇಷ್ಟುಂ ಚ ಪರಂತಪ ॥** ೫೪

ಆದರೆ, ಈ ಪ್ರಕಾರ ವಿಶ್ವರೂಪನಾದ ನನ್ನನ್ನು, ಅರ್ಜುನ, ಅನನ್ಯವಾದ ಭಕ್ತಿಯಿಂದ ಮಾತ್ರ (ಶಾಸ್ತ್ರದ ಮೂಲಕ) ತಿಳಿಯುವುದಕ್ಕೂ ತತ್ತ್ವತಃ – ಇದ್ದದ್ದನ್ನು ಇದ್ದಹಾಗೆ – ಸಾಕ್ಷಾತ್ಕರಿಸಿಕೊಳ್ಳುವುದಕ್ಕೂ ಕಡೆಗೆ ನನ್ನಲ್ಲಿ ಸೇರಿಕೊಳ್ಳುವುದಕ್ಕೂ ಸಾಧ್ಯವಾಗುವುದು.

**ವಿವರಣೆ :** ಭಕ್ತಿಯಿದ್ದರೆ ಮಾತ್ರ ಶಾಸ್ತ್ರದ ಯಥಾರ್ಥಜ್ಞಾನವಾಗುವುದು. ಅದರಿಂದ ಭಗವಂತನ ಸಾಕ್ಷಾತ್ಕಾರವಾಗುವುದು. ಸಾಕ್ಷಾತ್ಕಾರವಾದಮೇಲೆ ಮೋಕ್ಷವು ನಿಶ್ಚಿತ.

**ಮತ್ಕರ್ಮಕೃನ್ಮತ್ಪರಮೋ ಮದ್ಭಕ್ತಃ ಸಂಗವರ್ಜಿತಃ ।**
**ನಿರ್ವೈರಃ ಸರ್ವಭೂತೇಷು ಯಃ ಸ ಮಾಮೇತಿ ಪಾಂಡವ ॥** ೫೫

ಇತಿ ಶ್ರೀಮದ್ಭಗವದ್ಗೀತಾಸೂಪನಿಷತ್ಸು ಬ್ರಹ್ಮವಿದ್ಯಾಯಾಂ ಯೋಗಶಾಸ್ತ್ರೇ
ವಿಶ್ವರೂಪದರ್ಶನಂ ನಾಮ ಏಕಾದಶೋಽಧ್ಯಾಯಃ

ಎಲೈ ಪಾಂಡವ, ಪರಮೇಶ್ವರನಾದ ನನ್ನ ಕರ್ಮಗಳಿವು ಎಂದು ತಿಳಿದು ಯಾವನು ಕರ್ಮಗಳನ್ನಾಚರಿಸುತ್ತ, ನಾನೇ ಪರಮಗತಿಯೆಂದು ನಂಬಿ, ನನ್ನ ಭಕ್ತನಾಗಿ, ಧನಪುತ್ರಾದಿಗಳಲ್ಲಿ ಮಮತೆಯನ್ನು ತ್ಯಜಿಸಿ, ಸರ್ವಭೂತ ಗಳಲ್ಲಿಯೂ ವೈರವನ್ನು ತ್ಯಜಿಸುತ್ತಾನೋ ಅವನು ನನ್ನನ್ನು ಪಡೆಯುವನು.

**ಇಲ್ಲಿಗೆ ಶ್ರೀಮದ್ಭಗವದ್ಗೀತೆಯಲ್ಲಿ ವಿಶ್ವರೂಪದರ್ಶನವೆಂಬ ಹನ್ನೊಂದನೆಯ ಅಧ್ಯಾಯವು ಸಮಾಪ್ತವಾಯಿತು.**

# ೧೧ನೆಯ ಅಧ್ಯಾಯದ ಸಾರ

ಅರ್ಜುನನು ಶ್ರೀಕೃಷ್ಣನನ್ನು ಕುರಿತು – "ಭಗವಂತ, ಜಗತ್ತೆಲ್ಲವೂ ನಿನ್ನ ಒಂದಂಶವೆಂದು ಹೇಳಿದ್ದೀಯೆ. ಹಾಗಿದ್ದರೆ ನಿನ್ನ ವಿರಾಡ್ರೂಪವನ್ನು ನೋಡಲು ನನಗೆ ಇಚ್ಛೆಯಾಗಿದೆ. ಅದನ್ನು ನೋಡಲು ನನಗೆ ಸಾಧ್ಯವೆಂದಾದರೆ, ದಯವಿಟ್ಟು ಅವನ್ನು ತೋರಿಸು" ಎಂದು ಬೇಡಿಕೊಂಡನು.

ಆಗ ಶ್ರೀಕೃಷ್ಣನು "ಆಗಲಿ, ಇಡಿಯ ಜಗತ್ತು ನನ್ನಲ್ಲಿರುವುದನ್ನು ನೋಡು. ಈ ಕಣ್ಣುಗಳಿಂದ ನೀನು ನೋಡಲಾರೆ. ನಿನಗೆ ದಿವ್ಯದೃಷ್ಟಿಯನ್ನು ಕೊಡುತ್ತೇನೆ" ಎಂದು ಹೇಳಿ ದಿವ್ಯನೇತ್ರವನ್ನಿತ್ತು ತನ್ನ ವಿರಾಡ್ರೂಪವನ್ನು ತೋರಿಸಿದನು. ಅದೇ ವಿಶ್ವರೂಪ. ವಿಶ್ವವೆಂಬ ರೂಪ ವಿಶ್ವರೂಪ, ಅದರಲ್ಲಿ ಅಸಂಖ್ಯಾತವಾದ ಬಾಯಿಗಳೂ ಕಣ್ಣುಗಳೂ ಇದ್ದವು. ಭಗವಂತನು ದಿವ್ಯಾಭರಣಗಳನ್ನು ತೊಟ್ಟು ದಿವ್ಯಾಯುಧಗಳನ್ನು ಹಿಡಿದಿದ್ದನು. ದಿವ್ಯವಸ್ತ್ರವನ್ನುಟ್ಟು ದಿವ್ಯಪುಷ್ಪಗಳಿಂದ ಶೋಭಿಸುತ್ತಿದ್ದನು. ಸಾವಿರ ಸೂರ್ಯರ ತೇಜಸ್ಸು ಒಂದೆಡೆಯಲ್ಲಿ ಸೇರಿದಷ್ಟು ಪ್ರಕಾಶವು ಹರಡಿತ್ತು. ಸಮಸ್ತ ವಿಶ್ವವೇ ಆ ದೇವದೇವನಲ್ಲಿ ನೆಲೆಸಿತ್ತು.

ಬ್ರಹ್ಮಾದಿದೇವತೆಗಳೂ ಋಷಿಗಳೂ ಪ್ರಾಣಿಗಳೂ ಆ ವಿಶ್ವರೂಪನ ದೇಹದಲ್ಲಿಯೇ ಇರುವುದನ್ನು ಅರ್ಜುನನು ಕಂಡನು. ಭಗವಂತನ ದೇಹಕ್ಕೆ ಆದ್ಯಂತಗಳೇ ಇರಲಿಲ್ಲ. ಯುದ್ಧಮಾಡುತ್ತಿದ್ದ ಯೋಧರು ಆತನ ಬಾಯೊಳಗೆ ನುಗ್ಗಿಹೋಗುವುದನ್ನೂ ಭಗವಂತನು ಅವರನ್ನೆಲ್ಲ ತಿಂದು ಚಪ್ಪರಿಸುತ್ತಿರುವು ದನ್ನೂ ದೇವಾದಿಗಳು ಹೆದರಿ ಸ್ತುತಿಸುತ್ತಿರುವುದನ್ನೂ ಆ ಭೀಕರರೂಪವನ್ನೂ ನೋಡಿ ಅರ್ಜುನನು ತತ್ತರಿಸಿಹೋದನು. ಕೈಮುಗಿದುಕೊಂಡು "ಸ್ವಾಮಿ, ನೀನು ಯಾರು ? ಏತಕ್ಕೆ ಅವತರಿಸಿದ್ದೀಯೆ ?" ಎಂದು ಬೇಡಿದನು.

ಆಗ ಭಗವಂತನು ಪ್ರಸನ್ನನಾಗಿ "ಅರ್ಜುನ, ನಾನು ಈ ಲೋಕವನ್ನು ನಾಶಮಾಡಲು ಹೊರಟಿರುವ ಕಾಲಪುರುಷನೆಂದು ತಿಳಿ. ನೀನು ಯುದ್ಧ ಮಾಡು, ಬಿಡು – ಈ ಶತ್ರುಗಳೇನೂ ಬದುಕಿರುವುದಿಲ್ಲ. ಭೀಷ್ಮ ದ್ರೋಣ ಕರ್ಣಾದಿಗಳೆಲ್ಲರೂ ಸಾಯಲೆಂಬುದು ನನ್ನ ಸಂಕಲ್ಪ. ನಾನು ಇವರನ್ನು ಕೊಂದೇಬಿಟ್ಟಿದ್ದೇನೆ! ನೀನು ನೆಪಮಾತ್ರಕ್ಕೆ ಯುದ್ಧ ಮಾಡಿ ಕೀರ್ತಿಯನ್ನು ಗಳಿಸು" ಎಂದನು. ಅರ್ಜುನನು ಹೆದರಿ ನಡುಗುತ್ತಲೇ "ಓ ಮಹಾತ್ಮ ನೀನು ಈ ವಿಶ್ವಕ್ಕೇ ಒಡೆಯನಾದ ಮಹಾಮಹಿಮ. ನೀನು ಸರ್ವರಿಗೂ ತಂದೆ. ಪೂಜ್ಯ. ನಿನಗೆ ಸಮಾನರೇ ಇಲ್ಲ. ನಿನ್ನ ಮಹಿಮೆಯನ್ನರಿಯದೇ ಇದ್ದ ನಾನು ನಿನ್ನೊಡನೆ ಸಲಿಗೆಯಿಂದ ಮಾತಾಡುತ್ತಿದ್ದೆ. ನನ್ನನ್ನು ಕ್ಷಮಿಸು. ಈ ರೂಪವನ್ನು ನೋಡ ಲಾರೆ. ಎಂದಿನಂತೆ ಸೌಮ್ಯರೂಪವನ್ನು ಧರಿಸು" ಎಂದು ಪ್ರಾರ್ಥಿಸಿದನು.

ಆಗ ಶ್ರೀಕೃಷ್ಣನು "ಅರ್ಜುನ, ಈ ವಿಶ್ವರೂಪವನ್ನು ನಿನ್ನ ಮೇಲಿನ ಅನುಗ್ರಹ ಬುದ್ಧಿಯಿಂದ ತೋರಿಸಿದ್ದೇನೆ. ಇದನ್ನು ನೋಡಲು ದೇವತೆಗಳೂ ತವಕಿಸುತ್ತಾರೆ. ಅವರಿಗೂ ಸಾಧ್ಯವಾಗಲಿಲ್ಲ. ಕೇವಲ ಭಕ್ತಿಗೆ ಮಾತ್ರ ನಾನು ಮೆಚ್ಚತಕ್ಕವನು. ಅಷ್ಟು ಭಕ್ತಿಯಿದ್ದವರಿಗೆ ನನ್ನ ದರ್ಶನ ಸಾಧ್ಯವಿದೆ. ಯಾವನು ನನ್ನ ಭಕ್ತನಾಗಿ ಎಲ್ಲ ಕರ್ಮಗಳನ್ನೂ ನನಗಾಗಿ ಮಾಡುತ್ತ ವಿಷಯಸಂಗವನ್ನು ತ್ಯಜಿಸುತ್ತಾನೋ ಆತನು ನನ್ನ ಸಾಯುಜ್ಯವನ್ನು ಪಡೆಯುವನು" ಎಂದು ನುಡಿದು ಅರ್ಜುನನನ್ನು ಸಂತೈಸಿದನು.

# ಅಧ್ಯಾಯ ೧೨

# ಭಕ್ತಿಯೋಗ

೭ನೆಯ ಅಧ್ಯಾಯದಿಂದ ಇದುವರೆಗೆ ಕೆಲವೆಡೆಗಳಲ್ಲಿ ಸರ್ವೋಪಾಧಿರಹಿತವೂ ಅವ್ಯಕ್ತವೂ ಆದ ಅಕ್ಷರವೆಂಬ ಬ್ರಹ್ಮದ ನಿರ್ಗುಣೋಪಾಸನೆಯನ್ನು ಹೇಳಿದೆ. ಕೆಲವೆಡೆಗಳಲ್ಲಿ ಸತ್ತ್ವಗುಣೋಪಾಧಿಯಿಂದ ಕೂಡಿದ ಜ್ಞಾನೈಶ್ವರ್ಯಾದಿ ಯುಕ್ತನಾದ ಈಶ್ವರನ ಸಗುಣೋಪಾಸನೆಯನ್ನೂ ಹೇಳಿದೆ. ಈ ಎರಡು ಉಪಾಸನೆಗಳಲ್ಲಿ ಯಾವುದು ಉತ್ತಮವೆಂದು ತಿಳಿಯಲು ಅರ್ಜುನನು ಪ್ರಶ್ನೆ ಮಾಡುತ್ತಾನೆ.

**ಅರ್ಜುನ ಉವಾಚ –**

**ಏವಂ ಸತತಯುಕ್ತಾ ಯೇ ಭಕ್ತಾಸ್ತ್ವಾಂ ಪರ್ಯುಪಾಸತೇ ।**
**ಯೇ ಚಾಪ್ಯಕ್ಷರಮವ್ಯಕ್ತಂ ತೇಷಾಂ ಕೇ ಯೋಗವಿತ್ತಮಾಃ ॥** ೧

**ಅರ್ಜುನನು ಹೀಗೆಂದನು –** ಹೀಗೆ ಪೂಜಾದಿಕರ್ಮಗಳಲ್ಲಿ ತೊಡಗಿ ಯಾವ ಭಕ್ತರು ನಿನ್ನನ್ನು ಉಪಾಸನೆ ಮಾಡುತ್ತಾರೋ ಮತ್ತೆ ಯಾರು ಅವ್ಯಕ್ತವೂ ಅಕ್ಷರವೂ ಆದ ನಿರ್ಗುಣಬ್ರಹ್ಮದ ಉಪಾಸನೆಯನ್ನು ಮಾಡುತ್ತಾರೋ ಅವರಲ್ಲಿ ಉತ್ತಮರಾದ ಯೋಗವಿದರು ಯಾರು ?

**ಶ್ರೀಭಗವಾನುವಾಚ –**

**ಮಯ್ಯಾವೇಶ್ಯ ಮನೋ ಯೇ ಮಾಂ ನಿತ್ಯಯುಕ್ತಾ ಉಪಾಸತೇ ।**
**ಶ್ರದ್ಧಯಾ ಪರಯೋಪೇತಾಸ್ತೇ ಮೇ ಯುಕ್ತತಮಾ ಮತಾಃ ॥** ೨

**ಭಗವಂತನು ಹೇಳಿದನು :** ನನ್ನಲ್ಲಿ – ವಿಶ್ವರೂಪನಾದ ಪರಮೇಶ್ವರನಲ್ಲಿ ಯಾರು ಮನಸ್ಸನ್ನು ನಿಲ್ಲಿಸಿ ಸದಾ ಚಿತ್ತಸಮಾಧಾನವುಳ್ಳವರಾಗಿ ಪರಮಶ್ರದ್ಧೆ ಯಿಂದ ನನ್ನನ್ನು ಉಪಾಸನೆ ಮಾಡುತ್ತಾರೋ ಅವರು ಯುಕ್ತತಮರೆಂದು ನನ್ನ ಅಭಿಪ್ರಾಯವಿದೆ.

**ಯೇ ತ್ವಕ್ಷರಮನಿರ್ದೇಶ್ಯಮವ್ಯಕ್ತಂ ಪರ್ಯುಪಾಸತೇ ।**
**ಸರ್ವತ್ರಗಮಚಿಂತ್ಯಂ ಚ ಕೂಟಸ್ಥಮಚಲಂ ಧ್ರುವಮ್ ॥** ೩

**ಸಂನಿಯಮ್ಯೇಂದ್ರಿಯಗ್ರಾಮಂ ಸರ್ವತ್ರ ಸಮಬುದ್ಧಯಃ ।**
**ತೇ ಪ್ರಾಪ್ನುವಂತಿ ಮಾಮೇವ ಸರ್ವಭೂತಹಿತೇ ರತಾಃ ॥** ೪

ಆದರೆ ಯಾರು (ಇಂದ್ರಿಯಗಳಿಗೆ ಅಗೋಚರವಾದ್ದರಿಂದ) ಅವ್ಯಕ್ತವೂ ಆದ್ದರಿಂದಲೇ ಹೀಗಿದೆಯೆಂದು ವರ್ಣಿಸಲು ಅಶಕ್ಯವೂ (ಆಕಾಶದಂತೆ) ಎಲ್ಲ ಕಡೆ ಇರತಕ್ಕದ್ದು ಮನಸ್ಸಿಗೂ ಹೀಗಿದೆಯೆಂದು ಚಿಂತಿಸಲು ಅಸಾಧ್ಯವೂ ಕೂಟಸ್ಥವೂ ಅಚಲವೂ ನಿತ್ಯವೂ ಆದ ಅಕ್ಷರವನ್ನು (ನಿರ್ವಿಶೇಷಬ್ರಹ್ಮವನ್ನು) –

ಇಂದ್ರಿಯಗಳೆಲ್ಲವನ್ನೂ ನಿಗ್ರಹಿಸಿ, ಇಷ್ಟಾನಿಷ್ಟಗಳೇನು ಬಂದರೂ ಸರ್ವತ್ರ ಸಮಬುದ್ಧಿಯುಳ್ಳವರಾಗಿ, ಸರ್ವಪ್ರಾಣಿಗಳ ಹಿತದಲ್ಲಿ ನಿರತರಾಗಿ ಉಪಾಸನೆ ಮಾಡುತ್ತಾರೋ ಅವರು ನನ್ನನ್ನೇ ಸೇರುವರು.

**ವಿವರಣೆ :** ಉಪಾಸನೆ = ಉಪ–ಸಮೀಪಕ್ಕೆ ಹೋಗಿ ಆಸನಂ = ಕುಳಿತಿರುವುದು ಉಪಾಸನೆ. ಶಾಸ್ತ್ರೋಕ್ತವಿಧಾನದಿಂದ ಉಪಾಸ್ಯವಸ್ತುವನ್ನು ಮನಸ್ಸಿನಿಂದ ವಿಷಯೀಕರಿಸುವುದೇ ಸಮೀಪಕ್ಕೆ ಹೋಗುವುದು. ಅನಂತರ ಎಣ್ಣೆಯ ಧಾರೆಯಂತೆ ನಿರಂತರವಾಗಿ, ಬೇರೆ ಏನನ್ನೂ ಚಿಂತಿಸದೆ, ಬಹಳ ಕಾಲ ಮನಸ್ಸನ್ನು ಉಪಾಸ್ಯವಸ್ತುವಿನಲ್ಲಿ ನಿಲ್ಲಿಸುವುದು ಉಪಾಸನೆ. ಕೂಟಸ್ಥ = ಕೂಟವೆಂದರೆ ಮೋಸ – ಮಾಯೆ. ಮಾಯೆಯನ್ನು ಸಾಕ್ಷಿಯಾಗಿ ನೋಡುತ್ತ ಇರತಕ್ಕದ್ದು ಕೂಟಸ್ಥ ಅಥವಾ ಅಚಲವಾದ ವಸ್ತುರಾಶಿ ಕೂಟ. ಅದರಂತೆ ನಿಶ್ಚಲವಾಗಿ ಇರತಕ್ಕದ್ದು ಕೂಟಸ್ಥ.

ಹೀಗೆ ಅಕ್ಷರೋಪಾಸಕರು ನನ್ನನ್ನೇ ಸೇರತಕ್ಕವರಾದ್ದರಿಂದ ನನ್ನ ಸ್ವರೂಪವೇ ಆಗಿರುತ್ತಾರೆ. ಅವರು ಯುಕ್ತತಮರೆಂದಾಗಲಿ ಯುಕ್ತತಮರಲ್ಲವೆಂದಾಗಲಿ ಹೇಳತಕ್ಕದ್ದಲ್ಲ. ಆದ್ದರಿಂದ ಉಳಿದ ಯೋಗಿಗಳಲ್ಲಿ ವಿಶ್ವರೂಪೋಪಾಸಕರು ಉತ್ತಮರು – ಎಂದು ಅಭಿಪ್ರಾಯ.

**ಕ್ಲೇಶೋಽಧಿಕತರಸ್ತೇಷಾಮವ್ಯಕ್ತಾಸಕ್ತಚೇತಸಾಮ್ ।**
**ಅವ್ಯಕ್ತಾ ಹಿ ಗತಿರ್ದುಃಖಂ ದೇಹವದ್ಭಿರವಾಪ್ಯತೇ ॥ ೫**

ಆದರೆ ಅಂಥ ಅವ್ಯಕ್ತದಲ್ಲಿ ಆಸಕ್ತಚಿತ್ತರಾದವರಿಗೆ–ಅವ್ಯಕ್ತೋಪಾಸನೆಯನ್ನು ಮಾಡತಕ್ಕವರಿಗೆ ಕ್ಲೇಶವು ಅಧಿಕವಾಗಿರುತ್ತದೆ. ಏಕೆಂದರೆ, ದೇಹಾಭಿಮಾನವುಳ್ಳ ಜನರಿಗೆ ಅವ್ಯಕ್ತವಾದ–ನಿರ್ಗುಣಸ್ವರೂಪದ ಬ್ರಹ್ಮವೆಂಬ ಪರಾಗತಿಯು ಕ್ಲೇಶದಿಂದ ದೊರೆಯುತ್ತದೆ.

**ವಿವರಣೆ :** ದೇಹಾಭಿಮಾನವನ್ನು ತ್ಯಜಿಸುವುದು ಕಠಿಣವಾದ್ದರಿಂದ ಜ್ಞಾನ ಮಾರ್ಗವು ಕ್ಲೇಶಕರವಾದದ್ದು. ಸಗುಣೋಪಾಸನೆಯಲ್ಲಿ ದೇಹಾಭಿಮಾನ ವನ್ನೇನೂ ಬಿಡಬೇಕಾಗಿಲ್ಲ. ಆದ್ದರಿಂದ ಭಕ್ತಿಮಾರ್ಗ ಸುಲಭವಾದದ್ದು.

**ಯೇ ತು ಸರ್ವಾಣಿ ಕರ್ಮಾಣಿ ಮಯಿ ಸಂನ್ಯಸ್ಯ ಮತ್ಪರಾಃ ।**
**ಅನನ್ಯೇನೈವ ಯೋಗೇನ ಮಾಂ ಧ್ಯಾಯಂತ ಉಪಾಸತೇ ॥ ೬**

**ತೇಷಾಮಹಂ ಸಮುದ್ಧರ್ತಾ ಮೃತ್ಯುಸಂಸಾರಸಾಗರಾತ್ ।**
**ಭವಾಮಿ ನ ಚಿರಾತ್ಪಾರ್ಥ ಮಯ್ಯಾವೇಶಿತಚೇತಸಾಮ್ ॥ ೭**

ಆದರೆ ಯಾರು ಸರ್ವಕರ್ಮಗಳನ್ನೂ ನನಗೆ ಒಪ್ಪಿಸಿ ನನ್ನಲ್ಲಿಯೇ ಆಸಕ್ತರಾಗಿ (ವಿಶ್ವರೂಪನಾದ ಪರಮಾತ್ಮನನ್ನು ಬಿಟ್ಟು ಇನ್ನೊಂದು ಆಲಂಬನೆಯಿಲ್ಲ ಎಂಬ) ಅನನ್ಯವಾದ ಯೋಗದಿಂದ ನನ್ನನ್ನು ಧ್ಯಾನಿಸುತ್ತ ಉಪಾಸನೆ ಮಾಡುತ್ತಾರೋ– ಅರ್ಜುನ, ವಿಶ್ವರೂಪನಾದ ನನ್ನಲ್ಲಿಯೇ ಚಿತ್ತವನ್ನಿಟ್ಟಿರುವ ಅವರನ್ನು ಮೃತ್ಯು ಸಹಿತವಾದ ಸಂಸಾರಸಾಗರದಿಂದ ಶೀಘ್ರವಾಗಿಯೇ ಮೇಲಕ್ಕೆ ಎತ್ತುತ್ತೇನೆ.

ವಿವರಣೆ : ಇದು ಸಗುಣೋಪಾಸನೆಗೆ ಸಂಬಂಧಿಸಿದ ವಿಚಾರ. ಮುಂದೆ ೧೩ನೆಯ ಶ್ಲೋಕದಿಂದ ಅಕ್ಷರೋಪಾಸನೆಯ ವಿಷಯವನ್ನು ಹೇಳಲಾಗುವುದು.

**ಮಯ್ಯೇವ ಮನ ಆಧತ್ಸ್ವ ಮಯಿ ಬುದ್ಧಿಂ ನಿವೇಶಯ ।**
**ನಿವಸಿಷ್ಯಸಿ ಮಯ್ಯೇವ ಅತ ಊರ್ಧ್ವಂ ನ ಸಂಶಯಃ ॥ ೮**

ಆದ್ದರಿಂದ ವಿಶ್ವರೂಪನಾದ ನನ್ನಲ್ಲಿಯೇ ಮನಸ್ಸನ್ನಿಡು. ನನ್ನಲ್ಲಿ ಬುದ್ಧಿಯನ್ನು ಹೊಗಿಸು. ಹೀಗಾದರೆ ನನ್ನಲ್ಲಿಯೇ ನಿವಾಸ ಮಾಡುವೆ. ಇದರಲ್ಲಿ ಸಂಶಯವಿಲ್ಲ.

**ಅಥ ಚಿತ್ತಂ ಸಮಾಧಾತುಂ ನ ಶಕ್ನೋಷಿ ಮಯಿ ಸ್ಥಿರಮ್ ।**
**ಅಭ್ಯಾಸಯೋಗೇನ ತತೋ ಮಾಮಿಚ್ಛಾಪ್ತುಂ ಧನಂಜಯ ॥ ೯**

ಒಂದು ವೇಳೆ ಚಿತ್ತವನ್ನು ನನ್ನಲ್ಲಿ ಸ್ಥಿರವಾಗಿ ನೆಲೆಗೊಳಿಸಲು ನೀನು ಶಕ್ತನಾಗದೆ ಹೋದರೆ, ಧನಂಜಯ–ಅರ್ಜುನ, ಚಿತ್ತವನ್ನು ಮತ್ತೆಮತ್ತೆ ಎಳೆದು ನನ್ನಲ್ಲಿ ಸ್ಥಾಪಿಸುವ ಅಭ್ಯಾಸಯೋಗದಿಂದ ನನ್ನನ್ನು ಪಡೆಯಲು ಪ್ರಯತ್ನಿಸು.

**ಅಭ್ಯಾಸೇಽಪ್ಯಸಮರ್ಥೋಽಸಿ ಮತ್ಕರ್ಮಪರಮೋ ಭವ ।**
**ಮದರ್ಥಮಪಿ ಕರ್ಮಾಣಿ ಕುರ್ವನ್ ಸಿದ್ಧಿಮವಾಪ್ಸ್ಯಸಿ ॥ ೧೦**

ಅಭ್ಯಾಸವನ್ನು ಮಾಡಲೂ ಅಸಮರ್ಥನಾದರೆ, ನನಗೋಸ್ಕರ ಕರ್ಮವನ್ನು ಮಾಡುವುದೇ ಪ್ರಧಾನವೆಂದು ತಿಳಿದಿರು. ಈಶ್ವರನಾದ ನನಗೋಸ್ಕರ ಕರ್ಮವನ್ನಾಚರಿಸುತ್ತಿದ್ದರೂ ಸಿದ್ಧಿಯನ್ನೈದುವೆ.

**ಅಥೈತದಪ್ಯಶಕ್ತೋऽಸಿ ಕರ್ತುಂ ಮದ್ಯೋಗಮಾಶ್ರಿತಃ ।**
**ಸರ್ವಕರ್ಮಫಲತ್ಯಾಗಂ ತತಃ ಕುರು ಯತಾತ್ಮವಾನ್ ॥ ೧೧**

ಹೀಗೆ ಮತ್ಕರ್ಮಪರಮನಾಗಲೂ ನಿನಗೆ ಸಾಧ್ಯವಾಗದೆ ಹೋದರೆ, (ಮಾಡಿದ ಕರ್ಮಗಳನ್ನೆಲ್ಲ ನನಗೆ ಸಮರ್ಪಣೆ ಮಾಡುವುದೆಂಬ) ಮದ್ಯೋಗವನ್ನು ಆಶ್ರಯಿಸಿಕೊಂಡು ಚಿತ್ತವನ್ನು ಬಿಗಿಹಿಡಿದು ಸರ್ವಕರ್ಮಫಲತ್ಯಾಗವನ್ನು ಮಾಡು.

**ವಿವರಣೆ :** ೧೦–೧೧ನೆಯ ಶ್ಲೋಕಗಳ ತಾತ್ಪರ್ಯದಲ್ಲಿ ವ್ಯತ್ಯಾಸ ಉಂಟು – ಸರ್ವದಾ ಧ್ಯಾನ, ಪೂಜೆ, ಕೀರ್ತನೆ – ಮೊದಲಾದ ಭಗವತ್ಕರ್ಮದಲ್ಲಿ ತೊಡಗಿರು–ಎಂದು ೧೦ನೆಯ ಶ್ಲೋಕದ ತಾತ್ಪರ್ಯ. ವ್ಯವಹಾರದಲ್ಲಿರತಕ್ಕವನಿಗೆ ಇದು ಸಾಧ್ಯವಾಗದೆಂದು ೧೧ನೆಯ ಶ್ಲೋಕ ಹೊರಟಿದೆ. ವ್ಯಾವಹಾರಿಕವಾದ ಯಾವ ಲೌಕಿಕಕರ್ಮವನ್ನು ಮಾಡಿದರೂ ಅದರ ಫಲವೆಲ್ಲವೂ ಈಶ್ವರನಿಗೇ ಅರ್ಪಿತವೆಂದು ನಿಶ್ಚಯಿಸಿ ಕೆಲಸವನ್ನು ಮಾಡು. ಫಲವು ದೊರೆಯಲಿ ದೊರೆಯದಿರಲಿ, ಸಮಚಿತ್ತನಾಗಿರು – ಎಂದು ೧೧ನೆಯ ಶ್ಲೋಕದ ಅಭಿಪ್ರಾಯ.

**ಶ್ರೇಯೋ ಹಿ ಜ್ಞಾನಮಭ್ಯಾಸಾತ್ ಜ್ಞಾನಾಧ್ಯಾನಂ ವಿಶಿಷ್ಯತೇ ।**
**ಧ್ಯಾನಾತ್ಕರ್ಮಫಲತ್ಯಾಗಸ್ತ್ಯಾಗಾಚ್ಛಾಂತಿರನಂತರಮ್ ॥ ೧೨**

ಏಕೆಂದರೆ, (ಮನಸ್ಸನ್ನು ಆತ್ಮನಲ್ಲಿ ಸ್ಥಿರಗೊಳಿಸುವ ಪ್ರಯತ್ನವೆಂಬ) ಅಭ್ಯಾಸಕ್ಕಿಂತ ಆತ್ಮಸ್ವರೂಪವನ್ನು ನಿಶ್ಚಯಿಸುವ ಜ್ಞಾನವು ಹೆಚ್ಚಿನದು. ಈ ಜ್ಞಾನಕ್ಕಿಂತಲೂ (ಸತತವಾದ ಆತ್ಮಪ್ರತ್ಯಯವೆಂಬ) ಧ್ಯಾನವು ಮೇಲೆನಿಸುತ್ತದೆ. ಈ ಧ್ಯಾನಕ್ಕಿಂತ ಸರ್ವಕರ್ಮಫಲತ್ಯಾಗವು ಉತ್ತಮವಾದದ್ದು. ಈ ತ್ಯಾಗವಾದೊಡನೆ ವ್ಯವಧಾನವಿಲ್ಲದೆ ಸಂಸಾರದ ಶಾಂತಿಯೆಂಬ ಮೋಕ್ಷವು ದೊರೆಯುವುದು.,

**ವಿವರಣೆ :** ಫಲತ್ಯಾಗಪೂರ್ವಕ ಕರ್ಮಾನುಷ್ಠಾನ, ಚಿತ್ತಶುದ್ಧಿ, ಜ್ಞಾನ, ಮೋಕ್ಷ – ಎಂಬುದು ಸಿದ್ಧಾಂತದಲ್ಲಿ ವ್ಯವಸ್ಥಿತವಾದ ಕ್ರಮ. ಆದ್ದರಿಂದ ಫಲತ್ಯಾಗವನ್ನಿಲ್ಲಿ ಶ್ರೇಷ್ಠವೆಂದು ಹೇಳಿದ್ದು ಸರ್ವಕರ್ಮತ್ಯಾಗವನ್ನು ಹೊಗಳುವುದಕ್ಕಾಗಿ. ಅಜ್ಞನು ಈಶ್ವರಾರ್ಪಣಬುದ್ಧಿಯಿಂದ ಫಲತ್ಯಾಗವನ್ನು ಮಾಡಿದರೆ ಕ್ರಮವಾಗಿ ಜ್ಞಾನನಿಷ್ಠೆಯುಂಟಾಗಿ ಸ್ವತಃ ಕರ್ಮತ್ಯಾಗವಾಗುತ್ತದೆ. ಆಗ ಶಾಂತಿ ದೊರೆಯುತ್ತದೆ. "ಯದಾ ಸರ್ವೇ ಪ್ರಮುಚ್ಯಂತೇ ಕಾಮಾ ಯೇऽಸ್ಯ

ಹೃದಿ ಸ್ಥಿತಾಃ । ತದಾ ಮರ್ತ್ಯೋಽಮೃತೋ ಭವತಿ....." (ಕಠ. ೨–೩–೧೪).
ಈ ಶ್ಲೋಕದಲ್ಲಿ ಧ್ಯಾನವೆಂದರೆ ಜ್ಞಾನನಿಷ್ಠೆಯೇ. ಫಲತ್ಯಾಗದಿಂದ ಶ್ರೇಯಸ್ಸಾಗುವುದೆಂದು ಅಜ್ಞನು ಫಲವನ್ನು ಈಶ್ವರಾರ್ಪಣ ಮಾಡುತ್ತಾನೆ. ಜ್ಞಾನಿಯಾದರೋ ಕಾಮಗಳು ಅಸತ್ಯವೆಂದರಿತು ಅದನ್ನು ಬಿಡುತ್ತಾನೆ. ಕರ್ಮಗಳು ಸ್ವತಃ ಬಿಟ್ಟು ಹೋಗುತ್ತವೆ.

**ಅದ್ವೇಷ್ಟಾ ಸರ್ವಭೂತಾನಾಂ ಮೈತ್ರಃ ಕರುಣ ಏವ ಚ ।**
**ನಿರ್ಮಮೋ ನಿರಹಂಕಾರಃ ಸಮದುಃಖಸುಖಃ ಕ್ಷಮೀ ॥** ೧೩

**ಸಂತುಷ್ಟಃ ಸತತಂ ಯೋಗೀ ಯತಾತ್ಮಾ ದೃಢನಿಶ್ಚಯಃ ।**
**ಮಯ್ಯರ್ಪಿತಮನೋಬುದ್ಧಿರ್ಯೋ ಮದ್ಭಕ್ತಃ ಸ ಮೇ ಪ್ರಿಯಃ ॥** ೧೪

ಯಾವ ಭೂತಗಳನ್ನೂ ದ್ವೇಷಿಸದೆ, ಸ್ನೇಹಭಾವದಿಂದ ವರ್ತಿಸುತ್ತ, ಕಾರುಣ್ಯಶಾಲಿಯಾಗಿ, ಮಮತ್ವವನ್ನೂ ಅಹಂಕಾರವನ್ನೂ ತ್ಯಜಿಸಿ, ಸುಖದುಃಖಗಳನ್ನು ಸಮವಾಗಿ ತಿಳಿದು ಹಿಗ್ಗದೆ ಕುಗ್ಗದೆ, ಕ್ಷಮಾಶೀಲನಾಗಿ, ಸರ್ವದಾ ಸಂತೃಪ್ತನೂ, ಇಂದ್ರಿಯಸಂಯಮವುಳ್ಳವನೂ ಆತ್ಮತತ್ತ್ವದಲ್ಲಿ ದೃಢನಿಶ್ಚಯನೂ ಯೋಗಿಯೂ (ಸಮಾಹಿತಚಿತ್ತನೂ) ನನ್ನಲ್ಲಿಯೇ ಮನೋಬುದ್ಧಿಗಳನ್ನರ್ಪಿಸಿದವನೂ ಆದ ನನ್ನ ಭಕ್ತನು ನನಗೆ ಅತ್ಯಂತ ಪ್ರಿಯನಾದವನು.

**ವಿವರಣೆ :** ಇದೆಲ್ಲವೂ ಅಕ್ಷರೋಪಾಸಕನ – ಅವ್ಯಕ್ತೋಪಾಸಕನ ಲಕ್ಷಣ. ದ್ವೇಷರಾಹಿತ್ಯ, ಸ್ನೇಹಭಾವ–ಮೊದಲಾದವನ್ನು ಸಾಧಕನು ಪ್ರಯತ್ನಪೂರ್ವಕ ವಾಗಿ ಅಭ್ಯಾಸ ಮಾಡಬೇಕು. ಸಿದ್ಧನಾದ ಯೋಗಿಗಾದರೋ ಇವೆಲ್ಲವೂ ವಶವಾಗಿರುವುದರಿಂದ ಕೇವಲ ಆತನ ಲಕ್ಷಣಗಳಾಗಿರುತ್ತವೆ.

**ಯಸ್ಮಾನ್ನೋದ್ವಿಜತೇ ಲೋಕೋ ಲೋಕಾನ್ನೋದ್ವಿಜತೇ ಚ ಯಃ ।**
**ಹರ್ಷಾಮರ್ಷಭಯೋದ್ವೇಗೈರ್ಮುಕ್ತೋ ಯಃ ಸ ಚ ಮೇ ಪ್ರಿಯಃ ॥**

ಯಾರ ದೆಸೆಯಿಂದ ಜನರು ಉದ್ವೇಗ(ತಳಮಳ)ಗೊಳ್ಳುವುದಿಲ್ಲವೋ ಯಾವಾತನು ಜನರಿಂದ ಉದ್ವಿಗ್ನನಾಗುವುದಿಲ್ಲವೋ, ಸಂತೋಷ ಅಸಹನೆ ಭಯ ಉದ್ವೇಗಗಳನ್ನು ಬಿಟ್ಟ ಆ ನನ್ನ ಭಕ್ತನು ನನಗೆ ಅತ್ಯಂತ ಪ್ರಿಯನಾದವನು.

**ಅನಪೇಕ್ಷಃ ಶುಚಿರ್ದಕ್ಷ ಉದಾಸೀನೋ ಗತವ್ಯಥಃ ।**
**ಸರ್ವಾರಂಭಪರಿತ್ಯಾಗೀ ಯೋ ಮದ್ಭಕ್ತಃ ಸ ಮೇ ಪ್ರಿಯಃ ॥** ೧೬

ದೇಹಾದಿವಸ್ತುಗಳು ಹೀಗೆಯೇ ಇರಬೇಕೆಂಬ ಅಪೇಕ್ಷೆ ಇಲ್ಲದವನೂ ಬಾಹ್ಯದಲ್ಲಿಯೂ ಅಂತರಂಗದಲ್ಲಿಯೂ ಶುಚಿಯಾಗಿರತಕ್ಕವನೂ ಕಾರ್ಯವು ಒದಗಿದರೆ ಇದು ಹೀಗೆಯೇ ಎಂದು ನಿಶ್ಚಯಿಸಲು ದಕ್ಷನೂ ಯಾರ ಪಕ್ಷವನ್ನೂ ಸೇರದೆ ತಟಸ್ಥನಾಗಿರತಕ್ಕವನೂ ಭಯರಹಿತನೂ ಕಾಮಜನ್ಯವಾದ ಸಕಲಕರ್ಮಗಳನ್ನು ತ್ಯಜಿಸಿದವನೂ ಆದ ನನ್ನ ಭಕ್ತನು ನನಗೆ ಅತ್ಯಂತ ಪ್ರಿಯನು.

**ಯೋ ನ ಹೃಷ್ಯತಿ ನ ದ್ವೇಷ್ಟಿ ನ ಶೋಚತಿ ನ ಕಾಂಕ್ಷತಿ ।**
**ಶುಭಾಶುಭಪರಿತ್ಯಾಗೀ ಭಕ್ತಿಮಾನ್ ಯಃ ಸ ಮೇ ಪ್ರಿಯಃ ॥ ೧೭**

ಯಾವನು ಇಷ್ಟವು ದೊರಕಿದಾಗ ಹರ್ಷಿಸುವುದಿಲ್ಲವೋ, ಅನಿಷ್ಟವು ಪ್ರಾಪ್ತವಾದಾಗ ಅದನ್ನು ದ್ವೇಷಿಸುವುದಿಲ್ಲವೋ, ಪ್ರಿಯವಾದದ್ದು ನಷ್ಟವಾದರೆ ಶೋಕಿಸುವುದಿಲ್ಲವೋ, ದೊರಕದೆ ಇದ್ದುದನ್ನು ಆಶಿಸುವುದಿಲ್ಲವೋ ಒಳ್ಳೆಯದು–ಕೆಟ್ಟದ್ದು ಎಂಬ ಎರಡು ಬಗೆಯ ಕರ್ಮಗಳನ್ನು ತ್ಯಜಿಸತಕ್ಕವನೋ ಮತ್ತು ನನ್ನಲ್ಲಿ ಭಕ್ತಿವಂತನಾಗಿರುತ್ತಾನೋ ಅವನು ನನಗೆ ಅತ್ಯಂತ ಪ್ರಿಯನು.

**ಸಮಃ ಶತ್ರೌ ಚ ಮಿತ್ರೇ ಚ ತಥಾ ಮಾನಾಪಮಾನಯೋಃ ।**
**ಶೀತೋಷ್ಣಸುಖದುಃಖೇಷು ಸಮಃ ಸಂಗವಿವರ್ಜಿತಃ ॥ ೧೮**

**ತುಲ್ಯನಿಂದಾಸ್ತುತಿರ್ಮೌನೀ ಸಂತುಷ್ಟೋ ಯೇನಕೇನಚಿತ್ ।**
**ಅನಿಕೇತಃ ಸ್ಥಿರಮತಿರ್ಭಕ್ತಿಮಾನ್ ಮೇ ಪ್ರಿಯೋ ನರಃ ॥ ೧೯**

ಯಾವಾತನು ಶತ್ರುವಿನಲ್ಲಿಯೂ ಮಿತ್ರನಲ್ಲಿಯೂ, ಮಾನ–ಅವಮಾನ ಗಳಲ್ಲಿಯೂ ಶೀತ–ಉಷ್ಣ–ಸುಖ–ದುಃಖಗಳಲ್ಲಿಯೂ ಯಾವ ವಿಕಾರವಿಲ್ಲದೆ ಸಮಚಿತ್ತನಾಗಿ ಸರ್ವವಿಷಯಗಳಲ್ಲಿಯೂ ಸಂಗವನ್ನು ತೊರೆದು ಇರುತ್ತಾನೋ–

ಮತ್ತು ಯಾರು ನಿಂದಿಸಲಿ ಹೊಗಳಲಿ ಎರಡರಲ್ಲಿಯೂ ಸಮಬುದ್ಧಿ ಯಾಗಿರುವನೋ, ವಾಗಿಂದ್ರಿಯವನ್ನು ಬಿಗಿಹಿಡಿದುಕೊಂಡಿರುವನೋ, ಶರೀರ ಸ್ಥಿತಿಗೆ ಬೇಕಾದಷ್ಟು ಯಾವುದು ಸಿಕ್ಕಿದರೆ ಅದರಿಂದ ಸಂತುಷ್ಟನೋ, ಗೊತ್ತಾದ ಒಂದು ವಾಸಸ್ಥಳವೇ ಇಲ್ಲದಿರುವನೋ, ಪರಮಾರ್ಥದಲ್ಲಿ ದೃಢವಾದ ನಿಷ್ಠೆಯುಳ್ಳ ಆ ಭಕ್ತಿಶಾಲಿಯಾದ ಮನುಷ್ಯನು ನನಗೆ ಅತ್ಯಂತ ಪ್ರಿಯನು.

**ವಿವರಣೆ :**

**ಯೇನಕೇನ ಚಿದಾಚ್ಛನ್ನೋ ಯೇನಕೇನ ಚಿದಾಶಿತಃ ।**
**ಯತ್ರ ಕ್ವಚನ ಶಾಯೀ ಸ್ಯಾತ್ ತಂ ದೇವಾ ಬ್ರಾಹ್ಮಣಂ ವಿದುಃ ॥**

ಎಂದು ಮೋಕ್ಷಧರ್ಮಪರ್ವದಲ್ಲಿದೆ (೨೪೫–೧೨). ಆದ್ದರಿಂದ ಇದೆಲ್ಲವೂ ಅಕ್ಷರೋಪಾಸಕನಾದ ಜ್ಞಾನಯೋಗಿಯ ಲಕ್ಷಣವೇ ಹೊರತು ಕರ್ಮ ಯೋಗಿಯ ಲಕ್ಷಣವಲ್ಲ.

**ಯೇ ತು ಧರ್ಮ್ಯಾಮೃತಮಿದಂ ಯಥೋಕ್ತಂ ಪರ್ಯುಪಾಸತೇ ।**
**ಶ್ರದ್ದಧಾನಾ ಮತ್ಪರಮಾ ಭಕ್ತಾಸ್ತೇಽತೀವ ಮೇ ಪ್ರಿಯಾಃ ॥ ೨೦**

**ಇತಿ ಶ್ರೀಮದ್ಭಗವದ್ಗೀತಾಸೂಪನಿಷತ್ಸು ಬ್ರಹ್ಮವಿದ್ಯಾಯಾಂ ಯೋಗಶಾಸ್ತ್ರೇ ಭಕ್ತಿಯೋಗೋ ನಾಮ ದ್ವಾದಶೋಽಧ್ಯಾಯಃ**

ಈ ರೀತಿಯಲ್ಲಿ 'ಅದ್ವೇಷ್ಟಾ ಸರ್ವಭೂತಾನಾಂ' (೧೨–೧೩) ಇತ್ಯಾದಿ ಶ್ಲೋಕಗಳಲ್ಲಿ ಹೇಳಿರುವ ಗುಣಾವಳಿಯು ಧರ್ಮೋಪೇತವಾದ ಅಮೃತ ವಾಗಿದೆ. ಇದನ್ನು ಯಾರು ಅನುಷ್ಠಾನದಲ್ಲಿಟ್ಟುಕೊಳ್ಳುತ್ತಾರೋ, ನಾನೇ ಪರಮ ಗತಿಯೆಂದು ನಂಬಿದ್ದಾರೋ ಆ ಭಕ್ತರು ನನಗೆ ಅತ್ಯಂತ ಪ್ರಿಯರಾದವರು.

**ವಿವರಣೆ :** 'ಪ್ರಿಯೋ ಹಿ ಜ್ಞಾನಿನೋಽತ್ಯರ್ಥಂ' (೭–೭) ಎಂದು ಹಿಂದೆ ಸೂಚಿತವಾದ ವಿಚಾರವು ಈ ಪ್ರಕಾರ ಉಪಸಂಹೃತವಾಗಿದೆ. ಮುಮುಕ್ಷುವಾದ ವನು ಈ ಗುಣಗಳನ್ನು ಪ್ರಯತ್ನಪೂರ್ವಕವಾಗಿ ಆಚರಣೆಯಲ್ಲಿಟ್ಟುಕೊಳ್ಳ ಬೇಕೆಂದು ತಾತ್ಪರ್ಯ.

**ಇಲ್ಲಿಗೆ ಶ್ರೀಮದ್ಭಗವದ್ಗೀತೆಯಲ್ಲಿ ಭಕ್ತಿಯೋಗವೆಂಬ ಹನ್ನೆರಡನೆಯ ಅಧ್ಯಾಯವು ಸಮಾಪ್ತವಾಯಿತು.**

## ೧೨ನೆಯ ಅಧ್ಯಾಯದ ಸಾರ

ಅರ್ಜುನನು ವಿಶ್ವರೂಪವನ್ನು ನೋಡಿದ ಮೇಲೆ ಈ ರೀತಿ ಕೇಳಿದನು : "ಶ್ರೀಕೃಷ್ಣ, ನೀನು ಅಲ್ಲಲ್ಲಿ ನಿರುಪಾಧಿಕವೂ ಅವ್ಯಕ್ತವೂ ಆದ ಅಕ್ಷರಬ್ರಹ್ಮವನ್ನು ಉಪದೇಶಿಸಿದ್ದೀಯೆ. ನಿನ್ನ ಸಗುಣವಾದ ವಿಶ್ವರೂಪವನ್ನೂ ತೋರಿಸಿದ್ದೀಯೆ. ಅಕ್ಷರಬ್ರಹ್ಮವನ್ನು ಉಪಾಸನೆಮಾಡತಕ್ಕವರು, ವಿಶ್ವರೂಪವನ್ನು ಉಪಾಸನೆ ಮಾಡತಕ್ಕವರು – ಇವರಲ್ಲಿ ಯಾರು ಹೆಚ್ಚಿನ ಯೋಗಿಗಳು ?"

ಆಗ ಶ್ರೀಕೃಷ್ಣನು ಹೀಗೆಂದನು : "ಅರ್ಜುನ, ವಿಶ್ವರೂಪವನ್ನು ಉಪಾಸನೆ ಮಾಡತಕ್ಕವರು ಹೆಚ್ಚಿನ ಯೋಗಿಗಳೆಂದು ನನ್ನ ಮತವಿದೆ. ಅವ್ಯಕ್ತ ಸ್ವರೂಪವನ್ನು ಉಪಾಸನೆ ಮಾಡತಕ್ಕವರೂ ನನ್ನನ್ನೇ ಸೇರುತ್ತಾರೆ. ಆದರೆ ಅದು ಬಹು ಕಠಿಣವಾದದ್ದು. ಬ್ರಹ್ಮವು ಇಂದ್ರಿಯಗಳಿಗೆ ನಿಲುಕತಕ್ಕದ್ದಲ್ಲ. ದೇಹಾಭಿಮಾನ ಉಳ್ಳವರಿಗೆ ಆ ಉಪಾಸನೆ ಸಾಧ್ಯವಾಗುವುದಿಲ್ಲ. ವಿಶ್ವರೂಪದ ಸಗುಣೋಪಾಸನೆ ಸುಲಭವಾದ್ದರಿಂದ ಅದು ಉತ್ತಮವೆಂದು ಮಾತ್ರ ಹೇಳುತ್ತಿದ್ದೇನೆ. ಆದ್ದರಿಂದ ನೀನು ವಿಶ್ವರೂಪನಾದ ನನ್ನಲ್ಲಿ ಮನೋಬುದ್ಧಿಗಳನ್ನು ನಿಲ್ಲಿಸು. ಅದೂ ನಿನಗೆ ಕಷ್ಟವೆನಿಸಿದರೆ ವಿವೇಕ ವೈರಾಗ್ಯಗಳನ್ನವಲಂಬಿಸಿ ಪ್ರಯತ್ನ ಮಾಡು. ಅದೂ ಕ್ಲೇಶವೆನಿಸಿದರೆ ಈಶ್ವರಪ್ರೀತ್ಯರ್ಥವೆಂದು ಸಂಕಲ್ಪಿಸಿ, ಯಾವ ಬೇರೆ ಫಲಾಪೇಕ್ಷೆಯನ್ನೂ ಇಡದೆ ಕರ್ಮವನ್ನು ಮಾಡುತ್ತ ಹೋಗು. ಹೀಗೆ ವರ್ತಿಸುತ್ತಿದ್ದರೆ ನನ್ನನ್ನೇ ಸೇರಿಕೊಳ್ಳುವೆ.

ಆದರೆ ವಾಸ್ತವದಲ್ಲಿ ಅಕ್ಷರಬ್ರಹ್ಮೋಪಾಸಕರು ನನಗೆ ಅತ್ಯಂತ ಪ್ರಿಯರು. ಅವರ ಲಕ್ಷಣವೇನೆಂದರೆ: ಅವರು ಯಾವ ಪ್ರಾಣಿಯನ್ನೂ ದ್ವೇಷಿಸದೆ, ಎಲ್ಲರಲ್ಲಿಯೂ ಕರುಣೆಯನ್ನು ತೋರುತ್ತಾರೆ. ಸುಖದುಃಖಗಳನ್ನು ಸಮವಾಗಿ ಕಾಣುತ್ತ, ತಮಗೆ ಅಪಕಾರ ಮಾಡಿದವರನ್ನೂ ಕ್ಷಮಿಸುತ್ತ, ಅಲ್ಪಸಂತುಷ್ಟರಾಗಿ, ಇಂದ್ರಿಯಗಳನ್ನು ಬಿಗಿಹಿಡಿದು ಪರಮಾತ್ಮನಲ್ಲಿಯೇ ಮನೋಬುದ್ಧಿಗಳನ್ನು ದೃಢವಾಗಿ ನಿಲ್ಲಿಸಿರುತ್ತಾರೆ. ಯಾರೊಬ್ಬರ ಪಕ್ಷವನ್ನೂ ಹಿಡಿಯದೆ, ತಮಗಾಗಿ ಯಾವುದೊಂದು ಕರ್ಮವನ್ನೂ ಮಾಡದೆ, ಒದಗಿದ ಕಾರ್ಯವನ್ನು ಮಾತ್ರ ದಕ್ಷತೆಯಿಂದ ನೆರವೇರಿಸುತ್ತಾರೆ. ಮಾನ–ಅವಮಾನಗಳನ್ನು ಲೆಕ್ಕಿಸದೆ ಒಂದೇ ಹದದಲ್ಲಿ ಮನಸ್ಸನ್ನಿಟ್ಟುಕೊಂಡಿರುತ್ತಾರೆ. ತಮ್ಮವರು, ಅನ್ಯರು–ಎಂಬ ಭೇದಬುದ್ಧಿ ಅವರಿಗಿರುವುದಿಲ್ಲ. ಅನ್ನ, ಬಟ್ಟೆ, ವಾಸಸ್ಥಳ ಹೀಗೆಯೇ ಆಗಬೇಕೆಂಬ ಚಿಂತೆಯೇ ಅವರಿಗಿರುವುದಿಲ್ಲ. ಪರತತ್ತ್ವದಲ್ಲಿಯೇ ಚಿತ್ತವನ್ನು ನಿಲ್ಲಿಸಿ ಬಾಹ್ಯ ವಿಷಯಗಳಲ್ಲಿ ಆದರವನ್ನು ಕಳೆದುಕೊಂಡಿರುತ್ತಾರೆ.

ಅವರ ಈ ಪ್ರಕಾರವಾದ ನಡತೆ ಧರ್ಮಯುಕ್ತವಾಗಿಯೇ ಇರುತ್ತದೆ. ಅಧರ್ಮದ ಲೇಶವೂ ಅವರ ಬಳಿ ಸುಳಿಯುವುದಿಲ್ಲ. ನಾನೇ ಪರಮಗತಿಯೆಂದು ನಿಶ್ಚಯಿಸಿಕೊಂಡಿರುವ ಆ ಭಕ್ತರು ನನಗೆ ಅತ್ಯಂತ ಪ್ರಿಯರು."

## ಅಧ್ಯಾಯ ೧೩

# ಕ್ಷೇತ್ರಕ್ಷೇತ್ರಜ್ಞಯೋಗ

ಏಳನೆಯ ಅಧ್ಯಾಯದಲ್ಲಿ ಪರಮೇಶ್ವರನ ತ್ರಿಗುಣಾತ್ಮಕವಾದ ಎಂಟು ಬಗೆಯ ಅಪರಾಪ್ರಕೃತಿಯನ್ನೂ ಜೀವನೆಂಬ ಪರಾಪ್ರಕೃತಿಯನ್ನೂ ಹೇಳಲಾಗಿತ್ತು. ಅಪರಾಪ್ರಕೃತಿಯು ಪ್ರಾಣಿಗಳ ಶರೀರವಾಗಿ ಪರಿಣಮಿಸಿ ಕ್ಷೇತ್ರವೆನಿಸಿ ಕೊಳ್ಳುತ್ತದೆ. ಜೀವನೆಂಬ ಹೆಸರಿನ ಪರಾಪ್ರಕೃತಿಯು ಕ್ಷೇತ್ರಜ್ಞನೆನಿಸಿಕೊಳ್ಳುತ್ತದೆ. ಈಗ ಈ ಪ್ರಕೃತಿಗಳುಳ್ಳ ಈಶ್ವರನ ಸ್ವರೂಪವನ್ನು ಹೇಳಬೇಕಾಗಿದೆ. ಅಲ್ಲದೆ ಹಿಂದಿನ ಅಧ್ಯಾಯದಲ್ಲಿ 'ಅದ್ವೇಷ್ಟಾ ಸರ್ವಭೂತಾನಾಂ...' ಇತ್ಯಾದಿ ಶ್ಲೋಕ ಗಳಿಂದ ತತ್ತ್ವಜ್ಞಾನಿಯ ಲಕ್ಷಣವನ್ನು ಹೇಳಲಾಗಿದೆ. ತತ್ತ್ವಜ್ಞಾನ ಯಾವುದು? ಎಂಬುದನ್ನು ತಿಳಿಸಬೇಕಾಗಿದೆ. ಆದ್ದರಿಂದ ಈ ಅಧ್ಯಾಯದ ಆರಂಭ.

**ಶ್ರೀಭಗವಾನುವಾಚ –**

**ಇದಂ ಶರೀರಂ ಕೌಂತೇಯ ಕ್ಷೇತ್ರಮಿತ್ಯಭಿಧೀಯತೇ ।**
**ಏತದ್ಯೋ ವೇತ್ತಿ ತಂ ಪ್ರಾಹುಃ ಕ್ಷೇತ್ರಜ್ಞ ಇತಿ ತದ್ವಿದಃ ॥** ೧

**ಭಗವಂತನು ಹೀಗೆಂದನು –** ಕೌಂತೇಯ, ಈ ಶರೀರವು ಕ್ಷೇತ್ರವೆಂದು ಹೇಳಲ್ಪಡುತ್ತದೆ. ಇದನ್ನು ಯಾವನು ತಿಳಿಯುತ್ತಾನೋ ಆತನು ಕ್ಷೇತ್ರಜ್ಞನೆಂದು ಕ್ಷೇತ್ರಕ್ಷೇತ್ರಜ್ಞರನ್ನು ಬಲ್ಲವರು ತಿಳಿದಿದ್ದಾರೆ.

**ಕ್ಷೇತ್ರಜ್ಞಂ ಚಾಪಿ ಮಾಂ ವಿದ್ಧಿ ಸರ್ವಕ್ಷೇತ್ರೇಷು ಭಾರತ ।**
**ಕ್ಷೇತ್ರಕ್ಷೇತ್ರಜ್ಞಯೋರ್ಜ್ಞಾನಂ ಯತ್ತಜ್ಜ್ಞಾನಂ ಮತಂ ಮಮ ॥** ೨

ಭರತವಂಶೋದ್ಭವ, ಸರ್ವಕ್ಷೇತ್ರಗಳಲ್ಲಿಯೂ ಇರುವ ಕ್ಷೇತ್ರಜ್ಞನೇ ನಾನೆಂದೂ (ಹಾಗೆಯೇ ಅಸಂಸಾರಿಯಾದ ಈಶ್ವರನೆಂದೂ ಸಹ) ತಿಳಿದುಕೊ. ಕ್ಷೇತ್ರ, ಕ್ಷೇತ್ರಜ್ಞ – ಇವರ ಜ್ಞಾನವೇ ಸರಿಯಾದ ಜ್ಞಾನವೆಂದು ನನ್ನ ಮತ.

**ತತ್ ಕ್ಷೇತ್ರಂ ಯಚ್ಚ ಯಾದೃಕ್ಚ ಯದ್ವಿಕಾರಿ ಯತಶ್ಚ ಯತ್ ।**
**ಸ ಚ ಯೋ ಯತ್ಪ್ರಭಾವಶ್ಚ ತತ್ಸಮಾಸೇನ ಮೇ ಶೃಣು ॥** ೩

ಶರೀರವೆಂಬ ಈ ಕ್ಷೇತ್ರವು ಯಾವ ಧರ್ಮ ಉಳ್ಳದ್ದು, ಯಾವ ವಿಕಾರ ಉಳ್ಳದ್ದು, ಯಾವುದರಿಂದ ಇದು ಹುಟ್ಟಿದೆ – ಎಂಬುದನ್ನೂ ಆ ಕ್ಷೇತ್ರಜ್ಞನು ಯಾವ ಪ್ರಭಾವದವನು – ಎಂಬುದನ್ನೂ ಸಂಕ್ಷೇಪವಾಗಿ ಹೇಳುತ್ತೇನೆ, ಕೇಳು.

**ಋಷಿಭಿರ್ಬಹುಧಾ ಗೀತಂ ಛಂದೋಭಿರ್ವಿವಿಧೈಃ ಪೃಥಕ್ ।**
**ಬ್ರಹ್ಮಸೂತ್ರಪದೈಶ್ಚೈವ ಹೇತುಮದ್ಭಿರ್ವಿನಿಶ್ಚಿತೈಃ ॥ ೪**

ಈ ವಿಚಾರವನ್ನು ವಸಿಷ್ಠಾದಿ ಋಷಿಗಳು ಋಗ್ವೇದಾದಿ ನಾನಾ ಪ್ರಕಾರದ ಛಂದಸ್ಸುಗಳಿಂದ ಬಗೆಬಗೆಯಾಗಿ ವಿಂಗಡಿಸಿ ಹಾಡಿದ್ದಾರೆ. ಯುಕ್ತಿಯುಕ್ತಗಳೂ ನಿಃಸಂಶಯಗಳೂ ಆದ ಬ್ರಹ್ಮಸೂಚಕವಾಕ್ಯಗಳಿಂದಲೂ (ಉಪನಿಷತ್ತುಗಳಿಂದಲೂ) ಇದನ್ನು ಹಾಡಿದ್ದಾರೆ.

**ಟಿಪ್ಪಣಿ :** 'ಛಂದೋಭಿಃ' ಎಂಬುದರಿಂದ ಮಂತ್ರಬ್ರಾಹ್ಮಣರೂಪವಾದ ಕರ್ಮಕಾಂಡವನ್ನೂ 'ಬ್ರಹ್ಮಸೂತ್ರಪದೈಃ' ಎಂಬುದರಿಂದ ಜ್ಞಾನಕಾಂಡವಾದ ಉಪನಿಷತ್ತುಗಳನ್ನೂ ಗ್ರಹಿಸಬೇಕು. ಕೆಲವರು ಬ್ರಹ್ಮಸೂತ್ರಗಳೆಂದರೆ ಬಾದರಾಯಣರ ಬ್ರಹ್ಮಸೂತ್ರಗಳೆಂದು ಹೇಳುತ್ತಾರೆ.

**ಮಹಾಭೂತಾನ್ಯಹಂಕಾರೋ ಬುದ್ಧಿರವ್ಯಕ್ತಮೇವ ಚ ।**
**ಇಂದ್ರಿಯಾಣಿ ದಶೈಕಂ ಚ ಪಂಚ ಚೇಂದ್ರಿಯಗೋಚರಾಃ ॥ ೫**

(ಮಹತ್ತ್ವವುಳ್ಳ) ಶಬ್ದಸ್ಪರ್ಶಾದಿ ಪಂಚ ಸೂಕ್ಷ್ಮಭೂತಗಳು, ಅಹಂಕಾರ, ಬುದ್ಧಿಯೆಂಬ ಮಹತ್ತತ್ತ್ವ, ಅವ್ಯಕ್ತ – (ಹೀಗೆ ಅಷ್ಟಧಾ ಇರುವ ಅಪರಾಪ್ರಕೃತಿ); ಇಂದ್ರಿಯಗಳು ಹತ್ತು, ಒಂದು ಮನಸ್ಸು, ಇಂದ್ರಿಯಗೋಚರಗಳಾದ ಶಬ್ದಾದಿಗುಣಗಳನ್ನು ಪಡೆದಿರುವ ಪಂಚಮಹಾಭೂತಗಳು. (ಇವು ಮುಂದಿನ ಶ್ಲೋಕದಲ್ಲಿರುವ ಕ್ಷೇತ್ರ ಎಂಬುದರೊಡನೆ ಅನ್ವಿತ)

**ವಿವರಣೆ :** ಪಂಚತನ್ಮಾತ್ರೆಗಳೆಂಬ ಶಬ್ದಾದಿಸೂಕ್ಷ್ಮಭೂತಗಳು ಬಿಟ್ಟು ಹೋಗಬಾರದೆಂದು 'ಮಹಾಭೂತಾನಿ' ಎಂಬ ಪದಕ್ಕೆ ಸೂಕ್ಷ್ಮಭೂತಗಳೆಂದು ಅರ್ಥವನ್ನು ಮಾಡಲಾಗಿದೆ. ಇವು ಎಲ್ಲ ತಮ್ಮ ಕಾರ್ಯಗಳನ್ನು ವ್ಯಾಪಿಸುವುದರಿಂದ ಮಹತ್ತ್ವವನ್ನು ಪಡೆದವು. ಆಕಾಶಾದಿಗಳಲ್ಲಿರುವ ಶಬ್ದ, ಸ್ಪರ್ಶ, ರೂಪ, ರಸ, ಗಂಧಗಳು ಇಂದ್ರಿಯಗೋಚರವಾದ ಗುಣಗಳು. ಇವುಗಳಿಂದ ಉಪಲಕ್ಷಣವಾಗಿ ಆಕಾಶಾದಿ ಪಂಚಮಹಾಭೂತಗಳನ್ನು ಗ್ರಹಿಸಬೇಕು. ಶಬ್ದಾದಿ ಸೂಕ್ಷ್ಮಭೂತಗಳು ಇಂದ್ರಿಯಗೋಚರಗಳಲ್ಲವಾದ್ದರಿಂದ ಅವನ್ನು 'ಪಂಚ ಚೇಂದ್ರಿಯಗೋಚರಾಃ' ಎಂಬುದರಿಂದ ತೆಗೆದುಕೊಳ್ಳಲಾಗುವುದಿಲ್ಲ. ಮನಸ್ಸು ಇಂದ್ರಿಯ, ಇಂದ್ರಿಯವಲ್ಲ – ಎಂದು ಎರಡು ಪಕ್ಷಗಳುಂಟು. ಇಲ್ಲಿ ಹೇಳುತ್ತಿರುವುದು ಕ್ಷೇತ್ರದ ಸ್ವರೂಪ, ಕೇವಲ ಅಷ್ಟಧಾ ಪ್ರಕೃತಿಯಲ್ಲ.

**ಇಚ್ಛಾ ದ್ವೇಷಃ ಸುಖಂ ದುಃಖಂ ಸಂಘಾತಶ್ಚೇತನಾ ಧೃತಿಃ ।**
**ಏತತ್ ಕ್ಷೇತ್ರಂ ಸಮಾಸೇನ ಸವಿಕಾರಮುದಾಹೃತಮ್ ॥ ೬**

ಇಚ್ಛೆ, ದ್ವೇಷ, ಸುಖ, ದುಃಖ, ದೇಹೇಂದ್ರಿಯಗಳ ಸಂಶ್ಲೇಷ, ಚೇತನಾ, ಧೃತಿ – ಇವಿಷ್ಟು ಕ್ಷೇತ್ರವೆನಿಸುತ್ತದೆ. ಹೀಗೆ ಮಹತ್ತತ್ತ್ವಾದಿ ವಿಕಾರಗಳೊಡನೆ ಕ್ಷೇತ್ರವೆಂದರೇನೆಂಬುಧನ್ನು ಸಂಕ್ಷೇಪವಾಗಿ ಹೇಳಿದ್ದೇನೆ.

ವಿವರಣೆ : ಹಿಂದಿನ ಶ್ಲೋಕದಲ್ಲಿ ಹೇಳಿದ್ದು, ಇಲ್ಲಿ ಹೇಳಿದ್ದು ಎಲ್ಲ ಸೇರಿ ಕ್ಷೇತ್ರ. ಇಚ್ಛಾ, ದ್ವೇಷ – ಮುಂತಾದ ಶಬ್ದಗಳಿಂದ ಎಲ್ಲ ಮನೋವ್ಯಾಪಾರ ಗಳನ್ನೂ ಗ್ರಹಿಸಬೇಕು. ಇವು ಆತ್ಮಧರ್ಮಗಳೆಂಬ ತಾರ್ಕಿಕರ ಮತವನ್ನು ವೇದಾಂತವು ಒಪ್ಪುವುದಿಲ್ಲ. ಇವೆಲ್ಲ ಅಂತಃಕರಣಧರ್ಮಗಳು. ಕಾದ ಕಬ್ಬಿಣದಲ್ಲಿ ಬೆಂಕಿಯು ತೋರುವಂತೆ, ಆತ್ಮಚೈತನ್ಯದ ಸಂಬಂಧದಿಂದ ಮನಸ್ಸಿನಲ್ಲಿ ತೋರಿಕೊಳ್ಳುವ ಶಕ್ತಿವಿಶೇಷವೇ ಚೇತನಾ. ದೇಹವು ಒಲೆದು ಬೀಳದಂತೆ ತಡೆಯುವ ಯತ್ನವಿಶೇಷವು ಧೃತಿ ಎನಿಸುತ್ತದೆ. ವೇದಾಂತಿಗಳ ಸಿದ್ಧಾಂತದಲ್ಲಿ ಅವ್ಯಕ್ತವೆಂದರೆ ಅವ್ಯಾಕೃತವೆಂಬ ಈಶ್ವರನ ಶಕ್ತಿ. ಅದೇ ಮಾಯೆ. ಮಹತ್ತತ್ತ್ವಾದಿಗಳು ಅದರ ವಿಕಾರಗಳು.

**ಅಮಾನಿತ್ವಮದಂಭಿತ್ವಮಹಿಂಸಾ ಕ್ಷಾಂತಿರಾರ್ಜವಮ್ ।**
**ಆಚಾರ್ಯೋಪಾಸನಂ ಶೌಚಂ ಸ್ಥೈರ್ಯಮಾತ್ಮವಿನಿಗ್ರಹಃ ॥ ೭**

(ಈಗ ಜ್ಞಾನಕ್ಕೆ ಸಂಬಂಧಿಸಿದ ವಿವರಣೆ) ಆತ್ಮಶ್ಲಾಘನೆಯ ವರ್ಜನೆ, ದಂಭರಾಹಿತ್ಯ, ಅಹಿಂಸೆ, ತಾಳ್ಮೆ ಋಜುಸ್ವಭಾವ, ಗುರುಶುಶ್ರೂಷೆ, ಸ್ವಚ್ಛತೆ, ಮೋಕ್ಷಮಾರ್ಗದಲ್ಲಿ ಸ್ಥಿರತೆ, ಇಂದ್ರಿಯಜಯ, ಮತ್ತು,

**ಇಂದ್ರಿಯಾರ್ಥೇಷು ವೈರಾಗ್ಯಮನಹಂಕಾರ ಏವ ಚ ।**
**ಜನ್ಮಮೃತ್ಯುಜರಾವ್ಯಾಧಿದುಃಖದೋಷಾನುದರ್ಶನಮ್ ॥ ೮**

ಇಂದ್ರಿಯವಿಷಯಗಳಲ್ಲಿ ವೈರಾಗ್ಯ, ಅಹಂಕಾರವಿಲ್ಲದಿರುವುದು, ಹುಟ್ಟು–ಸಾವು–ಮುಪ್ಪು–ರೋಗ ಇವೆಲ್ಲ ದುಃಖಹೇತುಗಳೆಂಬ ದೋಷದ ತಿಳಿವಳಿಕೆ. ಮತ್ತು,

**ಅಸಕ್ತಿರನಭಿಷ್ವಂಗಃ ಪುತ್ರದಾರಗೃಹಾದಿಷು ।**
**ನಿತ್ಯಂ ಚ ಸಮಚಿತ್ತತ್ವಮಿಷ್ಟಾನಿಷ್ಟೋಪಪತ್ತಿಷು ॥ ೯**

ಇಂದ್ರಿಯವಿಷಯಗಳಲ್ಲಿ ಅನಾಸಕ್ತಿ, ಮಕ್ಕಳು ಮಡದಿ ಮನೆ –

ಮೊದಲಾದವುಗಳಲ್ಲಿ 'ಇವು ನಾನೇ' ಎಂಬ ವ್ಯಾಮೋಹದ ತ್ಯಾಗ, ಇಷ್ಟ ವಾದದ್ದು ದೊರೆಯಲಿ ಅನಿಷ್ಟವಾದದ್ದು ಒದಗಲಿ – ಮನಸ್ಸಿನ ಸಮತೆಯನ್ನು ಎಂದಿಗೂ ಕಳೆದುಕೊಳ್ಳದಿರುವುದು. ಮತ್ತು,

**ಮಯಿ ಚಾನನ್ಯಯೋಗೇನ ಭಕ್ತಿರವ್ಯಭಿಚಾರಿಣೀ ।**
**ವಿವಿಕ್ತದೇಶಸೇವಿತ್ವಮರತಿರ್ಜನಸಂಸದಿ ॥ ೧೦**

ಪರಮೇಶ್ವರನಾದ ನನ್ನಲ್ಲಿ ನಿರಂತರವಾದ ಭಕ್ತಿ, ಏಕಾಂತಸ್ಥಳವನ್ನು ಆಶ್ರಯಿಸಿಕೊಳ್ಳುವುದು, ಜನರ ಗುಂಪಿನಲ್ಲಿ ಅಭಿಲಾಷೆಯನ್ನು ತೊರೆಯುವುದು. ಮತ್ತು,

**ಅಧ್ಯಾತ್ಮಜ್ಞಾನನಿತ್ಯತ್ವಂ ತತ್ತ್ವಜ್ಞಾನಾರ್ಥದರ್ಶನಮ್ ।**
**ಏತಜ್ಜ್ಞಾನಮಿತಿ ಪ್ರೋಕ್ತಮಜ್ಞಾನಂ ಯದತೋಽನ್ಯಥಾ ॥ ೧೧**

ಅಧ್ಯಾತ್ಮಜ್ಞಾನದಲ್ಲಿ ಸದಾ ತೊಡಗಿರುವುದು, ತತ್ತ್ವಜ್ಞಾನದ ಫಲವಾದ ಮೋಕ್ಷದಲ್ಲಿ ಚಿಂತನೆ – ಇವಿಷ್ಟು (ಜ್ಞಾನಸಾಧನಗಳಾದ್ದರಿಂದ) ಜ್ಞಾನವೆನಿಸಿ ಕೊಳ್ಳುತ್ತವೆ. ಇದನ್ನು ಬಿಟ್ಟು ಮಾನಿತ್ವ, ದಂಭಿತ್ವ – ಮೊದಲಾದದ್ದೆಲ್ಲವೂ ಅಜ್ಞಾನದ ಗುಂಪಿಗೆ ಸೇರುತ್ತದೆ.

**ಜ್ಞೇಯಂ ಯತ್ತತ್ಪ್ರವಕ್ಷ್ಯಾಮಿ ಯಜ್ಜ್ಞಾತ್ವಾಮೃತಮಶ್ನುತೇ ।**
**ಅನಾದಿಮತ್ಪರಂ ಬ್ರಹ್ಮ ನ ಸತ್ತನ್ನಾಸದುಚ್ಯತೇ ॥ ೧೨**

ಈಗ ಯಾವುದು ಜ್ಞೇಯವೋ ಅದನ್ನು ಹೇಳುವೆನು. ಅದನ್ನರಿತುಕೊಂಡರೆ ಅಮೃತತ್ವವನ್ನು ಪಡೆಯುತ್ತಾನೆ. ಅದು ಯಾವುದೆಂದರೆ, ಅನಾದಿಯಾದ ಪರಬ್ರಹ್ಮ ಅದು ಸತ್ ಎನಿಸುವುದೂ ಇಲ್ಲ. ಅಸತ್ ಎನಿಸುವುದೂ ಇಲ್ಲ. (ಸದ ಸತ್ತುಗಳಿಗೆ ವಿಲಕ್ಷಣವಾದದ್ದು).

**ವಿವರಣೆ :** ಸತ್ = ಇರುವುದು. ಅಸತ್ = ಇಲ್ಲದ್ದು. ಬ್ರಹ್ಮವು ಸತ್ ಎಂದು ಹೇಳಲಾಗುವುದಿಲ್ಲ. ಏಕೆಂದರೆ, ಅದು ಇಂದ್ರಿಯಗೋಚರವಲ್ಲ. 'ಯತೋ ವಾಚೋ ನಿವರ್ತಂತೇ ಅಪ್ರಾಪ್ಯ ಮನಸಾ ಸಹ' ಎಂದು ಶ್ರುತಿಯೇ ಬ್ರಹ್ಮವು ವಾಙ್ಮನಸಗಳಿಗೆ ಅತೀತವೆಂದು ಹೇಳಿದೆ. ಅದರಲ್ಲಿ ಜಾತಿ, ಗುಣ, ಕ್ರಿಯೆ, ಸಂಬಂಧಗಳಿಲ್ಲದ್ದರಿಂದ ಯಾವ ಶಬ್ದಕ್ಕೂ ವಿಷಯವಾಗದು. ಹಾಗೆಯೇ ಅಸತ್ ಎಂದೂ ಹೇಳಲಾಗುವುದಿಲ್ಲ. 'ಆತ್ಮಾ ವಾ ಅರೇ ದ್ರಷ್ಟವ್ಯಃ' ಇತ್ಯಾದಿ ಶ್ರುತಿಗಳು ಬ್ರಹ್ಮವಿದೆಯೆಂದು ಹೇಳುತ್ತವೆ.

**ಸರ್ವತಃಪಾಣಿಪಾದಂ ತತ್ ಸರ್ವತೋಽಕ್ಷಿಶಿರೋಮುಖಮ್ ।**
**ಸರ್ವತಃ ಶ್ರುತಿಮಲ್ಲೋಕೇ ಸರ್ವಮಾವೃತ್ಯ ತಿಷ್ಠತಿ ॥ ೧೩**

ಅದಕ್ಕೆ ಎಲ್ಲ ಕಡೆಗೂ ಕೈಕಾಲುಗಳಿವೆ. ಎಲ್ಲ ಕಡೆಗೂ ಕಣ್ಣು, ತಲೆ, ಮುಖ ಗಳಿರುತ್ತವೆ. ಎಲ್ಲ ಕಡೆಗೂ ಅದಕ್ಕೆ ಕಿವಿಗಳಿವೆ. ಆ ಬ್ರಹ್ಮವು ಲೋಕದಲ್ಲಿರುವ ಸಮಸ್ತವಸ್ತುಗಳನ್ನೂ ವ್ಯಾಪಿಸಿಕೊಂಡಿರುತ್ತದೆ.

**ವಿವರಣೆ :** ಸಕಲ ಪ್ರಾಣಿಶರೀರಗಳೂ ಬ್ರಹ್ಮದ ವಿವರ್ತಗಳು. ವ್ಯವಹಾರ ದೃಷ್ಟಿಯಿಂದ ಇವುಗಳ ಅವಯವಗಳೆಲ್ಲವೂ ಬ್ರಹ್ಮದ ಅವಯವಗಳೆಂದು ಕಲ್ಪಿಸಿ, 'ಸರ್ವತಃ ಪಾಣಿಪಾದಂ' ಇತ್ಯಾದಿಯಾಗಿ ಇಲ್ಲಿ ಹೇಳಿದೆ. ಇವುಗಳ ಚಲನೆಯಿಂದ ಗೊತ್ತಾಗುವ ಚೈತನ್ಯದಿಂದ ಅಲ್ಲಿ ಪರಮಾತ್ಮನಿದ್ದಾನೆಂದು ಊಹಿಸಬಹುದು.

**ಸರ್ವೇಂದ್ರಿಯಗುಣಾಭಾಸಂ ಸರ್ವೇಂದ್ರಿಯವಿವರ್ಜಿತಮ್ ।**
**ಅಸಕ್ತಂ ಸರ್ವಭೃಚ್ಚೈವ ನಿರ್ಗುಣಂ ಗುಣಭೋಕ್ತೃ ಚ ॥ ೧೪**

(ಉಪಾಧಿಗಳಾದ ಹತ್ತು ಇಂದ್ರಿಯಗಳು ಮತ್ತು ಮನಸ್ಸು ಎಂಬ) ಸರ್ವೇಂದ್ರಿಯವ್ಯಾಪಾರಗಳು ಬ್ರಹ್ಮದಲ್ಲಿರುವಂತೆ ತೋರಿದರೂ ಅದರಲ್ಲಿ ಒಂದು ಇಂದ್ರಿಯವೂ ಇಲ್ಲ. ಆ ಜ್ಞೇಯವು ಸರ್ವವಸ್ತುಗಳನ್ನು ಧರಿಸಿದ್ದರೂ ಅದಕ್ಕೆ ಯಾವುದರ ಸೋಂಕೂ ಇಲ್ಲ. ಸುಖದುಃಖಾದಿಗಳನ್ನು ಕೊಡುವ ಶಬ್ದಸ್ಪರ್ಶಾದಿ ಗುಣಗಳನ್ನು ಅದು ಭೋಗಿಸುವುದಾದರೂ ಜ್ಞೇಯವಾದ ಬ್ರಹ್ಮದಲ್ಲಿ ಯಾವ ಗುಣವೂ ಇಲ್ಲ.

**ವಿವರಣೆ :** ಕಾದ ಕಬ್ಬಿಣದಲ್ಲಿರುವ ಬೆಂಕಿಗೆ ಕಬ್ಬಿಣ ಉಪಾಧಿಯೆನಿಸುತ್ತದೆ. ಕಬ್ಬಿಣದ ಆಕೃತಿ ಬೆಂಕಿಗೆ ಇರುವಂತೆ ಕಂಡರೂ ಬೆಂಕಿಗೆ ಆ ಆಕೃತಿ ಇಲ್ಲ. ಹಾಗೆ ಉಪಾಧಿಯಾದ ಕ್ಷೇತ್ರದ ಯಾವ ಧರ್ಮವೂ ಬ್ರಹ್ಮದಲ್ಲಿಲ್ಲ ಎಂದು ಅಭಿಪ್ರಾಯ.

**ಬಹಿರಂತಶ್ಚ ಭೂತಾನಾಮಚರಂ ಚರಮೇವ ಚ ।**
**ಸೂಕ್ಷ್ಮತ್ವಾತ್ತದವಿಜ್ಞೇಯಂ ದೂರಸ್ಥಂ ಚಾಂತಿಕೇ ಚ ತತ್ ॥ ೧೫**

ಅದು ಪ್ರಾಣಿಗಳ ಹೊರಗೂ ಇದೆ, ಒಳಗೂ ಇದೆ. ಅಚರವೂ ಆಗಿದೆ, ಚರವೂ ಆಗಿದೆ. ದೂರದಲ್ಲಿಯೂ ಇದೆ, ಹತ್ತಿರದಲ್ಲಿಯೂ ಇದೆ. ಬಹಳ ಸೂಕ್ಷ್ಮವಾದ್ದರಿಂದ (ಅಜ್ಞರಿಗೆ) ಅದನ್ನು ತಿಳಿಯುವುದು ಅಶಕ್ಯ.

**ವಿವರಣೆ :** ಉಪಾಧಿಗಳ ಧರ್ಮವಾವುದೂ ಬ್ರಹ್ಮಕ್ಕೆ ಇಲ್ಲವೆಂದು ತಾತ್ಪರ್ಯ.

ಆತ್ಮೈವೇದಂ ಸರ್ವಂ (ಛಾಂ. ೭–೨೫–೨) ಇತ್ಯಾದಿ ವಚನಪ್ರಾಮಾಣ್ಯ ದಿಂದ ಜ್ಞಾನಿಗಳಿಗೆ ಅದು ತಿಳಿದೇ ಇರುತ್ತದೆ. ಅಜ್ಞಾನಿಗಳಿಗೆ ತಿಳಿದಿರುವುದಿಲ್ಲ.

**ಅವಿಭಕ್ತಂ ಚ ಭೂತೇಷು ವಿಭಕ್ತಮಿವ ಚ ಸ್ಥಿತಮ್ ।**
**ಭೂತಭರ್ತೃ ಚ ತಜ್ಜ್ಞೇಯಂ ಗ್ರಸಿಷ್ಣು ಪ್ರಭವಿಷ್ಣು ಚ ॥ ೧೬**

ಅಲ್ಲದೆ ಜ್ಞೇಯವಾದ ಬ್ರಹ್ಮವು (ಆಕಾಶದಂತೆ) ವಿಭಾಗರಹಿತವಾದರೂ ಪ್ರಾಣಿಗಳಲ್ಲಿ ಬೇರೆಬೇರೆಯಾಗಿ ವಿಭಾಗಹೊಂದಿದೆಯೋ ಎಂಬಂತೆ ಇರುತ್ತದೆ. ಅದು (ಸ್ಥಿತಿಕಾಲದಲ್ಲಿ) ಸಮಸ್ತ ಭೂತಗಳನ್ನು ಪಾಲಿಸತಕ್ಕದ್ದಾಗಿಯೂ (ಪ್ರಳಯ ಕಾಲದಲ್ಲಿ) ನುಂಗಿಹಾಕುವ ಸ್ವಭಾವದ್ದೂ (ಸೃಷ್ಟಿಕಾಲದಲ್ಲಿ) ಅವನ್ನು ಉತ್ಪಾದಿಸುವ ಸ್ವಭಾವ ಉಳ್ಳದ್ದೂ ಆಗಿದೆ.

**ಜ್ಯೋತಿಷಾಮಪಿ ತಜ್ಜ್ಯೋತಿಸ್ತಮಸಃ ಪರಮುಚ್ಯತೇ ।**
**ಜ್ಞಾನಂ ಜ್ಞೇಯಂ ಜ್ಞಾನಗಮ್ಯಂ ಹೃದಿ ಸರ್ವಸ್ಯ ವಿಷ್ಠಿತಮ್ ॥ ೧೭**

ಸೂರ್ಯಾದಿಜ್ಯೋತಿಗಳಿಗೂ ಬೆಳಕನ್ನು ನೀಡುವ ಜ್ಯೋತಿ ಅದು. (ಅಜ್ಞಾನವೆಂಬ) ಕತ್ತಲೆಗೆ ನಿಲುಕದೆ ಆಚೆ ಇರತಕ್ಕದ್ದು ಅದು. ಹಿಂದೆ ಹೇಳಿದ 'ಅಮಾನಿತ್ವಂ' ಮೊದಲಾದ ಜ್ಞಾನವೂ (ಜ್ಞಾನಸಾಧನವೂ) ಬ್ರಹ್ಮವೇ. ಅದು ಜ್ಞೇಯವೂ ಜ್ಞಾನಲಭ್ಯವಾದ ಫಲವೂ ಆಗಿದೆ. ಸರ್ವರ ಹೃದಯದಲ್ಲಿಯೂ ನೆಲೆಸಿದೆ.

**ಇತಿ ಕ್ಷೇತ್ರಂ ತಥಾ ಜ್ಞಾನಂ ಜ್ಞೇಯಂ ಚೋಕ್ತಂ ಸಮಾಸತಃ ।**
**ಮದ್ಭಕ್ತ ಏತದ್ವಿಜ್ಞಾಯ ಮದ್ಭಾವಾಯೋಪಪದ್ಯತೇ ॥ ೧೮**

ಈ ರೀತಿಯಾಗಿ ಕ್ಷೇತ್ರವನ್ನೂ ಜ್ಞಾನವನ್ನೂ ಜ್ಞೇಯವನ್ನೂ ಸಂಕ್ಷೇಪವಾಗಿ ಹೇಳಿದ್ದಾಯಿತು. ಈ ಸಮ್ಯಗ್ದರ್ಶನವನ್ನು ಪಡೆದ ನನ್ನ ಭಕ್ತನು ನನ್ನ ಸ್ವರೂಪವನ್ನು ಪಡೆಯಲು ತಕ್ಕವನಾಗುತ್ತಾನೆ.

**ಪ್ರಕೃತಿಂ ಪುರುಷಂ ಚೈವ ವಿದ್ಧ್ಯನಾದೀ ಉಭಾವಪಿ ।**
**ವಿಕಾರಾಂಶ್ಚ ಗುಣಾಂಶ್ಚೈವ ವಿದ್ಧಿ ಪ್ರಕೃತಿಸಂಭವಾನ್ ॥ ೧೯**

(ಹಿಂದೆ ಏಳನೆಯ ಅಧ್ಯಾಯದಲ್ಲಿ ಈಶ್ವರನ ಅಪರಾ, ಪರಾ – ಎಂಬ ಎರಡು ಪ್ರಕೃತಿಗಳನ್ನು ಹೇಳಿ 'ಏತದ್ಯೋನೀನಿ ಭೂತಾನಿ' ಎಂದು ತಿಳಿಸಿದೆ. ಅಪರಾಪ್ರಕೃತಿಯೇ ಕ್ಷೇತ್ರ. ಪರಾಪ್ರಕೃತಿಯೇ ಕ್ಷೇತ್ರಜ್ಞ. ಇವರಿಂದ ಸಕಲಭೂತಗಳೂ ಹುಟ್ಟಿವೆಯೆಂಬುದನ್ನು ಇಲ್ಲಿ ವಿವರಿಸಲಾಗುತ್ತದೆ.)

ಪ್ರಕೃತಿ, ಪುರುಷ – ಎಂಬ ಈಶ್ವರನ ಪ್ರಕೃತಿಗಳೆರಡೂ ಅನಾದಿಯಾದ ವುಗಳೆಂದು ತಿಳಿ. ಬುದ್ಧಿ, ದೇಹ – ಮುಂತಾದ ವಿಕಾರಗಳೂ ಸುಖದುಃಖಾದಿ ಗುಣಗಳೂ ಅಪರಾಪ್ರಕೃತಿಯಿಂದ ಹುಟ್ಟಿವೆಯೆಂದೂ ತಿಳಿದುಕೊ.

**ವಿವರಣೆ :** ಪರಾಪ್ರಕೃತಿಯಾದ ಪುರುಷನನ್ನು ಪ್ರತ್ಯೇಕವಾಗಿ ಹೇಳಿರುವುದ ರಿಂದ ಈ ಶ್ಲೋಕದಲ್ಲಿ ಪ್ರಕೃತಿಯೆಂದರೆ ಅಪರಾಪ್ರಕೃತಿ ಮಾತ್ರ. ಪರಮಾತ್ಮನಲ್ಲಿ (ಪರಬ್ರಹ್ಮದಲ್ಲಿ) ಸ್ವತಃ ಈಶ್ವರತ್ವವಿಲ್ಲ. ಪ್ರಕೃತಿಗಳೆಂಬ ಉಪಾಧಿಯಿಂದ ಈಶ್ವರ ನೆನಿಸಿಕೊಳ್ಳುತ್ತಾನೆ. ಈಶ್ವರನೆಂದರೆ ಆಳತಕ್ಕವನು. ಆಳಲ್ಪಡತಕ್ಕದ್ದು ಪ್ರಕೃತಿ.

**ಕಾರ್ಯಕರಣಕರ್ತೃತ್ವೇ ಹೇತುಃ ಪ್ರಕೃತಿರುಚ್ಯತೇ ।**
**ಪುರುಷಃ ಸುಖದುಃಖಾನಾಂ ಭೋಕ್ತೃತ್ವೇ ಹೇತುರುಚ್ಯತೇ ॥ ೨೦**

ಕಾರ್ಯವೆಂದರೆ ಶರೀರ, ಕರಣವೆಂದರೆ ಇಂದ್ರಿಯಗಳು – ಇವುಗಳ ಕರ್ತೃತ್ವಕ್ಕೆ–ನಿರ್ಮಾಣಕ್ಕೆ ಪ್ರಕೃತಿಯು ಕಾರಣವೆನಿಸುತ್ತದೆ. ಸುಖದುಃಖಗಳ ಭೋಗಕ್ಕೆ ಪುರುಷನು ಎಂದರೆ ಕ್ಷೇತ್ರಜ್ಞನಾದ ಜೀವನು ಹೇತುವೆನಿಸುತ್ತಾನೆ.

**ವಿವರಣೆ :** ಶರೀರ, ಇಂದ್ರಿಯ, ಭೋಗ್ಯವಾದ ಜಗತ್ತು – ಇದೆಲ್ಲವೂ ಪ್ರಕೃತಿಯ ಪರಿಣಾಮಗಳು. ಅವುಗಳ ಭೋಗ ಜೀವನಿಗೆ ಸೇರಿದ್ದು. ಹೀಗೆ ಸಂಸಾರವು ಪ್ರವೃತ್ತವಾಗಿದೆ. 'ಕಾರ್ಯಕಾರಣಕರ್ತೃತ್ವೇ' ಎಂದು ಪಾಠಾಂತರವಿದೆ. ಅರ್ಥದಲ್ಲಿ ವ್ಯತ್ಯಾಸವಿಲ್ಲ.

**ಪುರುಷಃ ಪ್ರಕೃತಿಸ್ಥೋ ಹಿ ಭುಂಕ್ತೇ ಪ್ರಕೃತಿಜಾನ್ ಗುಣಾನ್ ।**
**ಕಾರಣಂ ಗುಣಸಂಗೋಽಸ್ಯ ಸದಸದ್ಯೋನಿಜನ್ಮಸು ॥ ೨೧**

ಪುರುಷನು (ಜೀವನು) ಪ್ರಕೃತಿಯಲ್ಲಿದ್ದು ಪ್ರಕೃತಿಜನ್ಯವಾದ ಸುಖದುಃಖಾದಿ ಗುಣಗಳನ್ನು ಭೋಗಿಸುತ್ತಾನೆ. ಗುಣಸಂಗವೇ ಇವನಿಗೆ ಸದಸದ್ಯೋನಿಗಳಲ್ಲಿ ಹುಟ್ಟುವುದಕ್ಕೆ ಕಾರಣ.

**ವಿವರಣೆ :** ಜೀವನು ಪ್ರಕೃತಿಯಲ್ಲಿರುವುದೆಂದರೆ ಜಡಪ್ರಕೃತಿಯಾದ ಶರೀರ ದಲ್ಲಿದ್ದು ಶರೀರವನ್ನೇ ತಾನೆಂದು ತಿಳಿಯುವುದು. ಪಾಪದಿಂದ ಪಶ್ವಾದಿಜನ್ಮವೂ ಪುಣ್ಯದಿಂದ ಉತ್ತಮವಾದ ದೇವಾದಿಜನ್ಮವೂ ಪಾಪಪುಣ್ಯಗಳ ಮಿಶ್ರಣದಿಂದ ಮನುಷ್ಯಜನ್ಮವೂ ಬರುತ್ತದೆ. ಗುಣಸಂಗ=ಪ್ರಕೃತಿಜನ್ಯಸುಖಾದಿಗಳಲ್ಲಿ ಆಸಕ್ತಿ.

**ಉಪದ್ರಷ್ಟಾಽನುಮಂತಾ ಚ ಭರ್ತಾ ಭೋಕ್ತಾ ಮಹೇಶ್ವರಃ ।**
**ಪರಮಾತ್ಮೇತಿ ಚಾಪ್ಯುಕ್ತೋ ದೇಹೇಽಸ್ಮಿನ್ಪುರುಷಃ ಪರಃ ॥ ೨೨**

ಈ ದೇಹದಲ್ಲಿರುವ ಕ್ಷೇತ್ರಜ್ಞನಾದ ಪುರುಷನು ಹತ್ತಿರದಲ್ಲಿದ್ದು ನೋಡುವ ಉಪದ್ರಷ್ಟೃವೆಂದೂ ಒಪ್ಪಿಗೆಯನ್ನು ಕೊಡುವಂತೆ ಸಾಕ್ಷಿಯಾಗಿರುವ ಅನುಮೋದಕನೆಂದೂ ದೇಹಕ್ಕೆ ಚೈತನ್ಯವನ್ನೀಯುವ ಭರ್ತನೆಂದೂ ಸುಖದುಃಖಾದಿಗಳ ಭೋಗಕ್ಕೆ ಕಾರಣನಾದ ಭೋಕ್ತೃವೆಂದೂ ದೇಹಕ್ಕೆ ಸ್ವತಂತ್ರನಾದ ಸ್ವಾಮಿಯಾದ್ದರಿಂದ ಮಹೇಶ್ವರನೆಂದೂ ವಾಸ್ತವವಾಗಿ ಯಾವ ಸಂಬಂಧವೂ ಇಲ್ಲದ ಪರಮಾತ್ಮನೆಂದೂ ಉಕ್ತನಾಗಿದ್ದಾನೆ.

**ಯ ಏವಂ ವೇತ್ತಿ ಪುರುಷಂ ಪ್ರಕೃತಿಂ ಚ ಗುಣೈಃ ಸಹ ।**
**ಸರ್ವಥಾ ವರ್ತಮಾನೋಽಪಿ ನ ಸ ಭೂಯೋಽಭಿಜಾಯತೇ ॥ ೨೩**

ಈ ರೀತಿಯಾಗಿ ಪುರುಷನನ್ನೂ ತನ್ನ ವಿಕಾರಗಳಾದ ಗುಣಗಳಿಂದ ಸಹಿತವಾದ ಪ್ರಕೃತಿಯನ್ನೂ ಯಾವಾತನು ವಿಂಗಡಿಸಿ ತಿಳಿದುಕೊಳ್ಳುವನೋ ಅವನು ಯಾವ ಬಗೆಯಲ್ಲಿದ್ದರೂ ಪುನರ್ಜನ್ಮವನ್ನು ಪಡೆಯುವುದಿಲ್ಲ.

**ವಿವರಣೆ :** 'ಈ ರೀತಿಯಾಗಿ ಪುರುಷನನ್ನು ತಿಳಿಯುವುದು' – ಎಂದರೆ ತಾನು ನಿರ್ಗುಣನೂ ನಿಃಸಂಗನೂ ಪ್ರಕೃತಿಯ ಸಂಬಂಧವಿಲ್ಲದವನೂ ಎಂದು ತಿಳಿಯುವುದು. ಪ್ರಕೃತಿಯನ್ನರಿಯುವುದೆಂದರೆ, ದೇಹವನ್ನು ಮೊದಲ್ಗೊಂಡು ಜಗತ್ತೆಲ್ಲವೂ ತನಗಿಂತ ಬೇರೆಯೆಂದೂ ಪ್ರಕೃತಿಯಾದ ಮಾಯೆಯಿಂದ ಹುಟ್ಟಿದ್ದಾಗಿ ಮಿಥ್ಯೆಯೆಂದೂ ತಿಳಿಯುವುದು.

**ಧ್ಯಾನೇನಾತ್ಮನಿ ಪಶ್ಯಂತಿ ಕೇಚಿದಾತ್ಮಾನಮಾತ್ಮನಾ ।**
**ಅನ್ಯೇ ಸಾಂಖ್ಯೇನ ಯೋಗೇನ ಕರ್ಮಯೋಗೇನ ಚಾಪರೇ ॥ ೨೪**

ಕೆಲವು ಯೋಗಿಗಳು ಏಕಾಗ್ರಚಿಂತನವೆಂಬ ಧ್ಯಾನದಿಂದ ಪ್ರತ್ಯಗಾತ್ಮನನ್ನು ಸಂಸ್ಕಾರಗೊಂಡ ಅಂತಃಕರಣದಿಂದ ತಮ್ಮ ಬುದ್ಧಿಯಲ್ಲಿ ಕಂಡುಕೊಳ್ಳುತ್ತಾರೆ. ಕೆಲವರು ಸಾಂಖ್ಯಯೋಗದಿಂದ ಆತ್ಮನು ಪ್ರಕೃತಿಭಿನ್ನನೆಂದು ತಿಳಿದುಕೊಳ್ಳುತ್ತಾರೆ. ಇನ್ನು ಕೆಲವರು ಕರ್ಮಯೋಗದಿಂದ (ಕ್ರಮೇಣ ಚಿತ್ತಶುದ್ಧಿ ಜ್ಞಾನೋತ್ಪತ್ತಿದ್ವಾರಾ) ಆತ್ಮನನ್ನು ಕಾಣುತ್ತಾರೆ.

**ಅನ್ಯೇ ತ್ವೇವಮಜಾನಂತಃ ಶ್ರುತ್ವಾಽನ್ಯೇಭ್ಯ ಉಪಾಸತೇ ।**
**ತೇಽಪಿ ಚಾತಿತರಂತ್ಯೇವ ಮೃತ್ಯುಂ ಶ್ರುತಿಪರಾಯಣಾಃ ॥ ೨೫**

ಹೀಗೆ ಮೂರು ಮಾರ್ಗಗಳಲ್ಲಿ ಆತ್ಮನನ್ನರಿಯಬಹುದೆಂಬುದು ಗೊತ್ತಿಲ್ಲದ ಇನ್ನು ಕೆಲವರು ಬೇರೆ ಆಚಾರ್ಯರ ಮಾತುಗಳನ್ನು ಕೇಳಿಕೊಂಡು (ಸಗುಣ ದೇವತೆಯನ್ನು) ಆರಾಧನೆ ಮಾಡುತ್ತಾ ಹೋಗುತ್ತಾರೆ. ಪರೋಪದೇಶವನ್ನೇ

ಪ್ರಮಾಣವಾಗಿಟ್ಟುಕೊಂಡ ಅವರೂ ಸಹ ಕ್ರಮವಾಗಿ ಮೃತ್ಯುವನ್ನು ಗೆದ್ದೇ ಗೆಲ್ಲುತ್ತಾರೆ.

**ವಿವರಣೆ :** ಒಟ್ಟು ಸನ್ಮಾರ್ಗದಲ್ಲಿ ಶ್ರದ್ಧೆಯಿಂದ ಹೋಗತಕ್ಕವರಿಗೆ ಶ್ರೇಯಸ್ಸು ಇದ್ದೇ ಇದೆ – ಎಂದು ತಾತ್ಪರ್ಯ.

**ಯಾವತ್ಸಂಜಾಯತೇ ಕಿಂಚಿತ್ ಸತ್ತ್ವಂ ಸ್ಥಾವರಜಂಗಮಮ್ ।**
**ಕ್ಷೇತ್ರಕ್ಷೇತ್ರಜ್ಞಸಂಯೋಗಾತ್ ತದ್ವಿದ್ಧಿ ಭರತರ್ಷಭ ॥ ೨೬**

ಅರ್ಜುನ, ಸ್ಥಾವರಜಂಗಮಾತ್ಮಕವಾದ ಯಾವುದೇ ಒಂದು ವಸ್ತುವಿದೆಯೋ ಅದು ಕ್ಷೇತ್ರ–ಕ್ಷೇತ್ರಜ್ಞರ ಸಂಬಂಧದಿಂದಲೇ ಆಗಿದೆಯೆಂದು ತಿಳಿದುಕೊ.

**ವಿವರಣೆ :** ಕ್ಷೇತ್ರವೆಂದರೆ ಪ್ರಕೃತಿ, ಜಗತ್ತು. ಅದು ಕ್ಷೇತ್ರಜ್ಞನ ಜ್ಞಾನಕ್ಕೆ ವಿಷಯ. ಜಗತ್ತು ಮಾಯಾಕಲ್ಪಿತವಾದ್ದರಿಂದ ಅಧ್ಯಾಸವೆಂಬ ಮಿಥ್ಯಾಜ್ಞಾನದ ಮೂಲಕ ಕ್ಷೇತ್ರಕ್ಷೇತ್ರಜ್ಞರ ಸಂಬಂಧವಾಗಬಹುದು. ಮಿಥ್ಯಾಜ್ಞಾನವಿಷಯತ್ವವೇ ಸಂಬಂಧ. ನಾವು ಹಗ್ಗವನ್ನು ಹಾವೆಂದು ಭ್ರಮಿಸಿದಾಗ, ನಮಗೂ ಹಾವಿಗೂ ಇರುವ ಸಂಬಂಧವಿದ್ದಹಾಗೆ.

**ಸಮಂ ಸರ್ವೇಷು ಭೂತೇಷು ತಿಷ್ಠಂತಂ ಪರಮೇಶ್ವರಮ್ ।**
**ವಿನಶ್ಯತ್ಸ್ವವಿನಶ್ಯಂತಂ ಯಃ ಪಶ್ಯತಿ ಸ ಪಶ್ಯತಿ ॥ ೨೭**

ಸರ್ವಭೂತಗಳಲ್ಲಿಯೂ ಸಮನಾಗಿ–ನಿರ್ವಿಶೇಷನಾಗಿ ಇರುವ, ಆ ಭೂತಗಳು ನಾಶವಾದರೂ ನಾಶವಾಗದಿರುವ ಪರಮೇಶ್ವರನನ್ನು ಯಾವನು ಕಂಡುಕೊಳ್ಳುತ್ತಾನೋ ಅವನೇ ಸರಿಯಾಗಿ ಕಂಡವನು – ಜ್ಞಾನಿ.

**ವಿವರಣೆ :** ಎಲ್ಲ ಪ್ರಾಣಿಗಳಲ್ಲಿಯೂ ಬೇರೆ ಬೇರೆ ಆತ್ಮರಿದ್ದಾರೆಂದು ಅಜ್ಞಾನಿಯು ತಿಳಿದಿರುತ್ತಾನೆ. ಎಲ್ಲರಲ್ಲಿಯೂ ಒಬ್ಬನೇ ಆತ್ಮನು ಸಮವಾಗಿ ಇದ್ದಾನೆಂದು ಜ್ಞಾನಿಯು ತಿಳಿಯುತ್ತಾನೆ.

**ಸಮಂ ಪಶ್ಯನ್ ಹಿ ಸರ್ವತ್ರ ಸಮವಸ್ಥಿತಮೀಶ್ವರಮ್ ।**
**ನ ಹಿನಸ್ತ್ಯಾತ್ಮನಾತ್ಮಾನಂ ತತೋ ಯಾತಿ ಪರಾಂ ಗತಿಮ್ ॥ ೨೮**

ಏಕೆಂದರೆ, ಎಲ್ಲೆಲ್ಲಿಯೂ ಸಮಾನವಾಗಿ ನೆಲಸಿರುವ ಈಶ್ವರನನ್ನು ಸಮವಾಗಿ ಕಾಣತಕ್ಕವನು ತನ್ನ ಆತ್ಮವನ್ನು ತನ್ನಿಂದಲೇ ಕೊಂದುಕೊಳ್ಳುವುದಿಲ್ಲ. ಹೀಗೆ ಆತ್ಮನ ಕೊಲೆ ಮಾಡದಿರುವುದರಿಂದ ಶ್ರೇಷ್ಠವಾದ ಮೋಕ್ಷವೆಂಬ ಗತಿಯನ್ನು ಪಡೆಯುತ್ತಾನೆ.

**ವಿವರಣೆ :** ದೇಹವನ್ನು ಆತ್ಮವೆಂದು ತಿಳಿದ ಅಜ್ಞನು ದೇಹವನ್ನು ಸಾಯಿಸುತ್ತ ಹೊಸ ದೇಹವನ್ನು ಪಡೆಯುತ್ತ ಸಂಸಾರದಲ್ಲಿ ಅಲೆಯುತ್ತಲೇ ಇರುತ್ತಾನೆ. ಇದು ಆತನ ದೇಹವೆಂಬ ಆತ್ಮದ ಹತ್ಯೆ. ಅಲ್ಲದೆ ಆತನ ಅವಿದ್ಯೆಯಿಂದ ಪರಮಾರ್ಥನಾದ ಆತ್ಮನೂ ಹತನಾದಂತೆಯೇ. ಏಕೆಂದರೆ, ಅವನು ಇದ್ದುದಕ್ಕೆ ಶ್ರೇಯಸ್ಸೆಂಬ ಫಲ ದೊರೆಯಲಿಲ್ಲ. ಏವಂ ಚ ಅಜ್ಞಾನಿಗಳಾದ ಸರ್ವರೂ ಆತ್ಮಘಾತಿಗಳೇ. ಸರ್ವತ್ರ ಏಕಾತ್ಮನನ್ನು ಕಾಣುವ ಜ್ಞಾನಿಯಾದರೋ ಮೋಕ್ಷಫಲವನ್ನು ಪಡೆದು ಈ ಬಗೆಯ ಆತ್ಮಹತ್ಯೆಯಿಂದ ತಪ್ಪಿಸಿಕೊಳ್ಳುತ್ತಾನೆ.

**ಪ್ರಕೃತ್ಯೈವ ಚ ಕರ್ಮಾಣಿ ಕ್ರಿಯಮಾಣಾನಿ ಸರ್ವಶಃ ।**
**ಯಃ ಪಶ್ಯತಿ ತಥಾಽತ್ಮಾನಮ್ ಅಕರ್ತಾರಂ ಸ ಪಶ್ಯತಿ ॥ ೨೯**

ಸರ್ವಪ್ರಕಾರದಲ್ಲಿಯೂ ಕರ್ಮಗಳನ್ನು ಪ್ರಕೃತಿಯೇ ನಡೆಸುತ್ತದೆಯೆಂದು ಯಾವಾತನು ಕಂಡುಕೊಂಡಿದ್ದಾನೋ ಆತನು, ಯಾವ ಕರ್ಮವನ್ನೂ ಕ್ಷೇತ್ರಜ್ಞನಾದ ಜೀವಾತ್ಮನು ಮಾಡುವುದಿಲ್ಲ – ಅವನು ಅಕರ್ತ ಎಂಬುದನ್ನು ತಿಳಿದುಕೊಂಡವನು (ಅವನು ಜ್ಞಾನಿ).

**ಯದಾ ಭೂತಪೃಥಗ್ಭಾವಮೇಕಸ್ಥಮನುಪಶ್ಯತಿ ।**
**ತತ ಏವ ಚ ವಿಸ್ತಾರಂ ಬ್ರಹ್ಮ ಸಂಪದ್ಯತೇ ತದಾ ॥ ೩೦**

ಪ್ರಾಣಿಗಳಲ್ಲಿ ಕಂಡುಬರುವ ನಾನಾತ್ವವೆಲ್ಲವೂ ಒಬ್ಬನೇ ಆದ ಆತ್ಮನಲ್ಲಿಯೇ ಇದೆಯೆಂಬುದನ್ನೂ ಆ ಆತ್ಮನಿಂದಲೇ ಇದೆಲ್ಲವೂ ಅರಳಿ ವಿಸ್ತೃತವಾಗಿದೆ ಯೆಂಬುದನ್ನೂ ಗುರೂಪದೇಶವನ್ನನುಸರಿಸಿ ಯಾವಾಗ ಕಂಡುಕೊಳ್ಳುತ್ತಾನೋ ಆಗ ಅವನು ಬ್ರಹ್ಮವೇ ಆಗಿಬಿಡುವನು.

**ವಿವರಣೆ :** "ಆತ್ಮತಃ ಪ್ರಾಣ ಆತ್ಮತ ಆಶಾ ಆತ್ಮತಃ ಸ್ಮರ ಆತ್ಮತ ಆಕಾಶ ಆತ್ಮತ ಸ್ತೇಜ ಆತ್ಮತ ಆಪ ಆತ್ಮತ ಆವಿರ್ಭಾತಿರೋಭಾವಾವಾತ್ಮತೋಽನ್ನಮ್" ॥ (ಛಾಂ. ೭–೨೬–೧).

**ಅನಾದಿತ್ವಾನ್ನಿರ್ಗುಣತ್ವಾತ್ ಪರಮಾತ್ಮಾಯಮವ್ಯಯಃ ।**
**ಶರೀರಸ್ಥೋಽಪಿ ಕೌಂತೇಯ ನ ಕರೋತಿ ನ ಲಿಪ್ಯತೇ ॥ ೩೧**

ಪರಮಾತ್ಮನು ಅನಾದಿಯಾದ್ದರಿಂದಲೂ ನಿರ್ಗುಣನಾದ್ದರಿಂದಲೂ ಇವನಲ್ಲಿ ಯಾವ ವಿಕಾರವೂ ಸಂಭವಿಸುವುದಿಲ್ಲವಾದ ಕಾರಣ ಅವ್ಯಯನಾಗಿದ್ದಾನೆ. ಈತನು ಶರೀರದಲ್ಲಿದ್ದರೂ ಯಾವ ಕರ್ಮವನ್ನೂ ಮಾಡುವುದಿಲ್ಲ.

ಆದ್ದರಿಂದಲೇ ಇವನಿಗೆ ಕರ್ಮದ ಲೇಪವೂ ಇಲ್ಲ.

**ವಿವರಣೆ :** ಅನಾದಿಯಾದ್ದರಿಂದ ಅವಯುವರಹಿತ. ಏಕೆಂದರೆ, ವಿಕಾರವು ಅವಯುವಕ್ಕಾಗಲಿ ಗುಣಕ್ಕಾಗಲಿ ಬರುತ್ತದೆ. ಅವೆರಡೂ ಇಲ್ಲದ್ದರಿಂದ ಆತ್ಮನು ಅವ್ಯಯ–ನಿರ್ವಿಕಾರ. ಅದ್ವೈತನಾದ ಆತ್ಮನು ಆಕಾಶದಂತೆ ನಿರ್ಗುಣ. ಆಕಾಶದ ಗುಣವೆನಿಸಿದ ಶಬ್ದವು ದ್ವೈತವಿದ್ದಾಗ ಮಾತ್ರ ಗೋಚರಿಸುತ್ತದೆ.

**ಯಥಾ ಸರ್ವಗತಂ ಸೌಕ್ಷ್ಮ್ಯಾದಾಕಾಶಂ ನೋಪಲಿಪ್ಯತೇ ।**
**ಸರ್ವತ್ರಾವಸ್ಥಿತೋ ದೇಹೇ ತಥಾಽತ್ಮಾ ನೋಪಲಿಪ್ಯತೇ ॥ ೩೨**

ಸರ್ವಗತವಾಗಿದ್ದರೂ ಆಕಾಶವು ಸೂಕ್ಷ್ಮವಾದ್ದರಿಂದ ಹೇಗೆ (ಘಟಾದಿ ದೋಷಗಳಿಂದ) ಲಿಪ್ತವಾಗುವುದಿಲ್ಲವೋ ಹಾಗೆ ಎಲ್ಲೆಲ್ಲಿಯೂ ದೇಹದಲ್ಲಿರುವ ಆತ್ಮನು (ಕರ್ತೃತ್ವಭೋಕ್ತೃತ್ವಾದಿದೋಷಗಳಿಂದ) ಲಿಪ್ತನಾಗುವುದಿಲ್ಲ.

**ಯಥಾ ಪ್ರಕಾಶಯತ್ಯೇಕಃ ಕೃತ್ಸ್ನಂ ಲೋಕಮಿಮಂ ರವಿಃ ।**
**ಕ್ಷೇತ್ರಂ ಕ್ಷೇತ್ರೀ ತಥಾ ಕೃತ್ಸ್ನಂ ಪ್ರಕಾಶಯತಿ ಭಾರತ ॥ ೩೩**

ಭಾರತ–ಅರ್ಜುನ, ಸೂರ್ಯನು ಈ ಸಮಸ್ತಲೋಕವನ್ನೂ ತಾನೊಬ್ಬನೇ ಹೇಗೆ ಬೆಳಗುತ್ತಿರುವನೋ ಹಾಗೆ ಕ್ಷೇತ್ರಿಯಾದ ಪರಮಾತ್ಮನೊಬ್ಬನೇ (ಮಹಾಭೂತಗಳಿಂದ ಹಿಡಿದು ಧೃತಿಪರ್ಯಂತವಾದ) ಸಮಸ್ತ ಕ್ಷೇತ್ರವನ್ನೂ ಬೆಳಗುತ್ತಿದ್ದಾನೆ.

**ವಿವರಣೆ :** ಸರ್ವದೇಹಗಳಲ್ಲಿಯೂ ಸೂರ್ಯನಂತೆ ಒಬ್ಬನೇ ಆತ್ಮನು ಅಲಿಪ್ತನಾಗಿದ್ದು, ದೇಹಗಳು ನಡೆಸುವ ಸಕಲಕ್ರಿಯೆಗಳನ್ನೂ ಸಾಕ್ಷಿಯಾಗಿ ನೋಡುತ್ತಿದ್ದಾನೆ.

**ಕ್ಷೇತ್ರಕ್ಷೇತ್ರಜ್ಞಯೋರೇವಮಂತರಂ ಜ್ಞಾನಚಕ್ಷುಷಾ ।**
**ಭೂತಪ್ರಕೃತಿಮೋಕ್ಷಂ ಚ ಯೇ ವಿದುರ್ಯಾಂತಿ ತೇ ಪರಮ್ ॥ ೩೪**

**ಇತಿ ಶ್ರೀಮದ್ಭಗವದ್ಗೀತಾಸೂಪನಿಷತ್ಸು ಬ್ರಹ್ಮವಿದ್ಯಾಯಾಂ ಯೋಗಶಾಸ್ತ್ರೇ**
**ಕ್ಷೇತ್ರಕ್ಷೇತ್ರಜ್ಞಯೋಗೋ ನಾಮ ತ್ರಯೋದಶೋಽಧ್ಯಾಯಃ**

ಈ ರೀತಿಯಾಗಿ ಕ್ಷೇತ್ರ–ಕ್ಷೇತ್ರಜ್ಞರಿಗಿರುವ ವ್ಯತ್ಯಾಸವನ್ನೂ ಎಲ್ಲ ಭೂತ ವಸ್ತುಗಳಿಗೂ ಪ್ರಕೃತಿಯಾದ – ಎಂದರೆ – ಮೂಲಕಾರಣವಾದ ಅವಿದ್ಯೆಯೆಂಬ ಅವ್ಯಕ್ತದ ಬಿಡುಗಡೆಯ ವಿಧಾನವನ್ನೂ ಯಾರು ಜ್ಞಾನಚಕ್ಷುಸ್ಸಿನಿಂದ ನೋಡಿ ತಿಳಿದುಕೊಂಡಿದ್ದಾರೋ ಅವರು ಪರವಾದ ಬ್ರಹ್ಮವನ್ನು ಸೇರಿಕೊಳ್ಳುವರು.

**ವಿವರಣೆ :** ಜ್ಞಾನಚಕ್ಷುಸ್ = ಶಾಸ್ತ್ರಾಚಾರ್ಯೋಪದೇಶಗಳಿಂದ ತನ್ನ ಅನುಭವಕ್ಕೆ ಬಂದ ಜ್ಞಾನ.

**ಇಲ್ಲಿಗೆ ಶ್ರೀಮದ್ಭಗವದ್ಗೀತೆಯಲ್ಲಿ ಕ್ಷೇತ್ರಕ್ಷೇತ್ರಜ್ಞಯೋಗವೆಂಬ ಹದಿಮೂರನೆಯ ಅಧ್ಯಾಯವು ಸಮಾಪ್ತವಾಯಿತು.**

## ೧೩ನೆಯ ಅಧ್ಯಾಯದ ಸಾರ

ಭಗವಂತನು ಹೀಗೆ ಹೇಳಿದನು : ಅರ್ಜುನ, ಈ ಶರೀರಕ್ಕೆ ಕ್ಷೇತ್ರವೆಂದು ಹೆಸರಿದೆ. ಇದನ್ನರಿಯುವ ಆತ್ಮನೇ ಕ್ಷೇತ್ರಜ್ಞನೆನಿಸುತ್ತಾನೆ. ಸರ್ವಕ್ಷೇತ್ರಗಳಲ್ಲಿಯೂ ಇರುವ ಕ್ಷೇತ್ರಜ್ಞನು ನಾನೇ ಆಗಿದ್ದೇನೆ. ಕ್ಷೇತ್ರಕ್ಷೇತ್ರಜ್ಞರನ್ನು ವಿವೇಚಿಸಿ ತಿಳಿಯುವುದೇ ತತ್ತ್ವಜ್ಞಾನ.

ಅವ್ಯಕ್ತ, ಮಹತ್ತು, ಅಹಂಕಾರ, ಪಂಚತನ್ಮಾತ್ರೆಗಳು (ಸೂಕ್ಷ್ಮಭೂತಗಳು) ಹನ್ನೊಂದು ಇಂದ್ರಿಯಗಳು, ಶಬ್ದ, ಸ್ಪರ್ಶ, ರೂಪ, ರಸ, ಗಂಧಗಳೆಂಬ ವಿಷಯಗಳಿಂದ ಕೂಡಿದ ಪಂಚಮಹಾಭೂತಗಳೂ ಸೇರಿ ಕ್ಷೇತ್ರವೆನಿಸುತ್ತದೆ. (ಸಾಂಖ್ಯರು ಹೇಳಿರುವ ತತ್ತ್ವಗಳಲ್ಲಿ ಪುರುಷನನ್ನು ಬಿಟ್ಟು ಉಳಿದ ಇಪ್ಪತ್ತನಾಲ್ಕು ತತ್ತ್ವಗಳೂ ಕ್ಷೇತ್ರದಲ್ಲಿ ಸೇರುತ್ತವೆ). ಇಚ್ಛೆ, ದ್ವೇಷ – ಮೊದಲಾದ ಅಂತಃಕರಣ ಧರ್ಮಗಳೂ ಕ್ಷೇತ್ರದಲ್ಲಿಯೇ ಸೇರಿಕೊಳ್ಳುತ್ತವೆ.

ಕ್ಷೇತ್ರಜ್ಞನ ಸ್ವರೂಪವನ್ನು ತಿಳಿಯುವುದಕ್ಕೆ ಬೇಕಾದ ಸಾಧನಗಳು ಇವು – ಅಮಾನಿತ್ವ, ಅದಂಭಿತ್ವ, ಅಹಿಂಸೆ, ಕ್ಷಾಂತಿ, ಆರ್ಜವ, ಆಚಾರ್ಯೋಪಾಸನೆ, ಶೌಚ, ಸ್ಥೈರ್ಯ, ಆತ್ಮವಿನಿಗ್ರಹ, ವಿಷಯಗಳ ಭೋಗದಲ್ಲಿ ವಿರಕ್ತಿ, ಅನಹಂಕಾರ, ಜನ್ಮ ಮರಣ ಮುಪ್ಪುಗಳಲ್ಲಿರುವ ಕಷ್ಟಗಳ ಚಿಂತನೆ, ಇಂದ್ರಿಯವಿಷಯಗಳಲ್ಲಿ ಅನಾಸಕ್ತಿ, ಅನಭಿಷ್ವಂಗ, ಸಮಚಿತ್ತತೆ, ಅನನ್ಯಭಕ್ತಿ, ವಿವಿಕ್ತದೇಶಸೇವಿತ್ವ, ಜನ ಸಂಸರ್ಗದಲ್ಲಿ ಅನಾಸಕ್ತಿ, ಅಧ್ಯಾತ್ಮಜ್ಞಾನನಿತ್ಯತ್ವ ತತ್ತ್ವಜ್ಞಾನಾರ್ಥದರ್ಶನ – ಎಂಬ ಇಪ್ಪತ್ತು ಸಾಧನಗಳು ತತ್ತ್ವಜ್ಞಾನಕ್ಕೆ ಆವಶ್ಯಕವಾದವು. ಇವುಗಳಿಗೆ ವಿರುದ್ಧವಾಗಿ ಮಾನಿತ್ವ, ದಂಭಿತ್ವ ಮುಂತಾದವುಗಳಿದ್ದರೆ ಆತ್ಮಜ್ಞಾನವಾಗುವುದಿಲ್ಲ.

ಕ್ಷೇತ್ರಜ್ಞನ ಪರಮಾರ್ಥಸ್ವರೂಪವೇನೆಂದರೆ – ಅದೇ ನಿತ್ಯವಾದ ಪರಬ್ರಹ್ಮವೆನಿಸುತ್ತದೆ. ಅದನ್ನು ಸತ್ ಎಂದಾಗಲಿ ಅಸತ್ ಎಂದಾಗಲಿ ಹೇಳಲು

ಬರುವುದಿಲ್ಲ. ಅದು ಸದಸದ್ವಿಲಕ್ಷಣ. ಅದಕ್ಕೆ ಎಲ್ಲೆಲ್ಲಿಯೂ ಕೈ, ಕಾಲು, ಕಣ್ಣು, ಬಾಯಿ, ಕಿವಿಗಳಿವೆ. ಅದು ಈ ಎಲ್ಲ ಇಂದ್ರಿಯಗಳ ವ್ಯಾಪಾರಗಳನ್ನೂ ನಡೆಸಬಲ್ಲದು. ಪರಮಾರ್ಥದಲ್ಲಿ ಅದಕ್ಕೆ ಯಾವ ಇಂದ್ರಿಯವೂ ಇಲ್ಲ! ಅದು ಸಕಲಪ್ರಾಣಿಗಳ ಒಳಗೂ ಹೊರಗೂ ಇದ್ದುಕೊಂಡು ಸಕಲಪ್ರಾಣಿದೇಹಗಳ ಸ್ವರೂಪದಲ್ಲಿಯೂ ಇರುತ್ತದೆ! ಇಷ್ಟಾದರೂ ಅಜ್ಞರಿಗೆ ಅದು ಕಾಣಿಸಿ ಕೊಳ್ಳುವುದಿಲ್ಲ. ತಮ್ಮ ಹೃದಯದಲ್ಲಿಯೇ ಆ ವಸ್ತು ನೆಲೆಸಿದ್ದರೂ ತಿಳಿಯದೇ ಇರುವುದರಿಂದ ದೂರವಿದ್ದಂತೆ ಆಗಿದೆ. ಅದು ಸಕಲಭೂತಗಳ ಸೃಷ್ಟಿಸ್ಥಿತಿಲಯಗಳಿಗೆ ಕಾರಣವಾದದ್ದು. ಅದು ಜ್ಯೋತಿಗೆ ತೇಜಸ್ಸನ್ನು ನೀಡುವ ಜ್ಯೋತಿಯಾಗಿದೆ.

ಪ್ರಕೃತಿ, ಪುರುಷ – ಎಂಬ ಎರಡೇ ಪರಮಾತ್ಮನ ಪ್ರಕೃತಿಗಳು. ಇವೇ ಕ್ಷೇತ್ರ ಕ್ಷೇತ್ರಜ್ಞರು. ಸಕಲ ಭೂತಗಳ ಉತ್ಪತ್ತಿಸಂಸಾರಗಳು ಇವೆರಡರಿಂದ ಆಗುತ್ತಿವೆ. ಕಾರ್ಯಕಾರಣರೂಪವಾದ ಪದಾರ್ಥಸಮುದಾಯವೆಲ್ಲವೂ ಪ್ರಕೃತಿಯ ಸೃಷ್ಟಿ. ಇವುಗಳಿಂದಾಗುವ ಸುಖ–ದುಃಖ ಭೋಗವು ಪುರುಷನಿಗೆ ಸೇರಿದ್ದು. ಪ್ರಕೃತಿ ಯಲ್ಲಿ ಈ ಪುರುಷನು ಮಿಥ್ಯಾಭಿಮಾನವನ್ನಿಟ್ಟು ಮೋಹಿತನಾಗಿ ಗುಣಸಂಗ ದಿಂದ ಸಂಸಾರದಲ್ಲಿ ಅಲೆಯುತ್ತಿದ್ದಾನೆ. ಪರಮಾರ್ಥದಲ್ಲಾದರೋ ಈ ಪುರುಷನು ಸಂಸಾರಸಂಬಂಧವಿಲ್ಲದೆ ಚೈತನ್ಯಮಾತ್ರನಾಗಿರುತ್ತಾನೆ. ತನ್ನ ಸಾಂನಿಧ್ಯದಿಂದ ದೇಹೇಂದ್ರಿಯವ್ಯಾಪಾರಗಳಿಗೆ ಕಾರಣನಾಗಿರುತ್ತಾನೆ. ಹೀಗೆ ಪ್ರಕೃತಿಪುರುಷರನ್ನೂ ಸಂಸಾರವನ್ನೂ ಯಾರು ವಿವೇಚಿಸಿ ತಿಳಿದು ಕೊಳ್ಳುತ್ತಾರೋ ಅಂತಹ ಜ್ಞಾನಿಗಳಿಗೆ ಪುನರ್ಜನ್ಮವಿಲ್ಲ.

ಪರಮಾತ್ಮನನ್ನು ಸಾಕ್ಷಾತ್ಕರಿಸಿಕೊಳ್ಳುವುದಕ್ಕೆ ಧ್ಯಾನಯೋಗ, ಸಾಂಖ್ಯ ಯೋಗ, ಕರ್ಮಯೋಗ – ಎಂದು ಮೂರು ಯೋಗಮಾರ್ಗಗಳಿವೆ. ಯಾವ ಮಾರ್ಗವೂ ಸರಿಯಾಗಿ ತಿಳಿಯದಿರುವ ಕಾರಣದಿಂದ ಕೆಲವರು ಭಕ್ತಿಮಾರ್ಗವನ್ನು ಹಿಡಿಯುತ್ತಾರೆ. ಇವರೆಲ್ಲರಿಗೂ ಮೋಕ್ಷವಾಗುವುದರಲ್ಲಿ ಸಂಶಯವಿಲ್ಲ. ಕ್ಷೇತ್ರಕ್ಷೇತ್ರಜ್ಞರನ್ನು ವಿವೇಚಿಸಿ ತಿಳಿಯದೆ ಅನ್ಯೋನ್ಯವಾಗಿ ಅಧ್ಯಾಸ ಮಾಡಿಕೊಂಡಿರುವುದೇ ಸಂಸಾರಬಂಧಕ್ಕೆ ಕಾರಣವಾಗಿದೆ. ಕ್ಷೇತ್ರಗಳು ನಾಶವಾಗತಕ್ಕವು, ಕ್ಷೇತ್ರಜ್ಞನು ಶಾಶ್ವತನಾದ ಪರಮಾತ್ಮನೇ ಎಂದರಿತವನು ಪರಮಗತಿಯನ್ನೈದುತ್ತಾನೆ.

ಪರಮಾತ್ಮನು ಅನಾದಿಯೂ ನಿರ್ಗುಣನೂ ಆಗಿರುವುದರಿಂದ ನಾಶರಹಿತ ನಾಗಿದ್ದಾನೆ. ಇವನು ಶರೀರದಲ್ಲಿದ್ದರೂ ಯಾವ ಕರ್ಮವನ್ನೂ ಮಾಡುವುದಿಲ್ಲ.

ಕರ್ಮಫಲದ ಲೇಪವು ಇವನಿಗಿಲ್ಲ. ಆಕಾಶದಂತೆ ಅತಿಸೂಕ್ಷ್ಮನಾದ್ದರಿಂದ ದೇಹದ ಯಾವ ದೋಷವೂ ಇವನಿಗೆ ಅಂಟುವುದಿಲ್ಲ. ಸೂರ್ಯನೊಬ್ಬನೇ ಆದರೂ ಲೋಕವನ್ನೆಲ್ಲ ಬೆಳಗುವಂತೆ ಕ್ಷೇತ್ರಜ್ಞರೂಪನಾದ ಭಗವಂತನೇ ಸಕಲ ಕ್ಷೇತ್ರಗಳನ್ನೂ ಬೆಳಗುತ್ತಾನೆಂದು ತಿಳಿಯಬೇಕು.

ಹೀಗೆ ಕ್ಷೇತ್ರಕ್ಷೇತ್ರಜ್ಞರಿಗಿರುವ ವ್ಯತ್ಯಾಸವನ್ನು ತಿಳಿದುಕೊಂಡು, ಪ್ರಕೃತಿಯನ್ನು ಪುರುಷನಲ್ಲಿ ಲಯಗೊಳಿಸುವ ವಿಧಾನವನ್ನರಿತವರು ಪರಬ್ರಹ್ಮದಲ್ಲಿ ಸೇರಿ ಹೋಗುತ್ತಾರೆ.

## ಅಧ್ಯಾಯ ೧೪

# ಗುಣತ್ರಯವಿಭಾಗಯೋಗ

ಕ್ಷೇತ್ರಕ್ಷೇತ್ರಜ್ಞರ ಸಂಯೋಗದಿಂದ ಎಲ್ಲವೂ ಹುಟ್ಟಿದೆಯೆಂದು ಹಿಂದೆ ಹೇಳಲಾಯಿತು. ಅದು ಹೇಗೆ ?– ಎಂಬುದನ್ನೂ ಕ್ಷೇತ್ರಕ್ಷೇತ್ರಜ್ಞರು ಈಶ್ವರ ಪರತಂತ್ರರಾಗಿ ಜಗತ್ಕಾರಣರೇ ಹೊರತು ಸಾಂಖ್ಯರು ಹೇಳುವಂತೆ ಸ್ವತಂತ್ರರಾಗಿ ಅಲ್ಲ – ಎಂಬುದನ್ನೂ ತಿಳಿಸುವುದಕ್ಕಾಗಿ ಈ ಅಧ್ಯಾಯದ ಆರಂಭ.

**ಶ್ರೀಭಗವಾನುವಾಚ –**

**ಪರಂ ಭೂಯಃ ಪ್ರವಕ್ಷ್ಯಾಮಿ ಜ್ಞಾನಾನಾಂ ಜ್ಞಾನಮುತ್ತಮಮ್ ।**
**ಯಜ್ಜ್ಞಾತ್ವಾ ಮುನಯಃ ಸರ್ವೇ ಪರಾಂ ಸಿದ್ಧಿಮಿತೋ ಗತಾಃ ॥ ೧**

**ಭಗವಂತನು ಇಂತೆಂದನು –** ಹೆಚ್ಚಿನದೂ ಜ್ಞಾನಗಳಲ್ಲಿ ಉತ್ತಮವೂ ಆದ ಜ್ಞಾನವು ಯಾವುದೆಂದು ಇನ್ನೊಮ್ಮೆ ಹೇಳುತ್ತೇನೆ. ಈ ಜ್ಞಾನವನ್ನು ಪಡೆದು ಮನನಶೀಲರಾದ ಮುನಿಗಳು ಈ ದೇಹಬಂಧದಿಂದ ಬಿಡುಗಡೆ ಹೊಂದಿ ಪರಮಸಿದ್ಧಿಯನ್ನು ಪಡೆದಿದ್ದಾರೆ.

**ವಿವರಣೆ :** ಹಿಂದೆ 'ಅಮಾನಿತ್ವಮದಂಭಿತ್ವಂ......' ಇತ್ಯಾದಿ ವಚನಗಳಿಂದ ಜ್ಞಾನಸಾಧನಗಳನ್ನು ಜ್ಞಾನವೆಂದೇ ಕರೆಯಲಾಗಿತ್ತು. ಈಗ ಹಾಗಲ್ಲ. ಇದು ಜ್ಞೇಯದ ಸಾಕ್ಷಾತ್ ಜ್ಞಾನವೇ.

**ಇದಂ ಜ್ಞಾನಮುಪಾಶ್ರಿತ್ಯ ಮಮ ಸಾಧರ್ಮ್ಯಮಾಗತಾಃ ।**
**ಸರ್ಗೇಽಪಿ ನೋಪಜಾಯಂತೇ ಪ್ರಲಯೇ ನ ವ್ಯಥಂತಿ ಚ ॥ ೨**

ಹಿಂದೆ ಹೇಳಿದ ಅಮಾನಿತ್ವಾದಿ ಜ್ಞಾನಸಾಧನವನ್ನು ಅನುಷ್ಠಾನಮಾಡಿ, ನನ್ನ ಸ್ವರೂಪವನ್ನು ಪಡೆದವರು ಸೃಷ್ಟಿಕಾಲ ಬಂದಾಗ ಮತ್ತೆ ಹುಟ್ಟುವುದೂ ಇಲ್ಲ, ಪ್ರಳಯಕಾಲದಲ್ಲಿ ಸ್ವಸ್ವರೂಪವನ್ನು ಬಿಟ್ಟು ಅಲ್ಲಾಡುವುದೂ ಇಲ್ಲ.

**ಟಿಪ್ಪಣಿ :** 'ವ್ಯಥ–ಭಯಸಂಚಲನಯೋಃ' ಎಂದು ಧಾತು ಪಾಠವಿರುವುದರಿಂದ ವ್ಯಥ ಧಾತುವಿಗೆ ಚಲಿಸು, ಅಲ್ಲಾಡು – ಎಂಬ ಅರ್ಥವಿದೆ. ವ್ಯಥಂತಿ ಎಂಬಲ್ಲಿ ಪರಸ್ಮೈ ಪದವು ಆರ್ಷ. ಕ್ಷೇತ್ರಜ್ಞನೇ ಈಶ್ವರನೆಂದು ಹಿಂದೆ ಹೇಳಿದ್ದರಿಂದ ಸಾಧರ್ಮ್ಯವೆಂದರೆ ಸ್ವರೂಪವೆಂದೇ ಅರ್ಥ.

**ಮಮ ಯೋನಿರ್ಮಹದ್ಬ್ರಹ್ಮ ತಸ್ಮಿನ್ ಗರ್ಭಂ ದಧಾಮ್ಯಹಮ್ ।**
**ಸಂಭವಃ ಸರ್ವಭೂತಾನಾಂ ತತೋ ಭವತಿ ಭಾರತ ॥ ೩**

ನನ್ನ ಯೋನಿಯಾದ ಪ್ರಕೃತಿಯು ಹೆಚ್ಚಿನದೂ ದೊಡ್ಡದೂ ಆಗಿದೆ. ಅದರಲ್ಲಿ ನಾನು ಸರ್ವಪ್ರಾಣಿಗಳ ಜನ್ಮಕ್ಕೆ ಕಾರಣವಾದ ಬೀಜವನ್ನು ಎರಚುತ್ತೇನೆ. ಈ ಗರ್ಭಾಧಾನದಿಂದ, ಅರ್ಜುನ, ಸಮಸ್ತಪ್ರಾಣಿಗಳ ಉತ್ಪತ್ತಿಯಾಗುತ್ತದೆ.

**ವಿವರಣೆ :** ಈಶ್ವರಶಕ್ತಿ, ಮಾಯೆ, ಪ್ರಕೃತಿ – ಎಲ್ಲವೂ ಒಂದೇ. ಇಲ್ಲಿ ಬ್ರಹ್ಮವೆಂದರೆ ದೊಡ್ಡದೆಂದು ಅರ್ಥ. ಮೊದಲು ಹಿರಣ್ಯಗರ್ಭನ ಸೃಷ್ಟಿ, ಅವನಿಂದ ಉಳಿದ ಪ್ರಾಣಿಗಳ ಸೃಷ್ಟಿ.

**ಸರ್ವಯೋನಿಷು ಕೌಂತೇಯ ಮೂರ್ತಯಃ ಸಂಭವಂತಿ ಯಾಃ ।**
**ತಾಸಾಂ ಬ್ರಹ್ಮ ಮಹದ್ಯೋನಿರಹಂ ಬೀಜಪ್ರದಃ ಪಿತಾ ॥ ೪**

ಕೌಂತೇಯ, ದೇವಮನುಷ್ಯಮೃಗಾದಿ ಸರ್ವಯೋನಿಗಳಲ್ಲಿಯೂ ಯಾವ ಯಾವ ಮೂರ್ತಿಗಳು (ಅವಯವ ವಿಶಿಷ್ಟ ಆಕೃತಿಗಳು) ಸಂಭವಿಸುತ್ತವೆಯೋ ಅವುಗಳಿಗೆಲ್ಲಾ ಮಹತ್ತಾದ ಬ್ರಹ್ಮವೆಂಬ ಪ್ರಕೃತಿಯು ಯೋನಿ(ಕಾರಣ) ಯಾಗಿರುತ್ತದೆ. ನಾನು ಅದರಲ್ಲಿ ಬೀಜವನ್ನಿಡುವ ತಂದೆಯಾಗಿದ್ದೇನೆ.

**ಸತ್ತ್ವಂ ರಜಸ್ತಮ ಇತಿ ಗುಣಾಃ ಪ್ರಕೃತಿಸಂಭವಾಃ ।**
**ನಿಬಧ್ನಂತಿ ಮಹಾಬಾಹೋ ದೇಹೇ ದೇಹಿನಮವ್ಯಯಮ್ ॥ ೫**

ಮಹಾಬಾಹು–ಅರ್ಜುನ, ಸತ್ತ್ವ ರಜಸ್ಸು ತಮಸ್ಸು – ಎಂಬ ಗುಣಗಳು ಪ್ರಕೃತಿಯಿಂದ ಸಂಭವಿಸುತ್ತವೆ. ಅವು ಅವ್ಯಯನಾದ ಕ್ಷೇತ್ರಜ್ಞನನ್ನು ದೇಹದಲ್ಲಿ ಬಂಧಿಸುತ್ತವೆ. (ಆತ್ಮನ ಉಪಾಧಿಯಾದ ಅಂತಃಕರಣದಲ್ಲಿ ಸುಖದುಃಖಾದಿಗಳು ಕಾಣಿಸಿಕೊಳ್ಳುತ್ತವೆ.)

**ವಿವರಣೆ :** ಪ್ರಕೃತಿ, ಮಾಯೆ, ಅವ್ಯಕ್ತ – ಎಂಬಿವು ಒಂದೇ ಅರ್ಥದ ಶಬ್ದಗಳು. ಗುಣವೆಂಬುದು ಪಾರಿಭಾಷಿಕಶಬ್ದ. ಇವು ವೈಶೇಷಿಕರ ದ್ರವ್ಯಾಶ್ರಿತಗುಣಗಳಲ್ಲ. 'ನ ಕರೋತಿ ನ ಲಿಪ್ಯತೇ' ಎಂದು ಸಿದ್ಧಾಂತವಿರುವುದರಿಂದ ಬಂಧಿಸುತ್ತವೆ ಎಂದರೆ ಬಂಧಿಸುವಂತೆ ಅಜ್ಞರಿಗೆ ಗೋಚರಿಸುತ್ತದೆ ಎಂದರ್ಥ. ಬಂಧಿಸಲ್ಪಡತಕ್ಕದ್ದು ಬುದ್ಧಿ, ಆತ್ಮನಲ್ಲ.

**ತತ್ರ ಸತ್ತ್ವಂ ನಿರ್ಮಲತ್ವಾತ್ ಪ್ರಕಾಶಕಮನಾಮಯಮ್ ।**
**ಸುಖಸಂಗೇನ ಬಧ್ನಾತಿ ಜ್ಞಾನಸಂಗೇನ ಚಾನಘ ॥ ೬**

ಅವುಗಳಲ್ಲಿ ಸತ್ತ್ವಗುಣವು (ಸ್ಫಟಿಕದಂತೆ) ನಿರ್ಮಲವಾದ್ದರಿಂದ ವಸ್ತು ಪ್ರಕಾಶಕವೂ ನಿರುಪದ್ರವವೂ ಆಗಿದೆ. ಹೇ ಅನಘ–ಪಾಪರಹಿತ, ಅದು ಸುಖಾಸಕ್ತಿಯನ್ನೂ ಜ್ಞಾನಾಸಕ್ತಿಯನ್ನೂ ಉಂಟುಮಾಡಿ ಆತ್ಮನನ್ನು ಬಂಧಿಸುತ್ತದೆ.

**ವಿವರಣೆ :** ಜ್ಞಾನಸಂಗ = ವಿವಿಧ ಶಾಸ್ತ್ರಜ್ಞಾನದಲ್ಲಿ ಆಸಕ್ತಿ. ಇದೇ ಶಾಸ್ತ್ರವಾಸನೆ. ಇದೆಲ್ಲವೂ ಕ್ಷೇತ್ರವಾದ ಅಂತಃಕರಣ ಧರ್ಮ. ಆತ್ಮನಲ್ಲಿ ಇದಿಲ್ಲ.

**ರಜೋ ರಾಗಾತ್ಮಕಂ ವಿದ್ಧಿ ತೃಷ್ಣಾಸಂಗಸಮುದ್ಭವಮ್ ।**
**ತನ್ನಿಬಧ್ನಾತಿ ಕೌಂತೇಯ ಕರ್ಮಸಂಗೇನ ದೇಹಿನಮ್ ॥ ೭**

ರಜೋಗುಣವು (ಬಣ್ಣದಂತೆ) ರಾಗಾತ್ಮಕವೆಂದು ತಿಳಿ. ಅದು ತೃಷ್ಣೆ ಮತ್ತು ಆಸಂಗಗಳಿಗೆ ಕಾರಣವಾದದ್ದು. ಅದು ಕರ್ಮದಲ್ಲಿ ಆಸಕ್ತಿಯನ್ನುಂಟುಮಾಡಿ ಆತ್ಮನನ್ನು ಬಂಧಿಸುತ್ತದೆ.

**ಟಿಪ್ಪಣಿ :** ತೃಷ್ಣೆ = ಅಪ್ರಾಪ್ತವಾದ್ದರಲ್ಲಿ ಆಸೆ. ಆಸಂಗ = ಪ್ರಾಪ್ತವಾದ್ದರಲ್ಲಿ ಪ್ರೀತಿ.

**ತಮಸ್ತ್ವಜ್ಞಾನಜಂ ವಿದ್ಧಿ ಮೋಹನಂ ಸರ್ವದೇಹಿನಾಮ್ ।**
**ಪ್ರಮಾದಾಲಸ್ಯನಿದ್ರಾಭಿಃ ತನ್ನಿಬಧ್ನಾತಿ ಭಾರತ ॥ ೮**

ಭರತವಂಶೋದ್ಭವ, ತಮೋಗುಣವು ಅಜ್ಞಾನದಿಂದ ಹುಟ್ಟುತ್ತದೆ ಎಂದು ತಿಳಿ. ಇದು ಸರ್ವರಿಗೂ ಮೋಹವನ್ನು (ಅವಿವೇಕವನ್ನು) ಹುಟ್ಟಿಸುತ್ತದೆ. ಇದು ಪ್ರಮಾದ, ಪಾಲುಮಾರಿಕೆ, ನಿದ್ರೆಗಳಿಂದ ಆತ್ಮನನ್ನು ಕಟ್ಟಿಹಾಕುತ್ತದೆ.

**ಟಿಪ್ಪಣಿ :** ಪ್ರಮಾದ = ಅನವಧಾನ

**ಸತ್ತ್ವಂ ಸುಖೇ ಸಂಜಯತಿ ರಜಃ ಕರ್ಮಣಿ ಭಾರತ ।**
**ಜ್ಞಾನಮಾವೃತ್ಯ ತು ತಮಃ ಪ್ರಮಾದೇ ಸಂಜಯತ್ಯುತ ॥ ೯**

ಸತ್ತ್ವಗುಣವು ಸುಖದಲ್ಲಿಯೂ ರಜೋಗುಣವು ಕರ್ಮದಲ್ಲಿಯೂ ಆಸಕ್ತಿಯನ್ನುಂಟುಮಾಡುತ್ತದೆ. ತಮೋಗುಣವಾದರೋ ವಿವೇಕಜ್ಞಾನವನ್ನು ಮರೆಮಾಡಿ ಪ್ರಮಾದದಲ್ಲಿ–ಕರ್ತವ್ಯಮೂಢತೆಯಲ್ಲಿ ಮನುಷ್ಯನನ್ನು ತೊಡಗಿಸುತ್ತದೆ.

**ರಜಸ್ತಮಶ್ಚಾಭಿಭೂಯ ಸತ್ತ್ವಂ ಭವತಿ ಭಾರತ ।**
**ರಜಃ ಸತ್ತ್ವಂ ತಮಶ್ಚೈವ ತಮಃ ಸತ್ತ್ವಂ ರಜಸ್ತಥಾ ॥ ೧೦**

ಅರ್ಜುನ, ಕೆಲವು ವೇಳೆ ರಜಸ್ಸು ತಮಸ್ಸುಗಳನ್ನು ತಳ್ಳಿಹಾಕಿ ಸತ್ತ್ವಗುಣವು

ಮೇಲೆದ್ದುಕೊಳ್ಳುತ್ತದೆ. ಹಾಗೆಯೇ ಸತ್ತ್ವತಮಸ್ಸುಗಳನ್ನು ಗೆದ್ದು ರಜೋಗುಣವೂ ಸತ್ತ್ವರಜಸ್ಸುಗಳನ್ನು ಜಯಿಸಿ ತಮೋಗುಣವೂ ಎದ್ದುಕೊಳ್ಳುತ್ತವೆ.

**ಸರ್ವದ್ವಾರೇಷು ದೇಹೇಽಸ್ಮಿನ್ ಪ್ರಕಾಶ ಉಪಜಾಯತೇ ।**
**ಜ್ಞಾನಂ ಯದಾ ತದಾ ವಿದ್ಯಾತ್ ವಿವೃದ್ಧಂ ಸತ್ತ್ವಮಿತ್ಯುತ ॥ ೧೧**

ದೇಹದಲ್ಲಿರುವ (ಇಂದ್ರಿಯಗಳೆಂಬ) ಸರ್ವದ್ವಾರಗಳಲ್ಲಿಯೂ ವಿವೇಕಜ್ಞಾನವೆಂಬ ಪ್ರಕಾಶವು ಯಾವಾಗ ಉದಯಿಸುವುದೋ ಆಗ ಸತ್ತ್ವಗುಣವು ಎದ್ದು ಬೆಳೆದಿದೆಯೆಂದು ತಿಳಿಯಬೇಕು.

**ಲೋಭಃ ಪ್ರವೃತ್ತಿರಾರಂಭಃ ಕರ್ಮಣಾಮಶಮಃ ಸ್ಪೃಹಾ ।**
**ರಜಸ್ಯೇತಾನಿ ಜಾಯಂತೇ ವಿವೃದ್ಧೇ ಭರತರ್ಷಭ ॥ ೧೨**

ಅರ್ಜುನ, ರಜೋಗುಣವು ಬೆಳೆಯಿತೆಂದರೆ ಪರದ್ರವ್ಯಾಭಿಲಾಷೆ, ಉತ್ಸಾಹದಿಂದ ಪ್ರವೃತ್ತಿ, ಕರ್ಮಗಳನ್ನು ಮಾಡುವುದು, ಉಪಶಾಂತಿಯಿಲ್ಲದೆ ಹರ್ಷರಾಗಾದಿಗಳುಂಟಾಗುವುದು, ಸಾಮಾನ್ಯವಸ್ತುಗಳಲ್ಲಿ ಬಯಕೆ – ಇವು ಹುಟ್ಟುತ್ತವೆ.

**ಅಪ್ರಕಾಶೋಽಪ್ರವೃತ್ತಿಶ್ಚ ಪ್ರಮಾದೋ ಮೋಹ ಏವ ಚ ।**
**ತಮಸ್ಯೇತಾನಿ ಜಾಯಂತೇ ವಿವೃದ್ಧೇ ಕುರುನಂದನ ॥ ೧೩**

ಕುರುನಂದನ, ತಮೋಗುಣವು ವರ್ಧಿಸಿದಾಗ ಅವಿವೇಕ, ಯಾವುದರಲ್ಲಿಯೂ ಅನುತ್ಸಾಹ, ಪ್ರಮಾದ, ಮೂಢತೆ – ಇವು ಹುಟ್ಟುತ್ತವೆ.

**ಯದಾ ಸತ್ತ್ವೇ ಪ್ರವೃದ್ಧೇ ತು ಪ್ರಲಯಂ ಯಾತಿ ದೇಹಭೃತ್ ।**
**ತದೋತ್ತಮವಿದಾಂ ಲೋಕಾನಮಲಾನ್ ಪ್ರತಿಪದ್ಯತೇ ॥ ೧೪**

ಸತ್ತ್ವಗುಣದ ಉತ್ಕರ್ಷವಾದಾಗ ಮನುಷ್ಯನು ಮರಣವನ್ನೈದಿದರೆ, ಆಗ ಮಹದಾದಿ ತತ್ತ್ವಗಳನ್ನು ಬಲ್ಲ ಉತ್ತಮ ಜ್ಞಾನಿಗಳಿಗೆ ಲಭ್ಯವಾದ ಸ್ವರ್ಗಾದಿ ನಿರ್ಮಲ ಲೋಕಗಳನ್ನು ಸೇರುತ್ತಾನೆ.

**ರಜಸಿ ಪ್ರಲಯಂ ಗತ್ವಾ ಕರ್ಮಸಂಗಿಷು ಜಾಯತೇ ।**
**ತಥಾ ಪ್ರಲೀನಸ್ತಮಸಿ ಮೂಢಯೋನಿಷು ಜಾಯತೇ ॥ ೧೫**

ರಜೋಗುಣವು ಪ್ರಬಲವಾದಾಗ ಮೃತನಾದರೆ ಕರ್ಮಾಸಕ್ತರ ನಡುವೆ ಜನ್ಮವನ್ನು ತಳೆಯುತ್ತಾನೆ. ಹಾಗೆಯೇ ತಮೋಗುಣವು ಹೆಚ್ಚಿದಾಗ ಮೃತನಾದವನು (ಪಶು ಪಕ್ಷಿ ಮುಂತಾದ) ಮೂಢಯೋನಿಗಳಲ್ಲಿ ಹುಟ್ಟುತ್ತಾನೆ.

**ಟಿಪ್ಪಣಿ :** ಅವರವರ ಕರ್ಮಕ್ಕೆ ಅನುಗುಣವಾಗಿ ಮರಣಕಾಲದಲ್ಲಿ ಆಯಾ ಗುಣಗಳು ಪ್ರಬಲವಾಗಿ ಎದ್ದುಕೊಳ್ಳುತ್ತವೆ.

**ಕರ್ಮಣಃ ಸುಕೃತಸ್ಯಾಹುಃ ಸಾತ್ತ್ವಿಕಂ ನಿರ್ಮಲಂ ಫಲಮ್ ।**
**ರಜಸಸ್ತು ಫಲಂ ದುಃಖಮಜ್ಞಾನಂ ತಮಸಃ ಫಲಮ್ ॥ ೧೬**

ಸಾತ್ತ್ವಿಕವಾದ ಶುಭಕರ್ಮದ ಫಲವು ಸಾತ್ತ್ವಿಕವೂ ನಿರ್ಮಲವೂ ಆಗಿರುತ್ತದೆ. ರಜಸ್ಸಿಗೆ ಎಂದರೆ ರಾಜಸಕರ್ಮಕ್ಕೆ ಫಲವು ದುಃಖವೆಂದೂ ತಾಮಸಕರ್ಮಕ್ಕೆ ಅಜ್ಞಾನವು ಫಲವೆಂದೂ ಬಲ್ಲವರು ಹೇಳುತ್ತಾರೆ.

**ಸತ್ತ್ವಾತ್ಸಂಜಾಯತೇ ಜ್ಞಾನಂ ರಜಸೋ ಲೋಭ ಏವ ಚ ।**
**ಪ್ರಮಾದಮೋಹೌ ತಮಸಃ ಭವತೋಽಜ್ಞಾನಮೇವ ಚ ॥ ೧೭**

ಸತ್ತ್ವಗುಣದಿಂದ ಜ್ಞಾನವೂ ರಜಸ್ಸಿನಿಂದ ಲೋಭವೂ ಹುಟ್ಟುತ್ತವೆ. ತಮೋಗುಣದಿಂದ ಪ್ರಮಾದ ಮೂಢತೆಗಳೂ ಅಜ್ಞಾನವೂ ಉಂಟಾಗುತ್ತವೆ.

**ಊರ್ಧ್ವಂ ಗಚ್ಛಂತಿ ಸತ್ತ್ವಸ್ಥಾಃ ಮಧ್ಯೇ ತಿಷ್ಠಂತಿ ರಾಜಸಾಃ ।**
**ಜಘನ್ಯಗುಣವೃತ್ತಸ್ಥಾಃ ಅಧೋ ಗಚ್ಛಂತಿ ತಾಮಸಾಃ ॥ ೧೮**

ಸತ್ತ್ವಗುಣದವರು ಮೇಲಾದ ಎಂದರೆ ಸ್ವರ್ಗಾದಿಲೋಕಗಳಿಗೆ ಹೋಗುತ್ತಾರೆ. ರಾಜಸರು ಮಧ್ಯದಲ್ಲಿ ಎಂದರೆ ಮನುಷ್ಯಲೋಕದಲ್ಲಿ ಉಳಿಯುತ್ತಾರೆ. ಕನಿಷ್ಠ ಗುಣದಲ್ಲಿ ಪ್ರವೃತ್ತರಾದ ತಮೋಗುಣದವರು ಅಧೋಗತಿಗೆ ಇಳಿಯುತ್ತಾರೆ.

**ನಾನ್ಯಂ ಗುಣೇಭ್ಯಃ ಕರ್ತಾರಂ ಯದಾ ದ್ರಷ್ಟಾನುಪಶ್ಯತಿ ।**
**ಗುಣೇಭ್ಯಶ್ಚ ಪರಂ ವೇತ್ತಿ ಮದ್ಭಾವಂ ಸೋಽಧಿಗಚ್ಛತಿ ॥ ೧೯**

ದ್ರಷ್ಟೃವಾದ ವಿದ್ವಾಂಸನು ಯಾವಾಗ ಪ್ರಕೃತಿಯ ಗುಣಗಳಿಗಿಂತ ಬೇರೆಯಾದ ಕರ್ತೃವಿಲ್ಲವೆಂದು ಅರಿತುಕೊಂಡು, ಗುಣಗಳಿಗಿಂತ ಆಚೆಗಿರುವ (ಸಾಕ್ಷಿಯಾದ) ಪರತತ್ತ್ವವನ್ನು ತಿಳಿದುಕೊಳ್ಳುತ್ತಾನೋ ಆಗ ಆತನು ನನ್ನ ಸ್ವರೂಪವನ್ನೈದುವನು.

**ವಿವರಣೆ :** ಪ್ರಕೃತಿಯ ಗುಣಗಳಿಂದಾಗಿರುವುದೇ ಶರೀರ, ಇಂದ್ರಿಯ ಮತ್ತು ವಿಷಯಾಕಾರವಾದ ಜಗತ್ತು. ಪ್ರಕೃತಿಯೇ ಕರ್ತ್ರಿ, ನಾನಲ್ಲ – ಎಂದು ಅನುಭವಕ್ಕೆ ತಂದುಕೊಂಡವನು ಮುಕ್ತನಾಗುತ್ತಾನೆ.

**ಗುಣಾನೇತಾನತೀತ್ಯ ತ್ರೀನ್ ದೇಹೀ ದೇಹಸಮುದ್ಭವಾನ್ ।**
**ಜನ್ಮಮೃತ್ಯುಜರಾದುಃಖೈರ್ವಿಮುಕ್ತೋಽಮೃತಮಶ್ನುತೇ ॥ ೨೦**

ದೇಹಧಾರಿಯಾದ ಮನುಷ್ಯನು ದೇಹಕ್ಕೆ ಕಾರಣಗಳಾದ ಈ ಮೂರು ಗುಣಗಳನ್ನು ಅತಿಕ್ರಮಿಸಿದರೆ, ಜನ್ಮಮೃತ್ಯುಜರಾದಿಗಳ ದುಃಖಗಳಿಂದ ಪಾರಾಗಿ ಅಮೃತವಾದ ಮೋಕ್ಷವನ್ನು ಪಡೆಯುತ್ತಾನೆ.

**ಅರ್ಜುನ ಉವಾಚ –**

**ಕೈರ್ಲಿಂಗೈಸ್ತ್ರೀನ್ ಗುಣಾನೇತಾನ್ ಅತೀತೋ ಭವತಿ ಪ್ರಭೋ ।**
**ಕಿಮಾಚಾರಃ ಕಥಂ ಚೈತಾಂಸ್ತ್ರೀನ್ ಗುಣಾನತಿವರ್ತತೇ ॥ ೨೧**

**ಅರ್ಜುನನು ಹೀಗೆಂದನು** – ಪ್ರಭುವೆ, ಈ ಮೂರು ಗುಣಗಳನ್ನು ದಾಟಿದವನು ಯಾವ ಚಿಹ್ನೆಗಳಿಂದ ಕೂಡಿರುತ್ತಾನೆ? ಅವನ ಆಚಾರ ಹೇಗಿರುತ್ತದೆ? ಮತ್ತು ಈ ಮೂರು ಗುಣಗಳನ್ನು ಹೇಗೆ ದಾಟುತ್ತಾನೆ?

**ಶ್ರೀಭಗವಾನುವಾಚ –**

**ಪ್ರಕಾಶಂ ಚ ಪ್ರವೃತ್ತಿಂ ಚ ಮೋಹಮೇವ ಚ ಪಾಂಡವ ।**
**ನ ದ್ವೇಷ್ಟಿ ಸಂಪ್ರವೃತ್ತಾನಿ ನ ನಿವೃತ್ತಾನಿ ಕಾಂಕ್ಷತಿ ॥ ೨೨**

**ಭಗವಂತನು ಹೀಗೆಂದನು** – ಪಾಂಡವ, ಸತ್ತ್ವಗುಣದ ಕಾರ್ಯವಾದ ಪ್ರಕಾಶ, ರಜೋಗುಣದ ಕಾರ್ಯವಾದ ಪ್ರವೃತ್ತಿ, ತಮೋಗುಣದ ಕಾರ್ಯವಾದ ಮೂಢತೆ – ಇವು ತಲೆದೋರಿದಾಗ ಗುಣಾತೀತನಾದವನು 'ಇದೇಕೆ ಉಂಟಾಯಿತು?' ಎಂದು ಅವನ್ನು ದ್ವೇಷಿಸುವುದೂ ಇಲ್ಲ. ಅವು ಅಡಗಿ ಹೋದಾಗ 'ಇದು ಬೇಕಾಗಿತ್ತು' ಎಂದು ಬಯಸುವುದೂ ಇಲ್ಲ.

**ಉದಾಸೀನವದಾಸೀನೋ ಗುಣೈರ್ಯೋ ನ ವಿಚಾಲ್ಯತೇ ।**
**ಗುಣಾ ವರ್ತಂತ ಇತ್ಯೇವ ಯೋಽವತಿಷ್ಠತಿ ನೇಂಗತೇ ॥ ೨೩**

ಯಾವಾತನು ಯಾವ ಪಕ್ಷವನ್ನೂ ಆಶ್ರಯಿಸದ ಉದಾಸೀನನಂತೆ ತಟಸ್ಥನಾಗಿರುತ್ತಾನೋ ಯಾರನ್ನು ಪ್ರಕೃತಿಯ ಗುಣಗಳು ಅಲ್ಲಾಡಿಸಲಾರವೋ ಗುಣಗಳು (ದೇಹೇಂದ್ರಿಯಗಳೂ ವಿಷಯಗಳೂ ಆಗಿ) ತಮ್ಮತಮ್ಮಲ್ಲಿ ಪ್ರವರ್ತಿಸುತ್ತಿವೆ ಎಂದು ತಿಳಿದು ತನ್ನ ಸ್ವರೂಪದಲ್ಲಿಯೇ ಇದ್ದುಕೊಂಡಿರುವನೋ, ವಿಚಲಿತನಾಗುವುದಿಲ್ಲವೋ ಅವನು ಗುಣಾತೀತನೆನಿಸುತ್ತಾನೆ. (೨೫ನೆಯ ಶ್ಲೋಕದಲ್ಲಿ ಅನ್ವಿತ)

**ಸಮದುಃಖಸುಖಃ ಸ್ವಸ್ಥಃ ಸಮಲೋಷ್ಟಾಶ್ಮಕಾಂಚನಃ ।**
**ತುಲ್ಯಪ್ರಿಯಾಪ್ರಿಯೋ ಧೀರಃ ತುಲ್ಯನಿಂದಾತ್ಮಸಂಸ್ತುತಿಃ ॥ ೨೪**

ದುಃಖಸುಖಗಳಲ್ಲಿ ಸಮತೆಯಿಂದಿದ್ದು, ಪ್ರಸನ್ನತೆಯಿಂದ ಆತ್ಮಸ್ಥನಾಗಿ, ಮಣ್ಣುಹೆಂಟೆ, ಕಲ್ಲು, ಕಾಂಚನಗಳನ್ನು ಸಮವಾಗಿ ಕಾಣುತ್ತ, ಪ್ರಿಯ–ಅಪ್ರಿಯಗಳನ್ನು ನಿಂದೆ–ಆತ್ಮಸ್ತುತಿಗಳನ್ನು ಸಮಾನವಾಗಿ ಲೆಕ್ಕಿಸತಕ್ಕ ಮನುಷ್ಯನು ಗುಣಾತೀತನೆನಿಸುತ್ತಾನೆ.

**ಮಾನಾಪಮಾನಯೋಸ್ತುಲ್ಯಃ ತುಲ್ಯೋ ಮಿತ್ರಾರಿಪಕ್ಷಯೋಃ ।**
**ಸರ್ವಾರಂಭಪರಿತ್ಯಾಗೀ ಗುಣಾತೀತಃ ಸ ಉಚ್ಯತೇ ॥ ೨೫**

ಮಾನ–ಅವಮಾನಗಳನ್ನೂ ಶತ್ರು–ಮಿತ್ರಪಕ್ಷಗಳನ್ನೂ ಸಮಾನವಾಗಿ ತಿಳಿಯತಕ್ಕವನೂ ಸರ್ವಕಾಮ್ಯಕರ್ಮಗಳನ್ನು ತೊರೆದವನೂ ಗುಣಾತೀತನೆನಿಸುತ್ತಾನೆ.

**ವಿವರಣೆ :** ಹಿಂದೆ ಸ್ಥಿತಪ್ರಜ್ಞನ ಲಕ್ಷಣಗಳನ್ನು ಹೇಳಿದಂತೆ ಈ ಲಕ್ಷಣಗಳು ಗುಣಾತೀತನಲ್ಲಿ ಕಂಡುಬರುತ್ತವೆ. ಇವು ಸಾಧಕನಿಗೆ ಅನುಷ್ಠಾನಯೋಗ್ಯ ಗುಣಗಳು.

**ಮಾಂ ಚ ಯೋಽವ್ಯಭಿಚಾರೇಣ ಭಕ್ತಿಯೋಗೇನ ಸೇವತೇ ।**
**ಸ ಗುಣಾನ್ ಸಮತೀತ್ಯೈತಾನ್ ಬ್ರಹ್ಮಭೂಯಾಯ ಕಲ್ಪತೇ ॥ ೨೬**

ಯಾವನು ನನ್ನನ್ನು ಅಚಲವಾದ ಭಕ್ತಿಯೆಂಬ ಯೋಗದಿಂದ ಸೇವಿಸುತ್ತ ಇರುತ್ತಾನೋ ಆತನು ಈ ಮೂರು ಗುಣಗಳನ್ನೂ ದಾಟಿ ಬ್ರಹ್ಮಭಾವಕ್ಕೆ (ಮೋಕ್ಷಕ್ಕೆ) ಸಮರ್ಥನಾಗುತ್ತಾನೆ.

**ಬ್ರಹ್ಮಣೋ ಹಿ ಪ್ರತಿಷ್ಠಾಹಮಮೃತಸ್ಯಾವ್ಯಯಸ್ಯ ಚ ।**
**ಶಾಶ್ವತಸ್ಯ ಚ ಧರ್ಮಸ್ಯ ಸುಖಸ್ಯೈಕಾಂತಿಕಸ್ಯ ಚ ॥ ೨೭**

**ಇತಿ ಶ್ರೀಮದ್ಭಗವದ್ಗೀತಾಸೂಪನಿಷತ್ಸು ಬ್ರಹ್ಮವಿದ್ಯಾಯಾಂ ಯೋಗಶಾಸ್ತ್ರೇ**
**ಗುಣತ್ರಯವಿಭಾಗಯೋಗೋ ನಾಮ ಚತುರ್ದಶೋಽಧ್ಯಾಯಃ**

ಏಕೆಂದರೆ, ಅವಿನಾಶಿಯೂ ಅವಿಕಾರಿಯೂ ಆದ ಬ್ರಹ್ಮಕ್ಕೆ, ಶಾಶ್ವತವಾದ ಜ್ಞಾನರೂಪಧರ್ಮಕ್ಕೆ ಮತ್ತು (ಜ್ಞಾನದಿಂದಾಗುವ) ಪರಮಾವಧಿಯ ಆನಂದಕ್ಕೆ ನಾನು ಪ್ರತಿಷ್ಠೆಯಾಗಿದ್ದೇನೆ.

**ವಿವರಣೆ :** ಪ್ರತಿಷ್ಠೆ ಎಂದರೆ ಆಧಾರ, ಆಶ್ರಯ, ಮೂಲ – ಎಂದರ್ಥ. ಬ್ರಹ್ಮಕ್ಕೆ ಪ್ರತಿಷ್ಠೆ ಪ್ರಾಣಿಗಳ ಪ್ರತ್ಯಗಾತ್ಮ. ಸಮ್ಯಗ್‌ಜ್ಞಾನದಿಂದ ಪ್ರತ್ಯಗಾತ್ಮನೇ ಪರಮಾತ್ಮನೆಂದು ಗೊತ್ತಾಗುತ್ತದೆಯಾದ್ದರಿಂದ ಪ್ರತ್ಯಗಾತ್ಮನು ಪ್ರತಿಷ್ಠೆ ಎಂದು

ಹೇಳಿದೆ. ಅಥವಾ "ಸಗುಣವಾದ ಬ್ರಹ್ಮಕ್ಕೆ ಮೂಲವಾದ ನಿರ್ಗುಣಬ್ರಹ್ಮ ನಾನು" ಎಂದರ್ಥ. ಪ್ರತ್ಯಗಾತ್ಮ ನಮ್ಮ ಹೃದಯದಲ್ಲಿರುವ ಆತ್ಮ.

**ಇಲ್ಲಿಗೆ ಶ್ರೀಮದ್ಭಗವದ್ಗೀತೆಯಲ್ಲಿ ಗುಣತ್ರಯವಿಭಾಗಯೋಗವೆಂಬ ಹದಿನಾಲ್ಕನೆಯ ಅಧ್ಯಾಯವು ಸಮಾಪ್ತವಾಯಿತು.**

## ೧೪ನೆಯ ಅಧ್ಯಾಯದ ಸಾರ

ಜಗತ್ತು ಉಂಟಾದ ಬಗೆಯನ್ನೂ ಗುಣತ್ರಯದಿಂದಾಗುವ ಬಂಧಪ್ರಕಾರವನ್ನೂ ಗುಣತ್ರಯವನ್ನು ದಾಟುವ ಮಾರ್ಗವನ್ನೂ ತಿಳಿಸುವುದಕ್ಕಾಗಿ ಭಗವಂತನು ಹೀಗೆಂದನು : ಅರ್ಜುನ, ನಾನು, ನನ್ನ ಪ್ರಕೃತಿ – ಇವುಗಳ ಸಂಯೋಗದಿಂದ ಜಗತ್ತು ಹುಟ್ಟಿದೆ. ದೇವಮಾನುಷಾದಿ ಶರೀರಗಳೆಲ್ಲವೂ ಈ ಸಂಯೋಗದಿಂದಲೇ ಉದ್ಭವಿಸುತ್ತವೆ. ನಾನು ನಿಮಿತ್ತಕಾರಣ, ಪ್ರಕೃತಿಯು ಉಪಾದಾನಕಾರಣ. (ಪರಮಾರ್ಥದಲ್ಲಿ ನಾನೇ ಉಭಯಕಾರಣ.)

ಪ್ರತಿಯೊಬ್ಬ ಜೀವನೂ ಪ್ರಕೃತಿಯ ಮೂರು ಗುಣಗಳಿಗೆ ಒಳಪಟ್ಟಿರುತ್ತಾನೆ. ಸತ್ತ್ವಗುಣವು ಜೀವನನ್ನು ಸುಖಜ್ಞಾನಗಳ ಸಂಗದಿಂದ ಬದ್ಧನನ್ನಾಗಿ ಮಾಡುತ್ತದೆ. ರಜೋಗುಣವು ಆಸೆ, ವಿಷಯಗಳೊಡನೆ ಸಂಗ, ಕರ್ಮಸಂಗ – ಇವುಗಳಿಂದ ಬಂಧಿಸುತ್ತದೆ. ತಮೋಗುಣವು ಅಜ್ಞಾನ ಪ್ರಮಾದ ಆಲಸ್ಯ ನಿದ್ರೆ – ಇವುಗಳಿಂದ ಬಂಧಿಸುತ್ತದೆ. ಒಂದೊಂದು ಗುಣವೂ ಉಳಿದೆರಡು ಗುಣಗಳನ್ನು ತುಳಿದು ತಾನೊಂದೇ ತಲೆ ಎತ್ತುವುದುಂಟು. ಜೀವನು ಮರಣವನ್ನೈದುವಾಗ ಯಾವ ಗುಣದ ಕಾರ್ಯವು ಎದ್ದುತೋರುವುದೋ ಅದಕ್ಕೆ ಅನುಗುಣವಾದ ಲೋಕವನ್ನವನು ಪಡೆಯುವನು. ಸತ್ತ್ವದಿಂದ ಶಮ, ದಮ, ಜ್ಞಾನಾದಿಗಳೂ ರಜಸ್ಸಿನಿಂದ ಲೋಭ, ರಾಗ ಮೊದಲಾದವೂ ತಮಸ್ಸಿಂದ ಅಜ್ಞಾನ, ಆಲಸ್ಯ ಮುಂತಾದವೂ ಕಾಣಿಸಿಕೊಳ್ಳುತ್ತವೆ.

ಜೀವನು ಎಲ್ಲಿಯವರೆಗೆ ತಾನೇ ಕರ್ತನೆಂದೂ ಭೋಕ್ತನೆಂದೂ ತಿಳಿದು ಮೋಹಗೊಂಡಿರುವನೋ ಅಲ್ಲಿಯವರೆಗೂ ಈ ಗುಣಗಳಿಂದಾದ ಬಂಧನವು ಅವನಿಗೆ ತಪ್ಪುವುದಿಲ್ಲ. ಯಾವಾಗ ತಾನು ಅಕರ್ತನೆಂದೂ ಅಭೋಕ್ತನೆಂದೂ ನಿಃಸಂಗನೆಂದೂ ನಿಶ್ಚಯಿಸಿಕೊಳ್ಳುತ್ತಾನೋ 'ಗುಣಾ ಗುಣೇಷು ವರ್ತಂತೇ' ನನಗೆ ಯಾವ ಕರ್ಮದ ಸಂಬಂಧವೂ ಇಲ್ಲವೆಂದು ತಿಳಿದುಕೊಳ್ಳುತ್ತಾನೋ,

ಆಗ ಅವನು ಮುಕ್ತನಾಗಿ ಪರಮಾತ್ಮ ಸ್ವರೂಪವನ್ನೈದುವನು. ಅವನೇ ಜೀವನ್ಮುಕ್ತನು.

ಹೀಗೆ ಗುಣಗಳನ್ನು ದಾಟಿದವನು ಹೇಗಿರುತ್ತಾನೆಂದರೆ – ಈ ಗುಣಗಳ ನಿಮಿತ್ತದಿಂದ ಅವುಗಳಿಗೆ ಸಂಬಂಧಿಸಿದ ಜ್ಞಾನ, ರಾಗ, ಸುಖ–ದುಃಖಗಳು ಬಂದರೂ ಹೋದರೂ ಸಮಚಿತ್ತನಾಗಿರುತ್ತಾನೆ. ಅವನಿಗೆ ಇದು ಬೇಕು–ಇದು ಬೇಡ ಎಂಬ ಭಾವನೆಯೇ ಇರುವುದಿಲ್ಲ. ಚಿನ್ನ, ಮಣ್ಣುಹೆಂಟೆಗಳೆರಡೂ ಅವನಿಗೆ ಒಂದೇ. ಅವನಿಗೆ ಶತ್ರುಗಳೂ ಇಲ್ಲ. ಮಿತ್ರರೂ ಇಲ್ಲ – ಎಂದರೆ ಉಭಯರನ್ನೂ ಏಕಪ್ರಕಾರದಲ್ಲಿ ಕಾಣುತ್ತಾನೆ. ಪ್ರಾಪಂಚಿಕವಿಷಯದಲ್ಲಿ ಅವನು ಅನಾಸಕ್ತ.

ಮನುಷ್ಯನು ಗುಣಾತೀತನಾಗಬೇಕಾದರೆ ಅತ್ಯಾವಶ್ಯಕವಾದ ಸಮಚಿತ್ತತೆ ಬೇಕು. ಅದಕ್ಕೂ ಹೆಚ್ಚಾಗಿ ಸದಾ ಅನನ್ಯಭಕ್ತಿಯಿಂದ ನನಗೆ ಶರಣಾಗಬೇಕು. ಬ್ರಹ್ಮಕ್ಕೆ ನಾನೇ ಪ್ರತಿಷ್ಠೆಯಾಗಿದ್ದೇನೆ. ಬ್ರಹ್ಮಪ್ರಾಪ್ತಿಗೆ ಬೇಕಾದ ತತ್ತ್ವಜ್ಞಾನಕ್ಕೂ ಅದರಿಂದ ಲಭ್ಯವಾಗುವ ನಿತ್ಯಾನಂದಕ್ಕೂ ಸಹ ನಾನೇ ಆಶ್ರಯನಾಗಿದ್ದೇನೆ.

## ಅಧ್ಯಾಯ ೧೫

# ಪುರುಷೋತ್ತಮಯೋಗ

ಭಕ್ತಿಯಿಂದ ಭಗವಂತನು ಪ್ರಸನ್ನನಾಗಿ ಜ್ಞಾನವನ್ನು ಕರುಣಿಸುತ್ತಾನೆಂದೂ ಅದರಿಂದ ಗುಣಾತೀತನಾಗಿ ಮುಕ್ತಿಯನ್ನು ಪಡೆಯುತ್ತಾನೆಂದೂ ಹಿಂದಿನ ಅಧ್ಯಾಯದಲ್ಲಿ ಹೇಳಲಾಯಿತು. ಆತ್ಮತತ್ತ್ವಜ್ಞಾನದಿಂದ ನೇರವಾಗಿ ಮೋಕ್ಷವು ದೊರೆಯುತ್ತದೆ. ಅದಕ್ಕೆ ಸಂಸಾರದಲ್ಲಿ ವೈರಾಗ್ಯ ಆವಶ್ಯಕ. ಆದ್ದರಿಂದ ಸಂಸಾರದ ಜಟಿಲತೆಯನ್ನು ವೃಕ್ಷರೂಪಕದಿಂದ ವರ್ಣಿಸಿ ಆತ್ಮತತ್ತ್ವವನ್ನು ಈಗ ಹೇಳಲಾಗುತ್ತದೆ.

**ಶ್ರೀಭಗವಾನುವಾಚ –**

**ಊರ್ಧ್ವಮೂಲಮಧಃಶಾಖಮಶ್ವತ್ಥಂ ಪ್ರಾಹುರವ್ಯಯಮ್ ।**
**ಛಂದಾಂಸಿ ಯಸ್ಯ ಪರ್ಣಾನಿ ಯಸ್ತಂ ವೇದ ಸ ವೇದವಿತ್ ॥ ೧**

**ಭಗವಂತನು ಹೀಗೆಂದನು** – ಮೇಲುಗಡೆಯಲ್ಲಿ ಮೂಲವುಳ್ಳದ್ದೂ ಕೆಳದಿಕ್ಕಿಗೆ ಹರಡಿದ ಶಾಖೆಗಳುಳ್ಳದ್ದೂ ಆದ (ಸಂಸಾರವೆಂಬ) ಅಶ್ವತ್ಥವೃಕ್ಷವು ಅಂತ್ಯವಿಲ್ಲದ್ದೆಂದು ಹೇಳುತ್ತಾರೆ. ಈ ವೃಕ್ಷಕ್ಕೆ ವೇದಗಳೇ ಎಲೆಗಳು. ಈ ವೃಕ್ಷದ ಸ್ವರೂಪವನ್ನು ಮೂಲಸಹಿತ ಬಲ್ಲವನು ವೇದಾರ್ಥಜ್ಞನು.

**ವಿವರಣೆ :** ಸೂಕ್ಷ್ಮವೂ ಜಗತ್ಕಾರಣವೂ ನಿತ್ಯವೂ ದೊಡ್ಡದೂ ಆದ್ದರಿಂದ ಮಾಯಾಶಕ್ತಿಸಹಿತವಾದ ಬ್ರಹ್ಮವು ಎತ್ತರದಲ್ಲಿದೆಯೆಂದು ಕಲ್ಪಿಸಿ ಊರ್ಧ್ವ ಮೂಲವೆನ್ನಲಾಗಿದೆ. ಮಾಯಾವಿಶಿಷ್ಟವಾದ ಈ ಶಬಲಬ್ರಹ್ಮವೇ ಸಂಸಾರಕ್ಕೆ ಮೂಲ. ಮಹತ್, ಅಹಂಕಾರ, ಪಂಚತನ್ಮಾತ್ರೆಗಳು – ಮೊದಲಾದವು ಅನಂತರ ಕೆಳಗೆ ಹರಡಿ ಶಾಖೆಗಳಂತಿವೆ. ನಾನಾ-ಕರ್ಮಗಳನ್ನು ವಿಧಿಸುವ ವೇದಗಳು ಈ ಸಂಸಾರವೃಕ್ಷವನ್ನು ಎಲೆಗಳಂತೆ ರಕ್ಷಿಸುತ್ತವೆ. ಸಂಸಾರವು ಅನಾದಿಯಾದ್ದರಿಂದ ಅವ್ಯಯವೆನಿಸಿದೆ.

**ಅಧಶ್ಚೋರ್ಧ್ವಂ ಪ್ರಸೃತಾಸ್ತಸ್ಯ ಶಾಖಾ**
**ಗುಣಪ್ರವೃದ್ಧಾ ವಿಷಯಪ್ರವಾಲಾಃ ।**
**ಅಧಶ್ಚ ಮೂಲಾನ್ಯನುಸಂತತಾನಿ**
**ಕರ್ಮಾನುಬಂಧೀನಿ ಮನುಷ್ಯಲೋಕೇ ॥ ೨**

ಕೆಳಗೆ – ಮನುಷ್ಯರೇ ಮೊದಲಾದ ಜೀವಿಗಳಿಂದ ಹಿಡಿದು ಸ್ಥಾವರದವರೆಗೆ, ಮೇಲಕ್ಕೆ – ಚತುರ್ಮುಖಬ್ರಹ್ಮಲೋಕದವರೆಗೆ ಈ ಸಂಸಾರವೃಕ್ಷದ ಕೊಂಬೆಗಳು ಹಬ್ಬಿಕೊಂಡಿವೆ. ಇವು ಸತ್ತ್ವರಜಸ್ತಮೋಗುಣಗಳಿಂದ ಬೆಳೆದು ದಪ್ಪವಾಗಿವೆ. ಈ ಕೊಂಬೆಗಳಲ್ಲಿ ಶಬ್ದ ಸ್ಪರ್ಶಾದಿ ವಿಷಯಗಳೆಂಬ ಚಿಗುರುಗಳು ಹುಟ್ಟಿವೆ. (ಇದರ ಮೂಲವನ್ನು – ಬೇರನ್ನು ಹಿಂದಿನ ಶ್ಲೋಕದಲ್ಲಿ ಹೇಳಿದೆ) (ಧರ್ಮಾಧರ್ಮಗಳೆಂಬ) ಕರ್ಮಫಲಗಳಿಂದ ಹುಟ್ಟಿದ (ರಾಗದ್ವೇಷಾದಿ ವಾಸನೆಗಳು) ಕೆಳಗೆ – ದೇವಾದಿಗಳಿಗಿಂತ ಕೆಳಗೆ ಮನುಷ್ಯಲೋಕದಲ್ಲಿ ವಿಶೇಷವಾಗಿ ಚಿಕ್ಕ ಚಿಕ್ಕ ಬೇರುಗಳಂತೆ ಹರಡಿಕೊಂಡಿವೆ.

**ವಿವರಣೆ :** ಕರ್ಮಾಧಿಕಾರವು ಮನುಷ್ಯಲೋಕದಲ್ಲಿ ಪ್ರಸಿದ್ಧವಾದ್ದರಿಂದ 'ಮನುಷ್ಯಲೋಕೇ' ಎಂದು ಹೇಳಿದೆ.

**ನ ರೂಪಮಸ್ಯೇಹ ತಥೋಪಲಭ್ಯತೇ**
**ನಾಂತೋ ನ ಚಾದಿರ್ನ ಚ ಸಂಪ್ರತಿಷ್ಠಾ ।**
**ಅಶ್ವತ್ಥಮೇನಂ ಸುವಿರೂಢಮೂಲಂ**
**ಅಸಂಗಶಸ್ತ್ರೇಣ ದೃಢೇನ ಛಿತ್ತ್ವಾ ॥ ೩**

ಆದರೆ ಸಂಸಾರವೆಂಬ ಈ ಅಶ್ವತ್ಥವೃಕ್ಷದ ರೂಪವು ಹಿಂದೆ ವರ್ಣಿಸಿದಂತೆ ಇಲ್ಲಿ ಕಂಡುಬರುವುದಿಲ್ಲ! ಇದರ ಅಂತ್ಯವಾಗಲಿ ಆದಿಯಾಗಲಿ ಮಧ್ಯವಾಗಲಿ ಕಾಣುವುದಿಲ್ಲ. ಗಟ್ಟಿಯಾಗಿ ಬೇರುಬಿಟ್ಟಿರುವ ಈ ಅಶ್ವತ್ಥವೃಕ್ಷವನ್ನು ಅಸಂಗವೆಂಬ (ಪುತ್ರಕಳತ್ರಾದಿವಿಷಯತ್ಯಾಗವೆಂಬ) ದೃಢವಾದ ಖಡ್ಗದಿಂದ ಬುಡಸಹಿತ ಕತ್ತರಿಸಿಹಾಕಿ–

**ವಿವರಣೆ :** ಅವಿದ್ಯೆಯಲ್ಲಿ ಮುಳುಗಿದ ಅಜ್ಞರಿಗೆ ಈ ವೃಕ್ಷವು ಕಾಣಿಸುವುದಿಲ್ಲ ಅಥವಾ ಸ್ವಪ್ನದಂತೆ ಮರುಮರೀಚಿಕೆಯಂತೆ ಕಂಡು ನಾಶವಾಗುವುದರಿಂದ ಇದರ ವಸ್ತುಸ್ಥಿತಿ ತಿಳಿಯುವುದಿಲ್ಲ.

**ತತಃ ಪದಂ ತತ್ಪರಿಮಾರ್ಗಿತವ್ಯಂ**
**ಯಸ್ಮಿನ್ ಗತಾ ನ ನಿವರ್ತಂತಿ ಭೂಯಃ ।**
**ತಮೇವ ಚಾದ್ಯಂ ಪುರುಷಂ ಪ್ರಪದ್ಯೇ**
**ಯತಃ ಪ್ರವೃತ್ತಿಃ ಪ್ರಸೃತಾ ಪುರಾಣೀ ॥ ೪**

ಅನಂತರ, ಯಾವುದನ್ನು ಸೇರಿದವರು ಇನ್ನೊಂದು ಸಲ ಸಂಸಾರಕ್ಕೆ ಹಿಂದಿರುಗಿ ಬರುವುದಿಲ್ಲವೋ ಆ ಪರಮೇಶ್ವರನ ಸ್ವರೂಪವನ್ನು ಅನ್ವೇಷಿಸಿ

ತಿಳಿಯಬೇಕು. ಹೇಗೆಂದರೆ, "ಪುರಾತನವಾದ ಈ ಸಂಸಾರ ಮಾಯಾವೃಕ್ಷದ ಪ್ರವೃತ್ತಿಯು (ಐಂದ್ರಜಾಲಿಕನ ಇಂದ್ರಜಾಲದಂತೆ) ಯಾರಿಂದ ಹೊರಬಂದಿದೆಯೋ ಆದ್ಯನಾದ ಆ ಪರಮಪುರುಷನಿಗೇ ಶರಣಾಗಿದ್ದೇನೆ" ಎಂದು ಆ ಪರಮಾತ್ಮನಿಗೆ ಶರಣಾಗಬೇಕು.

**ನಿರ್ಮಾನಮೋಹಾ ಜಿತಸಂಗದೋಷಾ**
**ಅಧ್ಯಾತ್ಮನಿತ್ಯಾ ವಿನಿವೃತ್ತಕಾಮಾಃ ।**
**ದ್ವಂದ್ವೈರ್ವಿಮುಕ್ತಾಃ ಸುಖದುಃಖಸಂಜ್ಞೈಃ**
**ಗಚ್ಛಂತ್ಯಮೂಢಾಃ ಪದಮವ್ಯಯಂ ತತ್ ॥** ೫

ಮಾನಮೋಹಗಳನ್ನು ವರ್ಜಿಸಿದವರೂ ವಿಷಯಾಸಕ್ತಿಯೆಂಬ ದೋಷವನ್ನು ಕಳೆದುಕೊಂಡವರೂ ಪರಮಾತ್ಮಸ್ವರೂಪವನ್ನು ಸದಾ ಚಿಂತಿಸತಕ್ಕವರೂ ಸಕಲ ಕಾಮನೆಗಳನ್ನೂ ತ್ಯಜಿಸಿದವರೂ ಸುಖ–ದುಃಖಾದಿದ್ವಂದ್ವಗಳಿಂದ ಬಿಡುಗಡೆ ಹೊಂದಿದವರೂ ಆದ ಅಮೂಢರು – ಮೋಹವಿಲ್ಲದ ಜ್ಞಾನಿಗಳು ಅವ್ಯಯವಾದ ಆ ಪರಮೇಶ್ವರ ಪದವನ್ನು ಸೇರಿಕೊಳ್ಳುತ್ತಾರೆ.

**ನ ತದ್ಭಾಸಯತೇ ಸೂರ್ಯೋ ನ ಶಶಾಂಕೋ ನ ಪಾವಕಃ ।**
**ಯದ್ಗತ್ವಾ ನ ನಿವರ್ತಂತೇ ತದ್ಧಾಮ ಪರಮಂ ಮಮ ॥** ೬

ಯಾವ ಸ್ಥಾನವನ್ನು ಸೇರಿದವರು ಮರಳಿ ಸಂಸಾರಕ್ಕೆ ಹಿಂದಿರುಗುವುದಿಲ್ಲವೋ ಅದು ನನ್ನ ಪರಮಧಾಮ. (ತೇಜೋಮಯವಾದ) ಆ ಧಾಮವನ್ನು ಬೆಳಗತಕ್ಕವನು ಸೂರ್ಯನೂ ಅಲ್ಲ, ಚಂದ್ರನೂ ಅಲ್ಲ, ಅಗ್ನಿಯೂ ಅಲ್ಲ.

**ಮಮೈವಾಂಶೋ ಜೀವಲೋಕೇ ಜೀವಭೂತಃ ಸನಾತನಃ ।**
**ಮನಃಷಷ್ಠಾನೀಂದ್ರಿಯಾಣಿ ಪ್ರಕೃತಿಸ್ಥಾನಿ ಕರ್ಷತಿ ॥** ೭

ಜೀವಲೋಕವಾದ ಈ ಸಂಸಾರದಲ್ಲಿ ನನ್ನದೇ ಸನಾತನವಾದ ಅಂಶವು ಜೀವವಾಗಿದೆ. ಈ ಜೀವನು ಆರನೆಯದಾದ ಮನಸ್ಸಿನೊಡನೆ ಪ್ರಕೃತಿನಿಷ್ಠವಾದ ಇಂದ್ರಿಯಗಳನ್ನು ತನ್ನ ಕಡೆಗೆ ಸೆಳೆದುಕೊಳ್ಳುತ್ತಾನೆ.

**ವಿವರಣೆ :** ಮುಕ್ತರಾದವರು ಹಿಂದಿರುಗದೆ ಇರುವುದಕ್ಕೆ ಕಾರಣವೇನೆಂದು ಇಲ್ಲಿ ಗೊತ್ತಾಗುತ್ತದೆ. ನೀರಿನಲ್ಲಿ ಕಾಣುವ ಸೂರ್ಯನ ಪ್ರತಿಬಿಂಬವು, ನೀರು ಆರಿದೊಡನೆ ಸೂರ್ಯನಲ್ಲಿ ಸೇರಿಹೋಗುವಂತೆ, ಘಟದಲ್ಲಿರುವ ಆಕಾಶವು ಘಟವು ಒಡೆದಾಗ ಮಹಾಕಾಶದಲ್ಲಿ ಸೇರಿಹೋಗುವಂತೆ, ಪರಮಾತ್ಮನ ಅಂಶವಾದ ಜೀವನು ಮುಕ್ತನಾದಾಗ ಪರಮಾತ್ಮನಲ್ಲಿ ಸೇರಿಹೋಗುತ್ತಾನೆ.

ಸೂರ್ಯನ ಪ್ರತಿಬಿಂಬ, ಘಟಾಕಾಶಗಳಂತೆ ಜೀವನು ಹಿಂದಿರುಗುವುದಿಲ್ಲ. ಅವುಗಳಂತೆಯೇ ಜೀವನು ಪರಮಾತ್ಮನ ಔಪಾಧಿಕವಾದ ಅಂಶ. ಅವಯವ ರಹಿತನಾದ ಪರಮಾತ್ಮನಿಗೆ ಅಂಶವೆಂಬುದಿಲ್ಲ. ಅವಿದ್ಯಾಕಲ್ಪಿತಶರೀರವೇ ಆತ್ಮನಿಗೆ ಉಪಾಧಿ.

**ಶರೀರಂ ಯದವಾಪ್ನೋತಿ ಯಚ್ಚಾಪ್ಯುತ್ಕ್ರಾಮತೀಶ್ವರಃ ।**
**ಗೃಹೀತ್ವೈತಾನಿ ಸಂಯಾತಿ ವಾಯುರ್ಗಂಧಾನಿವಾಶಯಾತ್ ॥ ೮**

ಆ ಈಶ್ವರನಾದ ಜೀವನು ಯಾವಾಗ ಈ ಶರೀರವನ್ನು ಪಡೆದು ಕೊಳ್ಳುವನೋ ಯಾವಾಗ ಇದನ್ನು ಬಿಟ್ಟು ತೆರಳುವನೋ ಆಗ, ವಾಯುವು ಗಂಧವನ್ನು ಹೂವೇ ಮೊದಲಾದ ಆಶ್ರಯವಸ್ತುವಿನಿಂದ ಒಯ್ಯುವಂತೆ, ಈ ಸ್ಥೂಲಶರೀರದಿಂದ ಸೆಳೆದು ಈ ಮನಸ್ಸನ್ನೂ ಇಂದ್ರಿಯಗಳನ್ನೂ ತನ್ನೊಡನೆ ಒಯ್ಯುತ್ತಾನೆ. (ಇವು ಆರಕ್ಕೆ ಲಿಂಗ ಶರೀರವೆಂದು ಹೆಸರು. ಇದು ಜೀವನಿಗೆ ಉಪಾಧಿಯೇ.) ಅವು ಆರು ಯಾವುವೆಂದರೆ,

**ಶ್ರೋತ್ರಂ ಚಕ್ಷುಃ ಸ್ಪರ್ಶನಂ ಚ ರಸನಂ ಘ್ರಾಣಮೇವ ಚ।**
**ಅಧಿಷ್ಠಾಯ ಮನಶ್ಚಾಯಂ ವಿಷಯಾನುಪಸೇವತೇ ॥ ೯**

ದೇಹದಲ್ಲಿರುವ ಈ ಜೀವನು ಕಿವಿ, ಕಣ್ಣು, ತ್ವಕ್ (ಚರ್ಮ), ನಾಲಗೆ, ಮೂಗು ಮತ್ತು ಮನಸ್ಸು ಇವುಗಳನ್ನಾಶ್ರಯಿಸಿಕೊಂಡು ಶಬ್ದಾದಿ ವಿಷಯಗಳನ್ನು ಉಪಭೋಗಿಸುತ್ತಾನೆ.

**ವಿವರಣೆ :** ಇಂದ್ರಿಯಗಳ ಮೂಲಕ ಜೀವನು ಭೋಕ್ತನೇ ಹೊರತು ಸ್ವಯಂ ಭೋಕ್ತನಲ್ಲ. ಮನಸ್ಸು ಇಂದ್ರಿಯವೆಂದೂ ಇಂದ್ರಿಯವಲ್ಲವೆಂದೂ ಎರಡು ಪಕ್ಷಗಳಿವೆ.

**ಉತ್ಕ್ರಾಮಂತಂ ಸ್ಥಿತಂ ವಾಪಿ ಭುಂಜಾನಂ ವಾ ಗುಣಾನ್ವಿತಮ್ ।**
**ವಿಮೂಢಾ ನಾನುಪಶ್ಯಂತಿ ಪಶ್ಯಂತಿ ಜ್ಞಾನಚಕ್ಷುಷಃ ॥ ೧೦**

ಈತನು ದೇಹದಿಂದ ನಿರ್ಗಮಿಸುತ್ತಿದ್ದರೂ ಅದರಲ್ಲಿಯೇ ಇದ್ದಾಗಲೂ ಶಬ್ದಾದಿವಿಷಯಗಳನ್ನು ಭೋಗಿಸುವಾಗಲೂ ಸುಖ–ದುಃಖಾದಿ ಗುಣಗಳಿಂದ ಕೂಡಿದ್ದರೂ – ಇವನನ್ನು ಮೂಢರು ಗುರುತಿಸುವುದಿಲ್ಲ! ಜ್ಞಾನವೆಂಬ ನೇತ್ರ ವಿದ್ದವರು ಸ್ಪಷ್ಟವಾಗಿ ಕಾಣುತ್ತಾರೆ!

**ಯತಂತೋ ಯೋಗಿನಶ್ಚೈನಂ ಪಶ್ಯಂತ್ಯಾತ್ಮನ್ಯವಸ್ಥಿತಮ್ ।**
**ಯತಂತೋಽಪ್ಯಕೃತಾತ್ಮಾನೋ ನೈನಂ ಪಶ್ಯಂತ್ಯಚೇತಸಃ ॥ ೧೧**

ಪ್ರಯತ್ನಶೀಲರಾದ ಕೆಲವು ಯೋಗಿಗಳು ತಮ್ಮ ಬುದ್ಧಿಯಲ್ಲಿಯೇ ಸ್ಥಿತನಾದ ಈ ಆತ್ಮನನ್ನು ('ಇವನೇ ನಾನು' ಎಂದು) ಕಂಡುಕೊಳ್ಳುವರು. ಅಸಂಸ್ಕೃತ ಬುದ್ಧಿಯವರೂ ಅವಿವೇಕಿಗಳೂ ಆದವರು ಪ್ರಯತ್ನ ಮಾಡಿದರೂ ಆತ್ಮನನ್ನು ಕಂಡುಹಿಡಿಯಲಾರರು.

**ಯದಾದಿತ್ಯಗತಂ ತೇಜಃ ಜಗದ್ಭಾಸಯತೇಽಖಿಲಮ್ ।**
**ಯಚ್ಚಂದ್ರಮಸಿ ಯಚ್ಚಾಗ್ನೌ ತತ್ತೇಜೋ ವಿದ್ಧಿ ಮಾಮಕಮ್ ॥ ೧೨**

ಆದಿತ್ಯನಲ್ಲಿರುವ ಯಾವ ತೇಜಸ್ಸು ಸಕಲ ಜಗತ್ತನ್ನೂ ಬೆಳಗುವುದೋ ಯಾವುದು ಚಂದ್ರನಲ್ಲಿಯೂ ಅಗ್ನಿಯಲ್ಲಿಯೂ ಇದೆಯೋ ಆ ತೇಜಸ್ಸೆಲ್ಲವೂ ನನ್ನದೆಂದು ತಿಳಿ.

**ಗಾಮಾವಿಶ್ಯ ಚ ಭೂತಾನಿ ಧಾರಯಾಮ್ಯಹಮೋಜಸಾ ।**
**ಪುಷ್ಣಾಮಿ ಚೌಷಧೀಃ ಸರ್ವಾಃ ಸೋಮೋ ಭೂತ್ವಾ ರಸಾತ್ಮಕಃ ॥ ೧೩**

ನಾನು ಭೂಮಿಯು ಒಳಹೊಕ್ಕು.ಸಕಲ ಭೂತಗಳನ್ನೂ ನನ್ನ ತೇಜಸ್ಸಿನಿಂದ ಧಾರಣ ಮಾಡುತ್ತೇನೆ. ನಾನು ರಸಸ್ವಭಾವದ ಚಂದ್ರನಾಗಿ ಎಲ್ಲ ಗಿಡಮರ ಬಳ್ಳಿಗಳನ್ನೂ ಪೋಷಿಸುತ್ತೇನೆ.

**ವಿವರಣೆ :** 'ಚಂದ್ರನು ತನ್ನ ಕಿರಣಗಳಿಂದ ಎಲ್ಲ ವನಸ್ಪತಿಗಳನ್ನೂ ಪೋಷಿಸುತ್ತಾನೆಂದು ವೇದದಲ್ಲಿಯೂ ಪುರಾಣಗಳಲ್ಲಿಯೂ ವರ್ಣನೆ ಇದೆ.

**ಅಹಂ ವೈಶ್ವಾನರೋ ಭೂತ್ವಾ ಪ್ರಾಣಿನಾಂ ದೇಹಮಾಶ್ರಿತಃ ।**
**ಪ್ರಾಣಾಪಾನಸಮಾಯುಕ್ತಃ ಪಚಾಮ್ಯನ್ನಂ ಚತುರ್ವಿಧಮ್ ॥ ೧೪**

ನಾನು ವೈಶ್ವಾನರರೂಪನಾದ ಅಗ್ನಿಯಾಗಿ ಪ್ರಾಣಿಗಳ ದೇಹದಲ್ಲಿದ್ದುಕೊಂಡು, ಪ್ರಾಣಾಪಾನಗಳಿಂದ ಯುಕ್ತನಾಗಿ, ನಾಲ್ಕು ಬಗೆಯ ಆಹಾರವನ್ನು ಪಚನ ಮಾಡುತ್ತೇನೆ.

**ವಿವರಣೆ :** ಜೀರ್ಣಮಾಡುವ ಶಕ್ತಿಯೇ ವೈಶ್ವಾನರಾಗ್ನಿ. ಜಾಠರಾಗ್ನಿಯೆಂದರೂ ಇದೇ. ಭೋಜ್ಯ, ಭಕ್ಷ್ಯ, ಚೋಷ್ಯ, ಲೇಹ್ಯ – ಎಂದು ಆಹಾರವು ನಾಲ್ಕು ವಿಧ. ಭೋಜ್ಯ = ಅಕ್ಕಿಯಿಂದ ಮಾಡಿದ ಅನ್ನ ಮೊದಲಾದದ್ದು. ಭಕ್ಷ್ಯ = ಜಗಿದು ತಿನ್ನಬೇಕಾದ ರೊಟ್ಟಿ, ಚಕ್ಕುಲಿ ಇತ್ಯಾದಿ. ಚೋಷ್ಯ = ನಾಲಗೆಯಿಂದ

ಹೀರಿಕೊಳ್ಳುವ ದ್ರವವಸ್ತು. ಲೇಹ್ಯ=ನೆಕ್ಕಬೇಕಾದ ಉಪ್ಪಿನಕಾಯಿ ಮೊದಲಾದದ್ದು. ಹಿಂದೆ ಹೇಳಿದ ವಿಭೂತಿಯೋಗದ ಸಂಕ್ಷಿಪ್ತರೂಪವಿದು. ಸರ್ವವೂ ಆತ್ಮವೇ ಎಂದು ಇದರ ತಾತ್ಪರ್ಯ.

**ಸರ್ವಸ್ಯ ಚಾಹಂ ಹೃದಿ ಸಂನಿವಿಷ್ಟೋ**
**ಮತ್ತಃ ಸ್ಮೃತಿರ್ಜ್ಞಾನಮಪೋಹನಂ ಚ ।**
**ವೇದೈಶ್ಚ ಸರ್ವೈರಹಮೇವ ವೇದ್ಯೋ**
**ವೇದಾಂತಕೃದ್ವೇದವಿದೇವ ಚಾಹಮ್ ॥ ೧೫**

ಸರ್ವಪ್ರಾಣಿಗಳ ಹೃದಯದಲ್ಲಿ ನಾನು ನೆಲೆಸಿದ್ದೇನೆ. ನನ್ನಿಂದಲೇ ಸ್ಮರಣೆಯೂ ಜ್ಞಾನವೂ ಹುಟ್ಟುತ್ತವೆ. ಅವು ಅಳಿಸಿಹೋಗುವುದೂ ನನ್ನಿಂದ. ಸರ್ವವೇದಗಳಿಂದ ಪ್ರತಿಪಾದ್ಯನಾದವನು ನಾನು. ವೇದಾಂತಕ್ಕೆ ಅರ್ಥವನ್ನು ಹೇಳತಕ್ಕವನು – ಎಂದರೆ – ವೇದಾಂತದ ಸಂಪ್ರದಾಯಪ್ರವರ್ತಕನೇ ನಾನು. ವೇದಗಳ ಅರ್ಥವನ್ನು ಸರಿಯಾಗಿ ಬಲ್ಲವನೇ ನಾನು.

**ವಿವರಣೆ :** ವೇದಾಂತವಾದ ಉಪನಿಷತ್ತು ವೇದದಲ್ಲಿಯೇ ಸೇರುವುದರಿಂದಲೂ ಅದು ಅನಾದಿಯಾದ್ದರಿಂದಲೂ 'ವೇದಾಂತಕೃತ್' ಎಂಬುದಕ್ಕೆ ವೇದಾಂತ ಸಂಪ್ರದಾಯಕರ್ತನೆಂದು ಅರ್ಥಹೇಳಿದೆ. ಆದ್ದರಿಂದ 'ತೇನೇ ಬ್ರಹ್ಮ ಹೃದಾ ಯ ಆದಿಕವಯೇ' ಎಂಬ ಭಾಗವತ ಶ್ಲೋಕವೂ ಇದೆ. 'ನಾರಾಯಣಂ ಪದ್ಮಭುವಂ ವಸಿಷ್ಠಂ....' ಎಂಬ ಸಾಂಪ್ರದಾಯಿಕ ಶ್ಲೋಕದಲ್ಲಿ ಶ್ರೀಮನ್ನಾರಾಯಣನನ್ನು ಆದಿಗುರುವೆಂದು ಸ್ವೀಕರಿಸಿದೆ.

**ದ್ವಾವಿಮೌ ಪುರುಷೌ ಲೋಕೇ ಕ್ಷರಶ್ಚಾಕ್ಷರ ಏವ ಚ ।**
**ಕ್ಷರಃ ಸರ್ವಾಣಿ ಭೂತಾನಿ ಕೂಟಸ್ಥೋಽಕ್ಷರ ಉಚ್ಯತೇ ॥ ೧೬**

ಲೋಕದಲ್ಲಿ ಕ್ಷರ, ಅಕ್ಷರ – ಎಂಬ ಇಬ್ಬರು ಪುರುಷರಿದ್ದಾರೆ. ಸ್ಥಾವರ ಜಂಗಮರೂಪಗಳಾದ ಎಲ್ಲ ಭೂತಗಳೂ ಕ್ಷರ ಎನಿಸುತ್ತವೆ. ಕೂಟಸ್ಥನಿಗೆ ಅಕ್ಷರ ಎಂದು ಹೆಸರು.

**ವಿವರಣೆ :** ಇದುವರೆಗೆ ಉಪಾಧಿವಿಶಿಷ್ಟನಾದ ಪರಮಾತ್ಮನ ವಿಭೂತಿಯನ್ನು ಸಂಕ್ಷೇಪವಾಗಿ ಹೇಳಲಾಯಿತು. ಉಪಾಧಿರಹಿತನಾದ ಪರಮಾತ್ಮನೇ ಪುರುಷೋತ್ತಮ ಎಂದು ವರ್ಣಿಸುವುದಕ್ಕಾಗಿ ಉಪಾಧಿಯನ್ನು ಎರಡು ರಾಶಿಗಳಾಗಿ ವಿಂಗಡಿಸಿ ಈ ರಾಶಿಗಳನ್ನು ಇಬ್ಬರು ಪುರುಷರೆಂದು ಇಲ್ಲಿ ಹೇಳಿದೆ. ಕ್ಷರ = ವಿನಾಶಿ, ಅಕ್ಷರ = ಅವಿನಾಶಿ, ಕೂಟಸ್ಥ = ಭಗವಂತನ ಮಾಯಾಶಕ್ತಿ,

ಅವ್ಯಕ್ತ. ಇದೇ ಕ್ಷರವಾದ ಸಂಸಾರವೃಕ್ಷಕ್ಕೆ ಅವಿನಾಶಿಯಾದ ಬೀಜ.

**ಉತ್ತಮಃ ಪುರುಷಸ್ತ್ವನ್ಯಃ ಪರಮಾತ್ಮೇತ್ಯುದಾಹೃತಃ ।**
**ಯೋ ಲೋಕತ್ರಯಮಾವಿಶ್ಯ ಬಿಭರ್ತ್ಯವ್ಯಯ ಈಶ್ವರಃ ॥ ೧೭**

ಆದರೆ ಪರಮಾತ್ಮನೆಂದು (ವೇದಗಳಲ್ಲಿ) ಉದಾಹೃತನಾದ ಉತ್ತಮ ಪುರುಷನು ಇವರಿಬ್ಬರಿಗಿಂತ ಬೇರೆ. ಅವ್ಯಯನೂ ಈಶ್ವರನೂ ಆದ ಆ ಪುರುಷೋತ್ತಮನು ತ್ರೈಲೋಕ್ಯವನ್ನು ವ್ಯಾಪಿಸಿ ಅದನ್ನು ಧರಿಸಿದ್ದಾನೆ.

**ಯಸ್ಮಾತ್ ಕ್ಷರಮತೀತೋಽಹಮಕ್ಷರಾದಪಿ ಚೋತ್ತಮಃ ।**
**ಅತೋಽಸ್ಮಿ ಲೋಕೇ ವೇದೇ ಚ ಪ್ರಥಿತಃ ಪುರುಷೋತ್ತಮಃ ॥ ೧೮**

ನಾನು ಕ್ಷರವನ್ನು ದಾಟಿ ಅಕ್ಷರಕ್ಕಿಂತಲೂ ಉತ್ತಮನಾಗಿದ್ದೇನೆ. ಆದ್ದರಿಂದ ಲೋಕದಲ್ಲಿಯೂ ವೇದದಲ್ಲಿಯೂ ಪುರುಷೋತ್ತಮನೆಂದು ಪ್ರಖ್ಯಾತನಾಗಿದ್ದೇನೆ.

**ವಿವರಣೆ :** ಕ್ಷರ = ಹಿಂದೆ ವರ್ಣಿಸಿದ ಅಶ್ವತ್ಥವೃಕ್ಷ. ಅಕ್ಷರ = ಆ ವೃಕ್ಷಕ್ಕೆ ಬೀಜಭೂತವಾದ ಮಾಯೆ. ಇವನ್ನೇ ಇಬ್ಬರು ಪುರುಷರೆಂದು ಹಿಂದಿನ ಶ್ಲೋಕದಲ್ಲಿ ಹೇಳಿದೆ.

**ಯೋ ಮಾಮೇವಮಸಂಮೂಢೋ ಜಾನಾತಿ ಪುರುಷೋತ್ತಮಮ್ ।**
**ಸ ಸರ್ವವಿದ್ಭಜತಿ ಮಾಂ ಸರ್ವಭಾವೇನ ಭಾರತ ॥ ೧೯**

ಅರ್ಜುನ, ಅಸಂಮೂಢನಾದ ಯಾವನು ಈಶ್ವರನಾದ ನನ್ನನ್ನು ಈ ಪ್ರಕಾರ ಪುರುಷೋತ್ತಮನೆಂದು ಅರಿತುಕೊಳ್ಳುವನೋ ಅವನು ಸರ್ವಜ್ಞನೆನಿಸಿ ಸರ್ವಾತ್ಮಭಾವದಿಂದ ನನ್ನನ್ನು ಭಜಿಸಿದವನಾಗುತ್ತಾನೆ.

**ವಿವರಣೆ :** ಸರ್ವಭಾವ = ಎಲ್ಲರ ಆತ್ಮನೂ ಎಲ್ಲ ರೂಪಗಳಿಂದಿರುವವನೂ ಭಗವಂತನೇ ಎಂದು ತಿಳಿದುಕೊಳ್ಳುವುದು. ಈ ತಿಳಿಯುವಿಕೆಯೇ ಭಗವಂತನ ನಿಜವಾದ ಭಜನೆ.

**ಇತಿ ಗುಹ್ಯತಮಂ ಶಾಸ್ತ್ರಮಿದಮುಕ್ತಂ ಮಯಾನಘ ।**
**ಏತದ್ಬುದ್ಧ್ವಾ ಬುದ್ಧಿಮಾನ್ ಸ್ಯಾತ್ ಕೃತಕೃತ್ಯಶ್ಚ ಭಾರತ ॥ ೨೦**

**ಇತಿ ಶ್ರೀಮದ್ಭಗವದ್ಗೀತಾಸೂಪನಿಷತ್ಸು ಬ್ರಹ್ಮವಿದ್ಯಾಯಾಂ ಯೋಗಶಾಸ್ತ್ರೇ ಪುರುಷೋತ್ತಮಯೋಗೋ ನಾಮ ಪಂಚದಶೋಽಧ್ಯಾಯಃ**

ಹೇ ಪುಣ್ಯಶಾಲಿ–ಅರ್ಜುನ, ಈ ಪ್ರಕಾರದಲ್ಲಿ ಅತ್ಯಂತ ಗೋಪನೀಯವಾದ

ಈ ಶಾಸ್ತ್ರವನ್ನು ನಿನಗೆ ಹೇಳಿದ್ದೇನೆ. ಇದನ್ನರಿತುಕೊಂಡರೆ ಮಾತ್ರ ಆತನು ಬುದ್ಧಿಶಾಲಿಯೂ ಕೃತಕೃತ್ಯನೂ ಆಗುವನು.

**ವಿವರಣೆ :** ಸಂಪೂರ್ಣ ಗೀತೆಯು ಒಂದು ಶಾಸ್ತ್ರವೆನಿಸುತ್ತದೆಯಾದರೂ ಈ ಅಧ್ಯಾಯದಲ್ಲಿ ಸಂಕ್ಷಿಪ್ತವಾಗಿ ಎಲ್ಲ ಶಾಸ್ತ್ರಾರ್ಥಗಳೂ ಬಂದಿರುವುದರಿಂದ ಇಷ್ಟನ್ನೇ ಶಾಸ್ತ್ರವೆಂದು ಕರೆಯಲಾಗಿದೆ.

**ಇಲ್ಲಿಗೆ ಶ್ರೀಮದ್ಭಗವದ್ಗೀತೆಯಲ್ಲಿ ಪುರುಷೋತ್ತಮಯೋಗವೆಂಬ ಹದಿನೈದನೆಯ ಅಧ್ಯಾಯವು ಸಮಾಪ್ತವಾಯಿತು.**

## ೧೫ನೆಯ ಅಧ್ಯಾಯದ ಸಾರ

ಭಗವಂತನು ಹೀಗೆಂದನು: ಈ ಸಂಸಾರವೆಂಬುದು ಬ್ರಹ್ಮವೆಂಬ ಬೇರಿನಿಂದ ಹುಟ್ಟಿದ ಒಂದು ಅಶ್ವತ್ಥವೃಕ್ಷ. ಇದು ಎಂದಿಗೂ ಕ್ಷೀಣಿಸುವುದೇ ಇಲ್ಲ. ವೇದಗಳೆಂಬ ಎಲೆಗಳು ಇದನ್ನು ರಕ್ಷಿಸಿಕೊಂಡಿವೆ. ಈ ವೃಕ್ಷವು ಗುಣಗಳಿಂದ ಬೆಳೆದು ವಿಷಯಗಳಿಂದ ಚಿಗುರಿದೆ. ಕರ್ಮದಿಂದ ಇದಕ್ಕೆ ಈ ಭೂಲೋಕದಲ್ಲಿ ಬಿಳಿಲುಗಳು ಬಿಟ್ಟಿರುತ್ತವೆ.

ಜ್ಞಾನಿಗಳು ಈ ವೃಕ್ಷವನ್ನು ಅಸಂಗವೆಂಬ ಬಲವಾದ ಶಸ್ತ್ರದಿಂದ ಕತ್ತರಿಸಿ ಪರಮಪುರುಷನಿಗೆ ಶರಣುಹೋಗಿ, ಸ್ವಪ್ರಕಾಶವಾದ ಪರಮಪದವನ್ನು ಸೇರುತ್ತಾರೆ. ಯಾರಾದರೂ ಶಮದಮಾದಿಗಳನ್ನು ವಶಪಡಿಸಿಕೊಂಡು ಪ್ರಯತ್ನಿಸಿದರೆ ಅವರು ಈ ಪರಮಾರ್ಥಸ್ವರೂಪವನ್ನು ಕಂಡುಕೊಳ್ಳುತ್ತಾರೆ. ಜೀವನು ಪರಮಾರ್ಥದಲ್ಲಿ ನನ್ನ ಅಂಶವೇ ಆಗಿದ್ದಾನೆ. ಅವನು ವಿಷಯಗಳಿಗೆ ವಶನಾಗಿ ಸಂಸಾರದಲ್ಲಿ ನರಳುತ್ತಿದ್ದಾನೆ. ತಾನು ಯಾರೆಂದು ತಿಳಿದುಕೊಳ್ಳದೆ ಇರುವುದೇ ಅವನ ದೋಷ.

ಸೂರ್ಯ, ಚಂದ್ರ, ಅಗ್ನಿ, ಭೂಮಿ, ಸೋಮ, ವೈಶ್ವಾನರಾಗ್ನಿ – ಮೊದಲಾದ ರೂಪಗಳಲ್ಲಿದ್ದು ನನ್ನ ಸ್ವರೂಪವು ಸರ್ವಾತ್ಮವಾಗಿದೆ. ಸಕಲಪ್ರಾಣಿಗಳ ಹೃದಯದಲ್ಲಿ ನಾನು ನೆಲೆಸಿದ್ದೇನೆ. ಸ್ಮರಣೆ, ವಿಸ್ಮರಣೆ, ಜ್ಞಾನ ಮೊದಲಾದ ವೆಲ್ಲವೂ ನನ್ನಿಂದಲೇ ನಡೆಯುತ್ತವೆ. ಜ್ಞೇಯ–ಜ್ಞಾತೃ–ಜ್ಞಾನಗಳು ನಾನೇ. ಸಮಸ್ತ ವಸ್ತುಗಳನ್ನು ಸೇರಿಸಿ ಮೂರು ವಿಭಾಗ ಮಾಡಬಹುದು. ಇಂದ್ರಿಯ ಗೋಚರವಾಗತಕ್ಕ ಭೂತಗಳೂ ಭೌತಿಕಗಳೂ ಒಂದು ವಿಭಾಗ. ಇದು

ನಾಶವಾಗುವುದರಿಂದ ಕ್ಷರವೆಂದು ಹೆಸರು. ಇದು ಪ್ರಳಯಕಾಲದಲ್ಲಿ ಅವ್ಯಕ್ತವಾಗಿ ಬಹುಸೂಕ್ಷ್ಮವಾಗಿರುತ್ತದೆ. ಇದಕ್ಕೆ ಅಕ್ಷರವೆಂದು ಹೆಸರು. ಏಕೆಂದರೆ, ಸಂಸಾರವಿರುವವರೆಗೂ ಇದು ಮಾಯಾರೂಪದಲ್ಲಿ ಇದ್ದೇ ಇರುತ್ತದೆ. ನಾಶವಾಗುವುದಿಲ್ಲ. ಆದ್ದರಿಂದ ಇದಕ್ಕೆ ಅಕ್ಷರವೆಂದು ಹೇಳುತ್ತಾರೆ. ನಾನಾದರೋ ಕ್ಷರಾಕ್ಷರಗಳೆರಡನ್ನೂ ಮೀರಿದವನು. ಎಷ್ಟು ಪ್ರಳಯಗಳಾದರೂ ನಾನು ಒಂದೇ ಸ್ವರೂಪದಲ್ಲಿದ್ದೇ ಇರುತ್ತೇನೆ. ಆದ್ದರಿಂದ ನನ್ನನ್ನು ಪುರುಷೋತ್ತಮ ಎನ್ನುತ್ತಾರೆ. ಕ್ಷರ, ಅಕ್ಷರಗಳನ್ನು ಪುರುಷರೆನ್ನುವುದುಂಟು. ಅದು ಔಪಚಾರಿಕವಾಗಿ ನಡೆಯುವ ವ್ಯವಹಾರ ಮಾತ್ರ. ಈ ಪ್ರಕಾರದಲ್ಲಿರುವ ನನ್ನನ್ನು ಸರಿಯಾಗಿ ತಿಳಿದವನು ಸರ್ವಜ್ಞನಾಗುವನು.

ಇದಿಷ್ಟು ಶಾಸ್ತ್ರರಹಸ್ಯ. ಈ ತತ್ತ್ವವನ್ನರಿತವನೇ ಜ್ಞಾನಿ. ಅವನೇ ಕೃತಕೃತ್ಯನು. ಹೀಗೆ ನನ್ನನ್ನರಿತ ಬಳಿಕ ತಿಳಿಯಬೇಕಾದ್ದಾಗಲಿ ಮಾಡಬೇಕಾದ್ದಾಗಲಿ ಯಾವುದೂ ಉಳಿಯುವುದಿಲ್ಲ. 'ಜ್ಞಾತವ್ಯಂ ನಾವಶಿಷ್ಯತೇ, ಕರ್ತವ್ಯಂ ನಾವಶಿಷ್ಯತೇ, ಬೋಧಯಿತವ್ಯಂ ನಾವಶಿಷ್ಯತೇ'.

## ಅಧ್ಯಾಯ ೧೬

# ದೈವಾಸುರಸಂಪದ್ವಿಭಾಗಯೋಗ

ಒಂಬತ್ತನೆಯ ಅಧ್ಯಾಯದಲ್ಲಿ ದೈವೀ ಆಸುರೀ ರಾಕ್ಷಸೀ – ಎಂಬ ಮೂರು ಬಗೆಯ ಪ್ರಕೃತಿಗಳ ವಿಷಯವನ್ನು ಸೂಚಿಸಲಾಗಿತ್ತು. ಅದನ್ನು ವಿಸ್ತಾರವಾಗಿ ಈ ಅಧ್ಯಾಯದಲ್ಲಿ ತಿಳಿಸಲಾಗುತ್ತದೆ.

**ಶ್ರೀಭಗವಾನುವಾಚ –**

**ಅಭಯಂ ಸತ್ತ್ವಸಂಶುದ್ಧಿರ್ಜ್ಞಾನಯೋಗವ್ಯವಸ್ಥಿತಿಃ ।**
**ದಾನಂ ದಮಶ್ಚ ಯಜ್ಞಶ್ಚ ಸ್ವಾಧ್ಯಾಯಸ್ತಪ ಆರ್ಜವಮ್ ॥ ೧**

ನಿರ್ಭಯತೆ, ಅಂತಃಕರಣಶುದ್ಧಿ, ಅಧ್ಯಾತ್ಮಜ್ಞಾನ ಮತ್ತು ಅದನ್ನು ಅನುಭವಕ್ಕೆ ತಂದುಕೊಳ್ಳುವುದೆಂಬ ಯೋಗದಲ್ಲಿ ನಿಷ್ಠೆ, ಯಥಾಶಕ್ತಿಯಾಗಿ ಅನ್ನಾದಿಗಳ ದಾನ, ಬಾಹ್ಯೇಂದ್ರಿಯನಿಗ್ರಹ, ವೈದಿಕಯಜ್ಞಾನುಷ್ಠಾನ, ವೇದಾಧ್ಯಯನ, ತಪಸ್ಸು, ಋಜುತ್ವ (ಇವು ದೈವಸಂಪತ್ತನ್ನು ಪಡೆದವನ ಗುಣಗಳು).

**ಅಹಿಂಸಾ ಸತ್ಯಮಕ್ರೋಧಃ ತ್ಯಾಗಃ ಶಾಂತಿರಪೈಶುನಮ್ ।**
**ದಯಾ ಭೂತೇಷ್ವಲೋಲುಪ್ತ್ವಂ ಮಾರ್ದವಂ ಹ್ರೀರಚಾಪಲಮ್ ॥ ೨**

ಅಹಿಂಸೆ, ಸತ್ಯ, ಕೋಪಗೊಳ್ಳದಿರುವುದು, ಭೋಗವಿಷಯದ ತ್ಯಾಗ, ಚಿತ್ತಶಾಂತಿ, ಚಾಡಿ ಹೇಳದಿರುವುದು, ಪ್ರಾಣಿದಯೆ, ವಿಷಯಗಳಿದ್ದರೂ ಮನೋವಿಕಾರರಾಹಿತ್ಯ, ಮೃದುಸ್ವಭಾವ, ಲಜ್ಜೆ, ಪ್ರಯೋಜನವಿಲ್ಲದೆ ವಾಕ್ ಪಾಣಿ ಪಾದಾದಿಗಳ ವ್ಯಾಪಾರವನ್ನು ನಡೆಸದಿರುವುದು (ಇವು ದೈವಸಂಪತ್ತಿನ ಗುಣಗಳು).

**ತೇಜಃ ಕ್ಷಮಾ ಧೃತಿಃ ಶೌಚಮ್ ಅದ್ರೋಹೋ ನಾತಿಮಾನಿತಾ ।**
**ಭವಂತಿ ಸಂಪದಂ ದೈವೀಮಭಿಜಾತಸ್ಯ ಭಾರತ ॥ ೩**

ಪ್ರಗಲ್ಭತೆ, ತಾಳ್ಮೆ, ಕಷ್ಟಬಂದಾಗ ದೇಹೇಂದ್ರಿಯಗಳು ಕುಸಿಯದಂತೆ ತಡೆದುಕೊಳ್ಳುವ ಚಿತ್ತವೃತ್ತಿಯಾದ ಧೃತಿ, ಬಾಹ್ಯಾಭ್ಯಂತರಶುಚಿತ್ವ, ಪರರಿಗೆ ಕೇಡನ್ನು ಬಯಸದಿರುವುದು, ತಾನು ಗೌರವಾರ್ಹನೆಂದು ಭಾವಿಸದಿರುವ ವಿನಯ ಗುಣ – ಇವೆಲ್ಲವೂ, ಅರ್ಜುನ, ದೈವಸಂಪತ್ತನ್ನು ಪಡೆದವನ – ಎಂದರೆ – ಭಾವಿಕಲ್ಯಾಣಭಾಜನನಿಗೆ ಇರತಕ್ಕ ಗುಣಗಳು.

**ದಂಭೋ ದರ್ಪೋಽಭಿಮಾನಶ್ಚ ಕ್ರೋಧಃ ಪಾರುಷ್ಯಮೇವ ಚ ।**
**ಅಜ್ಞಾನಂ ಚಾಭಿಜಾತಸ್ಯ ಪಾರ್ಥ ಸಂಪದಮಾಸುರೀಮ್ ॥ ೪**

ಪರರನ್ನು ವಂಚಿಸುವುದಕ್ಕಾಗಿ ಧಾರ್ಮಿಕತೆಯ ಸೋಗು, ಸೊಕ್ಕು, ತಾನು ಅಧಿಕನೆಂಬ ದುರಭಿಮಾನ, ಸಿಟ್ಟು, ಒರಟು ಮಾತು, ಕರ್ತವ್ಯಜ್ಞಾನಶೂನ್ಯತೆ – ಈ ಗುಣಗಳು, ಪಾರ್ಥ, ಆಸುರಪ್ರಕೃತಿಯನ್ನು ಪಡೆದವನಿಗೆ ಬರುತ್ತವೆ.

**ದೈವೀ ಸಂಪದ್ವಿಮೋಕ್ಷಾಯ ನಿಬಂಧಾಯಾಸುರೀ ಮತಾ ।**
**ಮಾ ಶುಚಃ ಸಂಪದಂ ದೈವೀಮ್ ಅಭಿಜಾತೋಽಸಿ ಪಾಂಡವ ॥ ೫**

ದೈವಸಂಪತ್ತು ಮೋಕ್ಷಕ್ಕೆ ಕಾರಣವೆಂದೂ ಆಸುರಸಂಪತ್ತು ಸಂಸಾರದಲ್ಲಿ ಬಂಧನಕ್ಕೆ ಕಾರಣವೆಂದೂ ಸಂಮತವಾಗಿದೆ. ಅರ್ಜುನ, ನೀನು ದೈವಸಂಪತ್ತನ್ನು ಪಡೆದು ಹುಟ್ಟಿದ್ದೀಯೆ, ಚಿಂತಿಸಬೇಡ.

**ವಿವರಣೆ :** ರಾಕ್ಷಸಪ್ರಕೃತಿಯನ್ನು ಇಲ್ಲಿ ವಿವರಿಸಿಲ್ಲ. ಅದು ಆಸುರಪ್ರಕೃತಿಯಲ್ಲಿ ಸೇರಿಹೋಗುತ್ತದೆ. ಬೇಕೆಂದರೆ ಇನ್ನೂ ಕೆಲವು ದುರ್ಗುಣಗಳನ್ನು ಅದರಲ್ಲಿ ಸೇರಿಸಿಕೊಳ್ಳಬಹುದು. ರಾಕ್ಷಸಪ್ರಕೃತಿಯೂ ಬಂಧಕವೆಂಬುದು ಸ್ಪಷ್ಟವಾಗಿದೆ. ಆದ್ದರಿಂದ ಮುಂದೆ ದೈವ–ಆಸುರ ಎಂಬ ಎರಡೇ ವಿಭಾಗವು ಪ್ರಸ್ತುತವಾಗಿದೆ.

**ದ್ವೌ ಭೂತಸರ್ಗೌ ಲೋಕೇಽಸ್ಮಿನ್ ದೈವ ಆಸುರ ಏವ ಚ ।**
**ದೈವೋ ವಿಸ್ತರಶಃ ಪ್ರೋಕ್ತ ಆಸುರಂ ಪಾರ್ಥ ಮೇ ಶೃಣು ॥ ೬**

ಈ ಲೋಕದಲ್ಲಿ ದೈವ, ಆಸುರ – ಎಂದು ಎರಡು ಬಗೆಯ ಮನುಷ್ಯ ಸೃಷ್ಟಿಗಳುಂಟು. ಅವುಗಳಲ್ಲಿ ದೈವಸೃಷ್ಟಿಯ ವಿಷಯವನ್ನು 'ಅಭಯಂ ಸತ್ತ್ವಸಂಶುದ್ಧಿಃ' (೧೬–೧) ಇತ್ಯಾದಿಯಾಗಿ ವಿಸ್ತರದಿಂದ ಹೇಳಿದ್ದಾಗಿದೆ. ಈಗ ಆಸುರಸೃಷ್ಟಿಯ ವಿಚಾರವನ್ನು ಹೇಳುತ್ತೇನೆ, ಕೇಳು.

**ಪ್ರವೃತ್ತಿಂ ಚ ನಿವೃತ್ತಿಂ ಚ ಜನಾ ನ ವಿದುರಾಸುರಾಃ ।**
**ನ ಶೌಚಂ ನಾಪಿ ಚಾಚಾರೋ ನ ಸತ್ಯಂ ತೇಷು ವಿದ್ಯತೇ ॥ ೭**

ಆಸುರಪ್ರಕೃತಿಯ ಜನರು ಯಾವ ಕಾರ್ಯದಲ್ಲಿ ಪ್ರವರ್ತಿಸಬೇಕು, ಯಾವುದರಲ್ಲಿ ಪ್ರವರ್ತಿಸದೆ ನಿವೃತ್ತಿಹೊಂದಬೇಕು–ಎಂಬುದನ್ನು ತಿಳಿದಿರುವುದಿಲ್ಲ. ಈ ಆಸುರಪ್ರಕೃತಿಯವರಲ್ಲಿ ಶೌಚವೂ ಇಲ್ಲ, ಆಚಾರವೂ ಇಲ್ಲ, ಸತ್ಯವೂ ಇರುವುದಿಲ್ಲ (ಇವರು ಕೊಳಕರು, ದುರಾಚಾರಿಗಳು ಮತ್ತು

ಸುಳ್ಳು ಹೇಳತಕ್ಕವರು).

**ಅಸತ್ಯಮಪ್ರತಿಷ್ಠಂ ತೇ ಜಗದಾಹುರನೀಶ್ವರಮ್ ।**
**ಅಪರಸ್ಪರಸಂಭೂತಂ ಕಿಮನ್ಯತ್ಕಾಮಹೈತುಕಮ್ ॥ ೮**

"ಈ ಜಗತ್ತೆಲ್ಲವೂ ಸುಳ್ಳಿನ ಪ್ರಪಂಚವೆಂದೂ ಧರ್ಮಾಧರ್ಮಗಳ ಆಧಾರವೇನೂ ಇಲ್ಲದೆ ಇದು ಅಪ್ರತಿಷ್ಠವಾಗಿದೆಯೆಂದೂ ಜಗತ್ತಿಗೆ ಈಶ್ವರ ನಿಲ್ಲವೆಂದೂ" ಈ ಆಸುರರು ಹೇಳುತ್ತಾರೆ. ಅಲ್ಲದೆ "ಕಾಮದಿಂದ ಪ್ರೇರಿತರಾದ ಸ್ತ್ರೀಪುರುಷರ ಅನ್ಯೋನ್ಯಸಂಯೋಗದಿಂದ ಪ್ರಾಣಿಗಳು ಹುಟ್ಟಿರುವ ಜಗತ್ತು ಇದು. ಇನ್ನೇನು ?" ಎನ್ನುತ್ತಾರೆ.

**ವಿವರಣೆ :** ಸತ್ಯ–ಅನೃತ, ಧರ್ಮ–ಅಧರ್ಮ, ನಿಯಾಮಕನಾದ ಈಶ್ವರ–ನಿಯಾಮಕನಿಲ್ಲದಿರುವುದು – ಎಂಬ ವಿಭಾಗವನ್ನು ಆಸುರರು ಒಪ್ಪುವುದಿಲ್ಲ ಎನ್ನುವುದು ಪ್ರಕೃತ. ಜಗತ್ತು ಪರಮಾರ್ಥಸತ್ಯವೆ ? ಅಲ್ಲವೆ ? ಎಂಬ ವಿಚಾರವು ಪ್ರಕೃತವಲ್ಲ.

**ಏತಾಂ ದೃಷ್ಟಿಮವಷ್ಟಭ್ಯ ನಷ್ಟಾತ್ಮಾನೋಽಲ್ಪಬುದ್ಧಯಃ ।**
**ಪ್ರಭವಂತ್ಯುಗ್ರಕರ್ಮಾಣಃ ಕ್ಷಯಾಯ ಜಗತೋಽಹಿತಾಃ ॥ ೯**

ಈ ದೃಷ್ಟಿಯನ್ನವಲಂಬಿಸಿದ ಆಸುರಪ್ರಕೃತಿಯವರು ವಿವೇಕವನ್ನು ಕಳೆದು ಕೊಂಡು (ಕ್ಷುದ್ರವಿಷಯಸುಖಕ್ಕಾಗಿ ಬಾಯಿನೀರು ಸುರಿಸುವ) ಕ್ಷುದ್ರಬುದ್ಧಿ ಯವರಾಗಿ ಕ್ರೂರಕರ್ಮಗಳನ್ನು ಮಾಡುತ್ತ ಜನಶತ್ರುಗಳಾಗಿ ಜಗತ್ತಿನ ಕ್ಷಯಕ್ಕಾಗಿ ಹುಟ್ಟುತ್ತಾರೆ.

**ಕಾಮಮಾಶ್ರಿತ್ಯ ದುಷ್ಪೂರಂ ದಂಭಮಾನಮದಾನ್ವಿತಾಃ ।**
**ಮೋಹಾದ್ಗೃಹೀತ್ವಾಽಸದ್ಗ್ರಾಹಾನ್ ಪ್ರವರ್ತಂತೇಽಶುಚಿವ್ರತಾಃ ॥ ೧೦**

ಎಂದಿಗೂ ತೀರದ ಆಸೆಯನ್ನಿಟ್ಟುಕೊಂಡು ದಂಭ, ಮಾನ, ಮದಗಳಿಂದ ಕೂಡಿದ ಈ ಜನರು ವಿವೇಕವಿಲ್ಲದೆ ಕೆಟ್ಟ ಕಲ್ಪನೆಗಳನ್ನು ಕಟ್ಟಿಕೊಂಡು ನೀಚ ಕಾರ್ಯಾಸಕ್ತರಾಗಿ ನಡೆದುಕೊಳ್ಳುತ್ತಾರೆ.

**ಚಿಂತಾಮಪರಿಮೇಯಾಂ ಚ ಪ್ರಲಯಾಂತಾಮುಪಾಶ್ರಿತಾಃ ।**
**ಕಾಮೋಪಭೋಗಪರಮಾ ಏತಾವದಿತಿ ನಿಶ್ಚಿತಾಃ ॥ ೧೧**

ಈ ಅಸುರಪ್ರಕೃತಿಯವರು ಸತ್ತಾಗ ಮಾತ್ರ ಕೊನೆಗಾಣುವ ಲೆಕ್ಕವಿಲ್ಲದಷ್ಟು ಚಿಂತೆಗಳನ್ನು ಹಚ್ಚಿಕೊಂಡಿರುತ್ತಾರೆ. ಇವರು ಕಾಮೋಪಭೋಗಗಳಲ್ಲಿ

ಮುಳುಗಿ (ಪುರುಷಾರ್ಥವೆಂದರೆ ಕಾಮೋಪಭೋಗವೇ) – ಇಷ್ಟೇ ಮನುಷ್ಯನ ಗುರಿ ಎಂದು ನಿಶ್ಚಯಿಸಿಕೊಂಡಿರುತ್ತಾರೆ.

**ಆಶಾಪಾಶಶತೈರ್ಬದ್ಧಾಃ ಕಾಮಕ್ರೋಧಪರಾಯಣಾಃ ।**
**ಈಹಂತೇ ಕಾಮಭೋಗಾರ್ಥಮ್ ಅನ್ಯಾಯೇನಾರ್ಥಸಂಚಯಾನ್ ॥**

ಈ ಜನರು ನೂರಾರು ಆಸೆಗಳ ಬಲೆಗಳಲ್ಲಿ ಸಿಕ್ಕಿಕೊಂಡು, ಕಾಮಕ್ರೋಧಗಳ ತದ್ರೂಪರಾಗಿ, ಕಾಮೋಪಭೋಗಕ್ಕಾಗಿ ದುರ್ಮಾರ್ಗದಿಂದ ಹಣದ ರಾಶಿಗಳನ್ನು ಸಂಗ್ರಹಿಸುವ ಪ್ರಯತ್ನದಲ್ಲಿರುತ್ತಾರೆ.

**ಇದಮದ್ಯ ಮಯಾ ಲಬ್ಧಮಿದಂ ಪ್ರಾಪ್ಸ್ಯೇ ಮನೋರಥಮ್ ।**
**ಇದಮಸ್ತೀದಮಪಿ ಮೇ ಭವಿಷ್ಯತಿ ಪುನರ್ಧನಮ್ ॥** ೧೩

"ಈ ದಿನ ಇದನ್ನು ಗಳಿಸಿದೆನು. (ನಾಳೆ) ಆ ಮನೋರಥವನ್ನೂ ಪಡೆದುಕೊಳ್ಳುವೆನು. ಈಗ ಇಷ್ಟು ಹಣ ಇದೆ. ಇನ್ನೂ ಮತ್ತೆ ಕೆಲವು ಹಣ ಸೇರುವುದು !

**ಅಸೌ ಮಯಾ ಹತಃ ಶತ್ರುರ್ಹನಿಷ್ಯೇ ಚಾಪರಾನಪಿ ।**
**ಈಶ್ವರೋಽಹಮಹಂ ಭೋಗೀ ಸಿದ್ಧೋಽಹಂ ಬಲವಾನ್ ಸುಖೀ ॥** ೧೪

"ಆ ಶತ್ರುವನ್ನು ಕೊಂದೆನು. ಉಳಿದವರನ್ನೂ ಕೊಲ್ಲುವೆನು. ನಾನು ಸ್ವತಂತ್ರನಾದ ಪ್ರಭು. ನಾನು ಭೋಗಿ ; ನಾನು ಸಿದ್ಧಪುರುಷ ; ಬಲಿಷ್ಠ ; ಸುಖವಾಗಿದ್ದೇನೆ.

**ಆಢ್ಯೋಽಭಿಜನವಾನಸ್ಮಿ ಕೋಽನ್ಯೋಽಸ್ತಿ ಸದೃಶೋ ಮಯಾ ।**
**ಯಕ್ಷ್ಯೇ ದಾಸ್ಯಾಮಿ ಮೋದಿಷ್ಯ ಇತ್ಯಜ್ಞಾನವಿಮೋಹಿತಾಃ ॥** ೧೫

ನಾನು ಧನಾಢ್ಯ; ಉತ್ತಮಕುಲದಲ್ಲಿ ಹುಟ್ಟಿದವನು; ನನಗೆ ಸಮನಾದವನು ಯಾವನಿದ್ದಾನೆ ? (ಯಾರೂ ಮಾಡದಂತಹ) ಯಾಗವನ್ನು ಮಾಡುವೆನು ; (ನಟರೇ ಮೊದಲಾದವರಿಗೆ) ಕೊಡುವೆನು ; ಆನಂದಪಡುವೆನು !" ಈ ಪ್ರಕಾರದಲ್ಲಿ ಭ್ರಮೆಯ ಕಲ್ಪನೆಗಳಿಂದ ಮೂಢರಾಗಿರುತ್ತಾರೆ.

**ಅನೇಕಚಿತ್ತವಿಭ್ರಾಂತಾ ಮೋಹಜಾಲಸಮಾವೃತಾಃ ।**
**ಪ್ರಸಕ್ತಾಃ ಕಾಮಭೋಗೇಷು ಪತಂತಿ ನರಕೇಽಶುಚೌ ॥** ೧೬

ಈ ಪ್ರಕಾರದಲ್ಲಿ ನಾನಾಚಿತ್ತಭ್ರಾಂತಿಗೆ ಒಳಗಾದ ಆಸುರಪ್ರಕೃತಿಯುವರು ಮೋಹಜಾಲದಲ್ಲಿ ಸಿಕ್ಕಿ, ಕಾಮಭೋಗಗಳಲ್ಲಿ ಮುಳುಗಿ ಕಡೆಯಲ್ಲಿ

(ವೈತರಣಿಯೇ ಮೊದಲಾದ) ಹೊಲಸು ನರಕದಲ್ಲಿ ಬೀಳುವರು.

**ಆತ್ಮಸಂಭಾವಿತಾಃ ಸ್ತಬ್ಧಾ ಧನಮಾನಮದಾನ್ವಿತಾಃ ।**
**ಯಜಂತೇ ನಾಮಯಜ್ಞೈಸ್ತೇ ದಂಭೇನಾವಿಧಿಪೂರ್ವಕಮ್ ॥ ೧೭**

ತಮ್ಮನ್ನು ತಾವೇ ಹೊಗಳಿಕೊಳ್ಳುತ್ತ ಸೆಟೆದುಹೋಗಿರುವ ಆ ಜನರು ಹಣ, ಮನ್ನಣೆ, ಸೊಕ್ಕುಗಳಿಂದ ಕೂಡಿದವರಾಗಿ ಹೆಸರಿಗೆ ಮಾತ್ರ ಯಜ್ಞಮಾಡುವುದುಂಟು. ಧಾರ್ಮಿಕರ ಸೋಗನ್ನು ಹಾಕಿ ಶಾಸ್ತ್ರವಿಧಿಗಳನ್ನು ಪಾಲಿಸದೆ ಯಜ್ಞ ಮಾಡುತ್ತಾರೆ.

**ಅಹಂಕಾರಂ ಬಲಂ ದರ್ಪಂ ಕಾಮಂ ಕ್ರೋಧಂ ಚ ಸಂಶ್ರಿತಾಃ ।**
**ಮಾಮಾತ್ಮಪರದೇಹೇಷು ಪ್ರದ್ವಿಷಂತೋಽಭ್ಯಸೂಯಕಾಃ ॥ ೧೮**

ಅಹಂಕಾರ, ಬಲ, ದರ್ಪ, ಕಾಮ, ಕ್ರೋಧಗಳಿಂದ ಕೂಡಿದವರಾಗಿ, ತಮ್ಮ ದೇಹದಲ್ಲಿಯೂ ಅನ್ಯರ ದೇಹದಲ್ಲಿಯೂ ನೆಲೆಸಿರುವ (ಪರಮಾತ್ಮನಾದ) ನನ್ನನ್ನೇ ಅಲಕ್ಷಿಸಿ ಅಸೂಯೆಪಡುತ್ತಾರೆ.

**ತಾನಹಂ ದ್ವಿಷತಃ ಕ್ರೂರಾನ್ ಸಂಸಾರೇಷು ನರಾಧಮಾನ್ ।**
**ಕ್ಷಿಪಾಮ್ಯಜಸ್ರಮಶುಭಾನ್ ಆಸುರೀಷ್ವೇವ ಯೋನಿಷು ॥ ೧೯**

ಹೀಗೆ (ಸಾಧುಜನರನ್ನೂ ನನ್ನನ್ನೂ) ದ್ವೇಷಿಸತಕ್ಕ ಕ್ರೂರರೂ ಅಶುಭಕರ್ಮಗಳನ್ನು ನಡೆಸತಕ್ಕವರೂ ಆದ ಆ ನರಾಧಮರನ್ನು ನಾನು ನಿರಂತರವೂ ಸಂಸಾರಮಾರ್ಗದಲ್ಲಿಯೇ ತೊಳಲತಕ್ಕ (ಹುಲಿ, ಸಿಂಹ ಮುಂತಾದ) ಆಸುರ ಯೋನಿಗಳಿಗೇ ತಳ್ಳಿಬಿಡುತ್ತೇನೆ!

**ಆಸುರೀಂ ಯೋನಿಮಾಪನ್ನಾ ಮೂಢಾ ಜನ್ಮನಿ ಜನ್ಮನಿ ।**
**ಮಾಮಪ್ರಾಪ್ಯೈವ ಕೌಂತೇಯ ತತೋ ಯಾಂತ್ಯಧಮಾಂ ಗತಿಮ್ ॥ ೨೦**

ಆಸುರಜನ್ಮವನ್ನು ಪಡೆದ ಆ ಮೂಢರು, ಅರ್ಜುನ, ಜನ್ಮಜನ್ಮಗಳಲ್ಲಿಯೂ ನನ್ನನ್ನು ಪಡೆಯಲಾರದೆ ಕೊನೆಕೊನೆಗೆ ಇನ್ನೂ ಅಧೋಗತಿಗೆ ಇಳಿಯುತ್ತಾರೆ.

**ತ್ರಿವಿಧಂ ನರಕಸ್ಯೇದಂ ದ್ವಾರಂ ನಾಶನಮಾತ್ಮನಃ ।**
**ಕಾಮಃ ಕ್ರೋಧಸ್ತಥಾ ಲೋಭಃ ತಸ್ಮಾದೇತತ್ತ್ರಯಂ ತ್ಯಜೇತ್ ॥ ೨೧**

ಕಾಮ, ಕ್ರೋಧ, ಲೋಭ – ಎಂದು ನರಕಕ್ಕೆ ಮೂರು ಬಗೆಯ ಬಾಗಿಲು ಇದೆ. ಇದು ಆತ್ಮನಾಶಕ್ಕೆ ಕಾರಣ. ಆದ್ದರಿಂದ ಈ ಮೂರನ್ನು ತ್ಯಜಿಸಬೇಕು.

ವಿವರಣೆ : ಆಸುರಸಂಪತ್ತಿನ ಸಂಕ್ಷಿಪ್ತರೂಪವಿದು. ಎಲ್ಲ ಕೇಡುಗಳೂ ಈ

ಕಾಮ, ಕ್ರೋಧ, ಲೋಭಗಳಲ್ಲಿ ಸೇರಿಕೊಂಡಿವೆ.

**ಏತೈರ್ವಿಮುಕ್ತಃ ಕೌಂತೇಯ ತಮೋದ್ವಾರೈಸ್ತ್ರಿಭಿರ್ನರಃ ।**
**ಆಚರತ್ಯಾತ್ಮನಃ ಶ್ರೇಯಸ್ತತೋ ಯಾತಿ ಪರಾಂ ಗತಿಮ್ ॥ ೨೨**

ಕೌಂತೇಯ, ನರಕದ್ವಾರಗಳಾದ ಈ ಮೂರರಿಂದ ಮನುಷ್ಯನು ಬಿಡುಗಡೆ ಹೊಂದಿದರೆ, ಆಗ ತನಗೆ ಶ್ರೇಯಸ್ಸನ್ನು ಮಾಡಿಕೊಳ್ಳುತ್ತಾನೆ. ಅನಂತರ ಉತ್ತಮಗತಿಯನ್ನು ಪಡೆಯುವನು.

**ಯಃ ಶಾಸ್ತ್ರವಿಧಿಮುತ್ಸೃಜ್ಯ ವರ್ತತೇ ಕಾಮಕಾರತಃ ।**
**ನ ಸ ಸಿದ್ಧಿಮವಾಪ್ನೋತಿ ನ ಸುಖಂ ನ ಪರಾಂ ಗತಿಮ್ ॥ ೨೩**

ಯಾವಾತನು ಶಾಸ್ತ್ರವಿಧಿಯನ್ನು ಉಲ್ಲಂಘಿಸಿ ಮನಸ್ಸಿಗೆ ಬಂದಂತೆ ನಡೆದುಕೊಳ್ಳುತ್ತಾನೋ ಅವನು ತಕ್ಕ ಯೋಗ್ಯತೆಯನ್ನು ಪಡೆಯುವುದಿಲ್ಲ. ಅವನಿಗೆ ಇಲ್ಲಿ ಸುಖವೂ ಇಲ್ಲ, (ಪರದಲ್ಲಿ) ಉತ್ತಮಗತಿಯೂ ಇಲ್ಲ.

**ತಸ್ಮಾಚ್ಛಾಸ್ತ್ರಂ ಪ್ರಮಾಣಂ ತೇ ಕಾರ್ಯಾಕಾರ್ಯವ್ಯವಸ್ಥಿತೌ ।**
**ಜ್ಞಾತ್ವಾ ಶಾಸ್ತ್ರವಿಧಾನೋಕ್ತಂ ಕರ್ಮ ಕರ್ತುಮಿಹಾರ್ಹಸಿ ॥ ೨೪**

**ಇತಿ ಶ್ರೀಮದ್ಭಗವದ್ಗೀತಾಸೂಪನಿಷತ್ಸು ಬ್ರಹ್ಮವಿದ್ಯಾಯಾಂ ಯೋಗಶಾಸ್ತ್ರೇ ದೈವಾಸುರಸಂಪದ್ವಿಭಾಗಯೋಗೋ ನಾಮ ಷೋಡಶೋಽಧ್ಯಾಯಃ**

ಆದ್ದರಿಂದ ಇದು ಕಾರ್ಯ – ಇದು ಅಕಾರ್ಯ ಎಂದು ವ್ಯವಸ್ಥೆ ಮಾಡುವುದಕ್ಕೆ ಶಾಸ್ತ್ರವೇ ನಿನಗೆ ಪ್ರಮಾಣವಾದದ್ದು. ಶಾಸ್ತ್ರವಿಧಿಯಲ್ಲಿ ಹೇಳಿದ್ದನ್ನು ಸರಿಯಾಗಿ ನೀನು ತಿಳಿದುಕೊಂಡು ಕರ್ಮವನ್ನು ಮಾಡುವುದು ಇಲ್ಲಿ ಯುಕ್ತವಾಗಿದೆ.

**ವಿವರಣೆ :** ಇಹ (ಇಲ್ಲಿ) – ಎಂದು ಹೇಳಿರುವುದು ಕರ್ಮಾಧಿಕಾರದ ಸ್ಥಾನವನ್ನು ನಿರ್ದೇಶಿಸುವುದಕ್ಕೆ. 'ಅರ್ಜುನ, ನಿನ್ನ ಸ್ಥಾನವು ಕರ್ಮಾಧಿಕಾರದಲ್ಲಾದ್ದರಿಂದ ಸ್ವಕರ್ಮವನ್ನು ಮಾಡುತ್ತಿರು' ಎಂದು ಅಭಿಪ್ರಾಯ.

**ಇಲ್ಲಿಗೆ ಶ್ರೀಮದ್ಭಗವದ್ಗೀತೆಯಲ್ಲಿ ದೈವಾಸುರಸಂಪದ್ವಿಭಾಗಯೋಗವೆಂಬ ಹದಿನಾರನೆಯ ಅಧ್ಯಾಯವು ಸಮಾಪ್ತವಾಯಿತು.**

# ೧೬ನೆಯ ಅಧ್ಯಾಯದ ಸಾರ

ಭಗವಂತನಿಂತೆಂದನು : ಮಾನವಸ್ವಭಾವವು ದೈವೀಸಂಪತ್, ಆಸುರೀಸಂಪತ್ – ಎಂದು ಮುಖ್ಯವಾಗಿ ಎರಡು ವಿಧವಾಗಿರುತ್ತದೆ. ದೈವೀಸಂಪತ್ತು ಮೋಕ್ಷಕ್ಕೂ ಆಸುರೀಸಂಪತ್ತು ಸಂಸಾರಬಂಧನಕ್ಕೂ ಕಾರಣವಾದದ್ದು.

ಅಂತಃಕರಣಶುದ್ಧಿ, ದಾನ, ದಮ, ವೇದಾಧ್ಯಯನ, ತಪಸ್ಸು, ಅಹಿಂಸೆ, ಸತ್ಯ, ಅಕ್ರೋಧ, ಮೃದುತ್ವ, ಕ್ಷಮೆ, ಧೈರ್ಯ, ಅದ್ರೋಹ, ಅಭಿಮಾನರಾಹಿತ್ಯ – ಇವೆಲ್ಲವೂ ದೈವಸಂಪತ್ತಿಗೆ ಸೇರಿದವನಲ್ಲಿ ಕಾಣಿಸಿಕೊಳ್ಳುತ್ತವೆ. ಆಸುರ ಸಂಪತ್ತಿನವರ ಸ್ವಭಾವ ಇದಕ್ಕೆ ವಿರುದ್ಧವಾದದ್ದು. ಈ ಆಸುರಸಂಪತ್ತಿನವರಲ್ಲಿ ಮೊದಲನೆಯದಾಗಿ ಶುಚಿತ್ವವೇ ಇರುವುದಿಲ್ಲ. ವಿಚಾರಶಕ್ತಿ ಕುಂಠಿತ ವಾಗಿರುತ್ತದೆ. ಸತ್ಯವನ್ನಿವರು ಮನ್ನಿಸುವುದಿಲ್ಲ. ಜಗತ್ತೇ ಸುಳ್ಳಿನ ಕೊಂಪೆ, ನಾವೇಕೆ ಸತ್ಯವನ್ನು ನುಡಿಯಬೇಕು ? ಎನ್ನುತ್ತಾರೆ. ಧರ್ಮವನ್ನೂ ಈಶ್ವರನನ್ನೂ ಇವರು ನಂಬುವುದಿಲ್ಲ. ಪ್ರಾಣಿಗಳು ಕಾಮದಿಂದ ಹುಟ್ಟಿವೆಯೇ ಹೊರತು ಅವರವರು ಮಾಡಿದ ಕರ್ಮದಿಂದಲ್ಲ – ಎನ್ನುತ್ತಾರೆ. ಕಾಮವೇ ಅವರಿಗೆ ಮುಖ್ಯ ಪುರುಷಾರ್ಥ. ನೂರಾರು ಆಸೆಗಳಿಗೆ ಇವರು ವಶರಾಗಿರುತ್ತಾರೆ. ಸದಾ ಹಣವನ್ನೂ ಅದರಿಂದಾಗಬಹುದಾದ ಸುಖವನ್ನೂ ಆಸುರ ಸಂಪತ್ತಿನವರು ಚಿಂತಿಸುತ್ತಾರೆ. "ಈ ಧನ ನನಗೆ ಸಿಕ್ಕಿದೆ. ಇನ್ನೊಂದು ಬರಬೇಕಾಗಿದೆ. ಅದಕ್ಕಾಗಿ ಯತ್ನಿಸುತ್ತೇನೆ. ಈಗ ಇಷ್ಟಂತೂ ಇದೆ" ಈ ಬಗೆಯ ಲೆಕ್ಕಾಚಾರದಲ್ಲಿಯೇ ಇವರು ಮುಳುಗಿಹೋಗಿರುತ್ತಾರೆ. ನಾನು ಇವರನ್ನು ಗೆದ್ದೆನು, ಇನ್ನು ಇವರನ್ನು ಗೆಲ್ಲಬೇಕು, ನಾನು ಎಲ್ಲರನ್ನೂ ಆಳುತ್ತೇನೆ, ನಾನು ಬಲಶಾಲಿ, ನಾನು ಸುಖಿ, ನನಗೆ ಸಮಾನರು ಯಾರಿದ್ದಾರೆ ? – ಎಂದು ಬೀಗುತ್ತ ತಮ್ಮನ್ನು ತಾವೇ ಹೊಗಳಿಕೊಳ್ಳುತ್ತಾ ಭೋಗಚಿಂತನೆಯಲ್ಲಿಯೇ ತಲ್ಲೀನರಾಗಿರುತ್ತಾರೆ. ಅವರು ಮಾಡುವ ದಾನಾದಿಕರ್ಮಗಳು ಜನರಿಂದ ಹೊಗಳಿಸಿಕೊಳ್ಳುವುದಕ್ಕಾಗಿಯೇ ಹೊರತು ಧರ್ಮದೃಷ್ಟಿಯಿಂದಲ್ಲ. ಅಹಂಕಾರ, ಬಲ, ದರ್ಪ, ಕಾಮ, ಕ್ರೋಧಗಳಿಗೆ ನೆಲೆಮನೆಯಾಗಿರುವ ಇವರು ದುರ್ಗತಿಯನ್ನೇ ಪಡೆಯುತ್ತಾರೆ. ಇವರನ್ನು ನಾನು ಆಸುರಜನ್ಮಗಳಿಗೇ ತಳ್ಳುವೆನು.

ಕಾಮ, ಕ್ರೋಧ, ಲೋಭ – ಇವು ಮೂರು ನರಕಕ್ಕೆ ಕಾರಣವಾದವು. ಆಸುರಸಂಪತ್ತಿನ ಮೂಲವು ಈ ಮೂರರಲ್ಲಿದೆ. ವಿವೇಕಿಯಾದವನು ಇವನ್ನು

ಪೂರ್ತಿಯಾಗಿ ತ್ಯಜಿಸಿ ದೈವಸಂಪತ್ತನ್ನು ಗಳಿಸಿಕೊಳ್ಳಲು ಪ್ರಯತ್ನಿಸಬೇಕು. ಅರ್ಜುನ, ನೀನು ದೈವಸಂಪತ್ತನ್ನು ಪಡೆದವನು; ಚಿಂತಿಸಬೇಡ.

ಯಾವುದನ್ನು ಮಾಡಬೇಕು ? ಯಾವುದನ್ನು ಮಾಡಬಾರದು – ಎಂಬುದಕ್ಕೆ ಶಾಸ್ತ್ರವೇ ಪ್ರಮಾಣ. ಯಾರು ಶಾಸ್ತ್ರವಿಧಿಯನ್ನುಲ್ಲಂಘಿಸಿ ತಮಗೆ ತೋರಿದಂತೆ ನಡೆದುಕೊಳ್ಳುತ್ತಾರೋ ಅವರಿಗೆ ಇಲ್ಲಿಯೂ ಸುಖವಿಲ್ಲ. ಮರಣಾನಂತರ ಸದ್ಗತಿಯೂ ಇಲ್ಲ. ಅರ್ಜುನ, ನೀನು ಇದೆಲ್ಲವನ್ನೂ ಆಲೋಚಿಸಿ ಶಾಸ್ತ್ರ ವಿಧಿಯಂತೆ ನಡೆದುಕೊ.

# ಅಧ್ಯಾಯ ೧೭

# ಶ್ರದ್ಧಾತ್ರಯವಿಭಾಗಯೋಗ

'ತಸ್ಮಾಚ್ಛಾಸ್ತ್ರಂ ಪ್ರಮಾಣಂ ತೇ' (೧೬–೨೪) ಎಂದು ಶ್ರೀಕೃಷ್ಣನು ಹೇಳಿದನಷ್ಟೆ. ಆಗ ಒಂದು ಪ್ರಶ್ನೆಗೆ ಅವಕಾಶ ಸಿಕ್ಕಿದ್ದರಿಂದ ಅರ್ಜುನನು ಕೇಳುತ್ತಾನೆ.

**ಅರ್ಜುನ ಉವಾಚ –**

**ಯೇ ಶಾಸ್ತ್ರವಿಧಿಮುತ್ಸೃಜ್ಯ ಯಜಂತೇ ಶ್ರದ್ಧಯಾಽನ್ವಿತಾಃ ।**
**ತೇಷಾಂ ನಿಷ್ಠಾ ತು ಕಾ ಕೃಷ್ಣ ಸತ್ತ್ವಮಾಹೋ ರಜಸ್ತಮಃ ॥ ೧**

**ಅರ್ಜುನನು ಇಂತೆಂದನು –** ಶ್ರೀಕೃಷ್ಣ, ಕೆಲವರು (ಗೊತ್ತಿಲ್ಲದ್ದರಿಂದ) ಶಾಸ್ತ್ರವಿಧಿಯನ್ನು ಕೈಬಿಟ್ಟು (ಆಸ್ತಿಕರಾದ್ದರಿಂದ) ಶ್ರದ್ಧೆಯಿಂದಲೇ ದೇವಾದಿಗಳನ್ನು ಅರ್ಚಿಸುತ್ತಾರೆ. ಆ ಸಂದರ್ಭದಲ್ಲಿ ಅವರ ನಿಷ್ಠೆ (ಮಾನಸಸ್ಥಿತಿ) ಎಂತಹದು ? ಸತ್ತ್ವವೊ, ರಜಸ್ಸೊ ಅಥವಾ ತಮಸ್ಸೊ ?

**ವಿವರಣೆ :** ಶಾಸ್ತ್ರವು ತಿಳಿಯದ್ದರಿಂದ ಕೆಲವು ಭಾವುಕರು ಭಕ್ತಿಯಿಂದಲೇ ದೇವತೆಗಳನ್ನು ಪೂಜಿಸುವುದುಂಟು. ಅವರ ಪೂಜೆ ಸಾತ್ತ್ವಿಕವೊ, ರಾಜಸವೊ ಅಥವಾ ತಾಮಸವೊ ? ಎಂದು ಪ್ರಶ್ನೆ. ಶಾಸ್ತ್ರಜ್ಞರನ್ನು ಬಿಟ್ಟು ಯಾಗಕ್ಕೆ ಕೈಹಾಕಲು ಸಾಧ್ಯವೇ ಇಲ್ಲವಾದ್ದರಿಂದ 'ಯಜಂತೇ' ಎಂಬುದಕ್ಕೆ ದೇವತಾಪೂಜೆಯೆಂಬ ಸಾಮಾನ್ಯಾರ್ಥವನ್ನು ಇಲ್ಲಿ ಸ್ವೀಕರಿಸಿದೆ.

**ಶ್ರೀಭಗವಾನುವಾಚ –**

**ತ್ರಿವಿಧಾ ಭವತಿ ಶ್ರದ್ಧಾ ದೇಹಿನಾಂ ಸಾ ಸ್ವಭಾವಜಾ ।**
**ಸಾತ್ತ್ವಿಕೀ ರಾಜಸೀ ಚೈವ ತಾಮಸೀ ಚೇತಿ ತಾಂ ಶೃಣು ॥ ೨**

ಮನುಷ್ಯರಿಗೆ ಸ್ವಭಾವಜನ್ಯವಾದ ಶ್ರದ್ಧೆಯು ಸಾತ್ತ್ವಿಕೀ, ರಾಜಸೀ, ತಾಮಸೀ ಎಂದು ಮೂರು ಪ್ರಕಾರವಾಗಿರುತ್ತದೆ. ಅದರ ವಿಷಯವನ್ನು ಹೇಳುತ್ತೇನೆ, ಕೇಳು.

**ವಿವರಣೆ :** ಹಿಂದಿನ ಜನ್ಮದಲ್ಲಿ ಮಾಡಿದ ಧರ್ಮಾಧರ್ಮಾದಿಸಂಸ್ಕಾರವು ಈ ಜನ್ಮದಲ್ಲಿ ಅಭಿವ್ಯಕ್ತವಾದಾಗ ಸ್ವಭಾವವೆನಿಸುತ್ತದೆ. ಅರ್ಜುನನು ಕೇಳಿದ ಸಾಮಾನ್ಯ ಪ್ರಶ್ನೆಯನ್ನು ಬೇರೆ ಬೇರೆ ವಿಂಗಡಿಸಿಕೊಂಡು ಶ್ರೀಕೃಷ್ಣನು ಉತ್ತರವನ್ನು ಹೇಳುತ್ತಾನೆ.

**ಸತ್ತ್ವಾನುರೂಪಾ ಸರ್ವಸ್ಯ ಶ್ರದ್ಧಾ ಭವತಿ ಭಾರತ ।**
**ಶ್ರದ್ಧಾಮಯೋಽಯಂ ಪುರುಷೋ ಯೋ ಯಚ್ಛ್ರದ್ಧಃ ಸ ಏವ ಸಃ ॥ ३**

ಅರ್ಜುನ, ಪ್ರತಿಯೊಬ್ಬನ ಶ್ರದ್ಧೆಯೂ ಅವನವನ ಸ್ವಭಾವಕ್ಕೆ ಅನುರೂಪವಾಗಿರುತ್ತದೆ. ಈ ಜೀವನು ಶ್ರದ್ಧಾಮಯನಾದವನು. ಯಾವನಿಗೆ ಯಾವ ಬಗೆಯ ಶ್ರದ್ಧೆಯಿರುತ್ತದೆಯೋ ಅವನು ಆ ಶ್ರದ್ಧೆಗೆ ಅನುರೂಪವಾಗಿ ವರ್ತಿಸತಕ್ಕವನು.

**ಟಿಪ್ಪಣಿ :** ಈ ಶ್ಲೋಕದಲ್ಲಿ ಸತ್ತ್ವವೆಂದರೆ ಸ್ವಭಾವವೆಂದರ್ಥ.

**ಯಜಂತೇ ಸಾತ್ತ್ವಿಕಾ ದೇವಾನ್ ಯಕ್ಷರಕ್ಷಾಂಸಿ ರಾಜಸಾಃ ।**
**ಭೂತಾನ್ ಪ್ರೇತಗಣಾಂಶ್ಚಾನ್ಯೇ ಯಜಂತೇ ತಾಮಸಾ ಜನಾಃ ॥ ೪**

ಸಾತ್ತ್ವಿಕರು ದೇವತೆಗಳನ್ನು ಪೂಜಿಸುತ್ತಾರೆ. ರಾಜಸರು ಯಕ್ಷರನ್ನೂ ರಾಕ್ಷಸರನ್ನೂ ಪೂಜಿಸುತ್ತಾರೆ. ಉಳಿದ ತಾಮಸಜನರು ಭೂತಗಣಗಳನ್ನೂ ಪ್ರೇತಗಳನ್ನೂ ಪೂಜಿಸುತ್ತಾರೆ.

**ಅಶಾಸ್ತ್ರವಿಹಿತಂ ಘೋರಂ ತಪ್ಯಂತೇ ಯೇ ತಪೋ ಜನಾಃ ।**
**ದಂಭಾಹಂಕಾರಸಂಯುಕ್ತಾಃ ಕಾಮರಾಗಬಲಾನ್ವಿತಾಃ ॥ ೫**

ಯಾವ ಜನರು ತಮ್ಮಲ್ಲಿ ಹೆಚ್ಚುಗಾರಿಕೆ ಕಾಣಲೆಂಬ ದಂಭದಿಂದಲೂ ಅಹಂಕಾರದಿಂದಲೂ ಕೂಡಿದವರಾಗಿ, ದುರಾಸೆ ಮತ್ತು ವಿಷಯಾನುರಾಗದ ಬಲದಿಂದ ಕೂಡಿ, ಶಾಸ್ತ್ರವಿಹಿತವಲ್ಲದ (ಪ್ರಾಣಿಗಳಿಗೂ ತನಗೂ ಹಿಂಸೆಯನ್ನುಂಟುಮಾಡುವ) ಘೋರವಾದ ತಪಸ್ಸನ್ನು ಆಚರಿಸುತ್ತಾರೋ–

**ಕರ್ಷಯಂತಃ ಶರೀರಸ್ಥಂ ಭೂತಗ್ರಾಮಮಚೇತಸಃ ।**
**ಮಾಂ ಚೈವಾಂತಃಶರೀರಸ್ಥಂ ತಾನ್ವಿದ್ಧ್ಯಾಸುರನಿಶ್ಚಯಾನ್ ॥ ೬**

ಮತ್ತು ಯಾರು ಶರೀರದಲ್ಲಿರುವ ಇಂದ್ರಿಯಗಳನ್ನು ಅವಿವೇಕಿಗಳಾಗಿ ಕೃಶಗೊಳಿಸುತ್ತ, ಹೃದಯಸ್ಥನಾದ ನನ್ನನ್ನೂ ಕೃಶಗೊಳಿಸುತ್ತಲೇ ತಪಸ್ಸನ್ನು ಆಚರಿಸುತ್ತಾರೋ ಅವರು ಆಸುರನಿಶ್ಚಯವುಳ್ಳವರೆಂದು ತಿಳಿದುಕೊ.

**ವಿವರಣೆ :** ಹೃದಯಸ್ಥನಾದ ನನ್ನನ್ನು ಕೃಶಗೊಳಿಸುವುದೆಂದರೆ–ನನ್ನ ಆಜ್ಞೆಯಾದ ಶ್ರುತಿಸ್ಮೃತಿಗಳನ್ನು ಉಲ್ಲಂಘಿಸುವುದು.

**ಆಹಾರಸ್ತ್ವಪಿ ಸರ್ವಸ್ಯ ತ್ರಿವಿಧೋ ಭವತಿ ಪ್ರಿಯಃ ।**
**ಯಜ್ಞಸ್ತಪಸ್ತಥಾ ದಾನಂ ತೇಷಾಂ ಭೇದಮಿಮಂ ಶೃಣು ॥ ೭**

ಪ್ರತಿಯೊಬ್ಬನಿಗೂ ಪ್ರಿಯವಾದ ಆಹಾರವೂ ಮೂರು ವಿಧವಾಗಿರುತ್ತದೆ. ಮತ್ತು ಯಜ್ಞ, ತಪಸ್ಸು ಹಾಗೂ ದಾನ – ಇವೂ ಮೂರು ಬಗೆಯಾಗಿರುತ್ತವೆ. ಅವುಗಳ ಭೇದವನ್ನು ಕೇಳು.

**ವಿವರಣೆ :** ಸಾತ್ತ್ವಿಕವಾದ ಆಹಾರಗಳನ್ನೇ ಸ್ವೀಕರಿಸಬೇಕೆಂದು ಬೋಧಿಸುವುದಕ್ಕಾಗಿ ಅವುಗಳಲ್ಲಿರುವ ಮೂರು ಭೇದಗಳನ್ನು ಇಲ್ಲಿ ಹೇಳಲಾಗುತ್ತದೆ.

**ಆಯುಸ್ಸತ್ತ್ವಬಲಾರೋಗ್ಯಸುಖಪ್ರೀತಿವಿವರ್ಧನಾಃ ।**
**ರಸ್ಯಾಃ ಸ್ನಿಗ್ಧಾಃ ಸ್ಥಿರಾ ಹೃದ್ಯಾ ಆಹಾರಾಃ ಸಾತ್ತ್ವಿಕಪ್ರಿಯಾಃ ॥ ೮**

ಆಯುಸ್ಸು, ಸಾತ್ತ್ವಿಕಚಿತ್ತವೃತ್ತಿ, ಬಲ, ಆರೋಗ್ಯ, ಸುಖ, ಸಂತೋಷಗಳನ್ನು ಹೆಚ್ಚಿಸತಕ್ಕವೂ ರುಚಿಕರವೂ ಜಿಡ್ಡಿನಿಂದ ಕೂಡಿದ್ದೂ, (ಬೇಗನೆ ಹಸಿವನ್ನುಂಟು ಮಾಡದೆ) ಗಟ್ಟಿಯಾಗಿ ಉಳಿಯತಕ್ಕದ್ದೂ ಮನಸ್ಸಿಗೆ ಮೆಚ್ಚುಗೆಯಾಗುವಂತಹದೂ ಆದ ಆಹಾರಗಳು ಸಾತ್ತ್ವಿಕ ಜನರಿಗೆ ಪ್ರಿಯವಾಗಿರುತ್ತವೆ.

**ಕಟ್ವಮ್ಲಲವಣಾತ್ಯುಷ್ಣತೀಕ್ಷ್ಣರೂಕ್ಷವಿದಾಹಿನಃ ।**
**ಆಹಾರಾ ರಾಜಸಸ್ಯೇಷ್ಟಾ ದುಃಖಶೋಕಾಮಯಪ್ರದಾಃ ॥ ೯**

ಅತಿಯಾದ ಖಾರ, ಹುಳಿ, ಉಪ್ಪು, ಬಿಸಿ, ದೇಹಕ್ಕೆ ತಾಪವನ್ನುಂಟುಮಾಡುವ ತೀಕ್ಷ್ಣ, ಹುರಿದು ಒರಟಾದ ನಾಲಿಗೆಗೆ ಮತ್ತು ಹೊಟ್ಟೆಯೊಳಗೆ ಉರಿಯನ್ನುಂಟುಮಾಡುವ ಸಾಸಿವೆ – ಮೊದಲಾದ ಆಹಾರಗಳು ರಾಜಸಗುಣದವನಿಗೆ ಇಷ್ಟವಾಗುತ್ತವೆ. ಇವು ಕೂಡಲೆ ದೇಹಕ್ಕೆ ಪೀಡೆಯೆಂಬ ದುಃಖವನ್ನೂ ಕಾಲಾಂತರದಲ್ಲಿ ಶೋಕವನ್ನೂ ರೋಗವನ್ನೂ ಉಂಟುಮಾಡತಕ್ಕವು (ಅತಿಯಾದ ಎಂಬುದು ಖಾರ, ಹುಳಿ – ಮೊದಲಾದ ಎಲ್ಲಕ್ಕೂ ವಿಶೇಷಣ).

**ಯಾತಯಾಮಂ ಗತರಸಂ ಪೂತಿ ಪರ್ಯುಷಿತಂ ಚ ಯತ್ ।**
**ಉಚ್ಛಿಷ್ಟಮಪಿ ಚಾಮೇಧ್ಯಂ ಭೋಜನಂ ತಾಮಸಪ್ರಿಯಮ್ ॥ ೧೦**

ಅರೆಬೆಂದದ್ದು, ಕಾಲಾತಿಕ್ರಮದಿಂದ ರುಚಿಕೆಟ್ಟಿರುವುದು, ದುರ್ಗಂಧಯುಕ್ತವಾದದ್ದು, ಒಂದು ರಾತ್ರಿ ಕಳೆದು ಹಳಸಿದ್ದು, ತಿಂದುಬಿಟ್ಟ ಎಂಜಲು ಮತ್ತು ಸ್ಪರ್ಶಾದಿಗಳಿಂದ ಅಶುಚಿಯಾದದ್ದು – ಇಂತಹ ಆಹಾರವು ತಾಮಸಗುಣದವರಿಗೆ ಪ್ರಿಯವಾಗುತ್ತದೆ.

**ವಿವರಣೆ :** ಯಾತಯಾಮ – ಎಂಬುದಕ್ಕೆ ಅಡಿಗೆ ಮಾಡಿ ಒಂದು ಯಾಮ ಕಾಲ ಕಳೆದದ್ದು ಎಂಬ ಅರ್ಥವೇನೋ ಆಗುತ್ತದೆ. ಒಂದು ಯಾಮ ಕಳೆದ

ಮಾತ್ರದಿಂದ ಆಹಾರವು ದುಷ್ಟವೆಂದು ಯಾವ ಶಿಷ್ಟರೂ ತಿಳಿದದ್ದು ಕಾಣುವುದಿಲ್ಲ. ಇನ್ನೂ ದೀರ್ಘಕಾಲ ಕಳೆದದ್ದಾದರೆ ಗತರಸ, ಪರ್ಯುಷಿತ – ಎಂಬುದರಿಂದಲೇ ಗತಾರ್ಥವಾಗುತ್ತದೆ. ಆದ್ದರಿಂದ ಯಾಮ = ಅಡಿಗೆಯ ನಿಯಮ, ಅದನ್ನು ಪಾಲಿಸದೇ ಇದ್ದರೆ ಆಗ ಅಡಿಗೆ ಯಾತಯಾಮ ಎಂದು ಅರ್ಥಮಾಡಿ 'ಅರೆಬೆಂದದ್ದು' – ಎಂದು ಹೇಳಿದೆ.

**ಅಫಲಾಕಾಂಕ್ಷಿಭಿರ್ಯಜ್ಞೋ ವಿಧಿದೃಷ್ಟೋ ಯ ಇಜ್ಯತೇ ।**
**ಯಷ್ಟವ್ಯಮೇವೇತಿ ಮನಃ ಸಮಾಧಾಯ ಸ ಸಾತ್ತ್ವಿಕಃ ॥ ೧೧**

'ಯಜ್ಞ ಮಾಡುವುದು ಕರ್ತವ್ಯ' ಎಂದಿಷ್ಟೇ ತಿಳಿದು ಫಲವನ್ನು ಬಯಸದೆ ಇರತಕ್ಕವರು ಶಾಸ್ತ್ರವಿಧಿಗೆ ಅನುಸಾರವಾಗಿ ಮನಸ್ಸಿಟ್ಟು ಮಾಡತಕ್ಕ ಯಾವ ಯಜ್ಞ ಉಂಟೋ ಅದು ಸಾತ್ತ್ವಿಕವೆನಿಸುತ್ತದೆ.

**ಅಭಿಸಂಧಾಯ ತು ಫಲಂ ದಂಭಾರ್ಥಮಪಿ ಚೈವ ಯತ್ ।**
**ಇಜ್ಯತೇ ಭರತಶ್ರೇಷ್ಠ ತಂ ಯಜ್ಞಂ ವಿದ್ಧಿ ರಾಜಸಮ್ ॥ ೧೨**

ಫಲವನ್ನು ಬಯಸಿಯಾಗಲಿ ಅಥವಾ ತನ್ನ ಜಂಬವನ್ನು ಮೆರೆಸುವುದಕ್ಕಾಗಲಿ ಆಚರಿಸುವ ಯಾವ ಯಜ್ಞವುಂಟೋ, ಹೇ ಭರತಶ್ರೇಷ್ಠ, ಅದನ್ನು (ವಿಧಿ ಪೂರ್ವಕವಾಗಿದ್ದರೂ) ರಾಜಸಯಜ್ಞವೆಂದು ತಿಳಿ.

**ವಿಧಿಹೀನಮಸೃಷ್ಟಾನ್ನಂ ಮಂತ್ರಹೀನಮದಕ್ಷಿಣಮ್ ।**
**ಶ್ರದ್ಧಾವಿರಹಿತಂ ಯಜ್ಞಂ ತಾಮಸಂ ಪರಿಚಕ್ಷತೇ ॥ ೧೩**

ಶಾಸ್ತ್ರವಿಧಿಯನ್ನು ಬಿಟ್ಟು, ಅನ್ನಸಂತರ್ಪಣವಿಲ್ಲದೆ, ಶುದ್ಧವಾಗಿ ಮಂತ್ರ ವನ್ನುಚ್ಚರಿಸದೆ, ದಾನದಕ್ಷಿಣೆಗಳನ್ನು ಸರಿಯಾಗಿ ಕೊಡದೆ, ಶ್ರದ್ಧಾರಹಿತವಾಗಿ ಮಾಡತಕ್ಕ ಯಜ್ಞವನ್ನು ತಾಮಸವೆಂದು ಹೇಳುತ್ತಾರೆ.

**ದೇವದ್ವಿಜಗುರುಪ್ರಾಜ್ಞಪೂಜನಂ ಶೌಚಮಾರ್ಜವಮ್ ।**
**ಬ್ರಹ್ಮಚರ್ಯಮಹಿಂಸಾ ಚ ಶಾರೀರಂ ತಪ ಉಚ್ಯತೇ ॥ ೧೪**

ದೇವ, ಬ್ರಾಹ್ಮಣ, ಗುರು, ವಿದ್ವಾಂಸರು – ಇವರ ಪೂಜನ, ಶುಚಿತ್ವ, ಸರಳತೆ, ಬ್ರಹ್ಮಚರ್ಯ, ಅಹಿಂಸೆ – ಇವಕ್ಕೆ ಕಾಯಿಕ ತಪಸ್ಸು ಎಂದು ಹೆಸರು.

**ಅನುದ್ವೇಗಕರಂ ವಾಕ್ಯಂ ಸತ್ಯಂ ಪ್ರಿಯಹಿತಂ ಚ ಯತ್ ।**
**ಸ್ವಾಧ್ಯಾಯಾಭ್ಯಸನಂ ಚೈವ ವಾಙ್ಮಯಂ ತಪ ಉಚ್ಯತೇ ॥ ೧೫**

ಜನರ ಮನಸ್ಸಿಗೆ ಖೇದವನ್ನುಂಟುಮಾಡದಿರುವ (ಸೌಮ್ಯವಾದ), ಸತ್ಯವೂ

ಪ್ರೀತಿಜನಕವೂ ಹಿತಕರವೂ ಆದ ಮಾತನ್ನಾಡುವುದು, ವಿಧಿವತ್ತಾಗಿ ವೇದ ಶಾಸ್ತ್ರಾಧ್ಯಯನ– ಇದು ವಾಙ್ಮಯತಪಸ್ಸು ಎನಿಸಿಕೊಳ್ಳುತ್ತದೆ.

**ವಿವರಣೆ :** ಅನುದ್ವೇಗಕರವಾದ ವಾಕ್ಯವು ಸತ್ಯವೂ ಪ್ರಿಯವೂ ಹಿತಕರವೂ ಆಗಿರಬೇಕು. ಅವುಗಳಲ್ಲಿ ಯಾವುದೊಂದಲ್ಲದಿದ್ದರೂ ನ್ಯೂನವಾಗುತ್ತದೆ. ಆಗ ವಾಙ್ಮಯತಪಸ್ಸಾಗುವುದಿಲ್ಲ.

**ಮನಃಪ್ರಸಾದಃ ಸೌಮ್ಯತ್ವಂ ಮೌನಮಾತ್ಮವಿನಿಗ್ರಹಃ ।**
**ಭಾವಸಂಶುದ್ಧಿರಿತ್ಯೇತತ್ತಪೋ ಮಾನಸಮುಚ್ಯತೇ ॥** ೧೬

ಮನಶ್ಶಾಂತಿ, ಅನ್ಯರ ವಿಷಯದಲ್ಲಿ ಸೌಮನಸ್ಯ, ಮಾತಾಡುವ ಚಾಪಲ್ಯದ ನಿಗ್ರಹ, (ಅನ್ಯವಿಚಾರದಲ್ಲಿಯೂ) ಮನೋನಿಗ್ರಹ, ವ್ಯವಹಾರದಲ್ಲಿ ಭಾವಶುದ್ಧಿ – ಇದು ಮಾನಸತಪಸ್ಸು ಎನಿಸಿಕೊಳ್ಳುತ್ತದೆ.

ಈ ಮೂರು ಬಗೆಯ ತಪಸ್ಸೂ ಸತ್ತ್ವಾದಿಗುಣಭೇದದಿಂದ ಮೂರು ಬಗೆಯಾಗುತ್ತದೆ–

**ಶ್ರದ್ಧಯಾ ಪರಯಾ ತಪ್ತಂ ತಪಸ್ತತ್ತ್ರಿವಿಧಂ ನರೈಃ ।**
**ಅಫಲಾಕಾಂಕ್ಷಿಭಿರ್ಯುಕ್ತೈಃ ಸಾತ್ತ್ವಿಕಂ ಪರಿಚಕ್ಷತೇ ॥** ೧೭

ಈ ಮೂರು ಬಗೆಯಾದ (ಕಾಯಿಕ, ವಾಚಿಕ, ಮಾನಸಿಕ) ತಪಸ್ಸನ್ನೂ ಜನರು ಫಲಾಕಾಂಕ್ಷೆಯಿಲ್ಲದೆ ಪರಮಶ್ರದ್ಧೆಯಿಂದ ಆಚರಿಸುತ್ತಿದ್ದರೆ ಆ ತಪಸ್ಸನ್ನು ಸಾತ್ತ್ವಿಕವೆಂದು ಶಿಷ್ಟರು ಹೇಳುತ್ತಾರೆ.

**ಸತ್ಕಾರಮಾನಪೂಜಾರ್ಥಂ ತಪೋ ದಂಭೇನ ಚೈವ ಯತ್ ।**
**ಕ್ರಿಯತೇ ತದಿಹ ಪ್ರೋಕ್ತಂ ರಾಜಸಂ ಚಲಮಧ್ರುವಮ್ ॥** ೧೮

ಜನರಿಂದ ಮೆಚ್ಚುಗೆ ಮನ್ನಣೆ ಪೂಜೆಗಳನ್ನು ಪಡೆಯುವುದಕ್ಕಾಗಿ ಡಂಭಾಚಾರದಿಂದ ಮಾಡುವ ತಪಸ್ಸು ರಾಜಸವೆನಿಸುತ್ತದೆ. ಅದು ಯಾವಾಗಲೋ ಸ್ವಲ್ಪ ಫಲವನ್ನು ಕೊಡಬಹುದಾದ್ದರಿಂದ ಚಲವಾದದ್ದು, ಶಾಶ್ವತವಲ್ಲ.

**ಮೂಢಗ್ರಾಹೇಣಾತ್ಮನೋ ಯತ್ ಪೀಡಯಾ ಕ್ರಿಯತೇ ತಪಃ ।**
**ಪರಸ್ಯೋತ್ಸಾದನಾರ್ಥಂ ವಾ ತತ್ತಾಮಸಮುದಾಹೃತಮ್ ॥** ೧೯

ಮೌಢ್ಯದ ಅವಿವೇಕದಿಂದ ತನಗೆ ಪೀಡೆಯುನ್ನುಂಟುಮಾಡುವ ತಪಸ್ಸು, ಅಥವಾ ಅನ್ಯರನ್ನು ಹಾಳುಮಾಡುವುದಕ್ಕಾಗಿ ಮಾಡುವ (ಮಾರಣ ಮುಂತಾದ)

ತಪಸ್ಸು ತಾಮಸವೆಂದು ಉಕ್ತವಾಗಿದೆ.

**ವಿವರಣೆ :** ಶಾಸ್ತ್ರದಲ್ಲಿ ಅನುಕ್ತವಾದ ಫಲಕ್ಕಾಗಿ ತಾನೇ ಊಹಿಸಿಕೊಂಡು ತಪ್ಪು ವಿಧಾನದಿಂದ ಮಾಡುವ ತಪಸ್ಸು ಮೊದಲನೆಯದು. ಉದಾ: ಶಂಬೂಕನು ಸಶರೀರ ಸ್ವರ್ಗಕ್ಕಾಗಿ ಮರದಿಂದ ತಲೆಕೆಳಗಾಗಿ ನೇತಾಡುತ್ತ ಮಾಡುತ್ತಿದ್ದ ತಪಸ್ಸು. ಸಶರೀರ ಸ್ವರ್ಗಕ್ಕಾಗಿ ಯಾವ ತಪಸ್ಸನ್ನೂ ಶಾಸ್ತ್ರವು ಹೇಳಿಲ್ಲ.

**ದಾತವ್ಯಮಿತಿ ಯದ್ದಾನಂ ದೀಯತೇಽನುಪಕಾರಿಣೇ ।**
**ದೇಶೇ ಕಾಲೇ ಚ ಪಾತ್ರೇ ಚ ತದ್ದಾನಂ ಸಾತ್ತ್ವಿಕಂ ಸ್ಮೃತಮ್ ॥ ೨೦**

ದಾನ ಮಾಡುವುದು ಕರ್ತವ್ಯ – ಎಂದಿಷ್ಟೇ ತಿಳಿದು ಯೋಗ್ಯವಾದ ಸ್ಥಳದಲ್ಲಿ, ಪುಣ್ಯಕಾಲದಲ್ಲಿ, ಅರ್ಹತೆಯುಳ್ಳ ಪಾತ್ರವನ್ನರಿತು, ಯಾರಿಂದ ಪ್ರತ್ಯುಪಕಾರವನ್ನು ನಿರೀಕ್ಷಿಸುವುದೇ ಇಲ್ಲವೋ ಆತನಿಗೆ ಮಾಡತಕ್ಕ ದಾನವು ಸಾತ್ತ್ವಿಕವೆನಿಸಿಕೊಂಡಿದೆ.

**ಯತ್ತು ಪ್ರತ್ಯುಪಕಾರಾರ್ಥಂ ಫಲಮುದ್ದಿಶ್ಯ ವಾ ಪುನಃ ।**
**ದೀಯತೇ ಚ ಪರಿಕ್ಲಿಷ್ಟಂ ತದ್ದಾನಂ ರಾಜಸಂ ಸ್ಮೃತಮ್ ॥ ೨೧**

ಆದರೆ ಪ್ರತ್ಯುಪಕಾರದ ನಿಮಿತ್ತದಿಂದಾಗಲಿ, ಅದೃಷ್ಟವಾದ ದಾನಫಲವನ್ನು ಉದ್ದೇಶಿಸಿಯಾಗಲಿ ಮನಸ್ಸಿನಲ್ಲಿ ಆಯಾಸಪಟ್ಟುಕೊಂಡು ಕೊಡುವ ದಾನವು ರಾಜಸವೆನಿಸಿಕೊಳ್ಳುತ್ತದೆ.

**ಅದೇಶಕಾಲೇ ಯದ್ದಾನಮಪಾತ್ರೇಭ್ಯಶ್ಚ ದೀಯತೇ ।**
**ಅಸತ್ಕೃತಮವಜ್ಞಾತಂ ತತ್ತಾಮಸಮುದಾಹೃತಮ್ ॥ ೨೨**

ಅಶುಚಿಯಾದ ಸ್ಥಳದಲ್ಲಿಯೂ ಪುಣ್ಯಕಾಲವೆಂದು ಪ್ರಸಿದ್ಧಿಯಿಲ್ಲದ ಸಮಯದಲ್ಲಿಯೂ ಅನಾದರದಿಂದಲೂ ತಿರಸ್ಕಾರಬುದ್ಧಿಯಿಂದಲೂ ದಾನಕ್ಕೆ ಅನರ್ಹರಾದವರಿಗೆ – ಮೂಢ, ಕಳ್ಳ ಮುಂತಾದವರಿಗೆ ಕೊಡುವ ದಾನವು ತಾಮಸವೆಂದು ಉಕ್ತವಾಗಿದೆ.

ಯಜ್ಞ, ದಾನ, ತಪಸ್ಸು – ಮುಂತಾದವುಗಳಿಗೆ ಗುಣಾತಿಶಯವನ್ನುಂಟು ಮಾಡುವ ಮಾರ್ಗವನ್ನೀಗ ಹೇಳಲಾಗುತ್ತದೆ –

**ಓಂ ತತ್ಸದಿತಿ ನಿರ್ದೇಶೋ ಬ್ರಹ್ಮಣಸ್ತ್ರಿವಿಧಃ ಸ್ಮೃತಃ ।**
**ಬ್ರಾಹ್ಮಣಾಸ್ತೇನ ವೇದಾಶ್ಚ ಯಜ್ಞಾಶ್ಚ ವಿಹಿತಾಃ ಪುರಾ ॥ ೨೩**

ಪರಬ್ರಹ್ಮವನ್ನು ಗುರುತಿಸುವ ನಾಮನಿರ್ದೇಶವು ಓಂ–ತತ್–ಸತ್ ಎಂದು ಮೂರು ಬಗೆಯಾಗಿದೆಯೆಂದು ಬ್ರಹ್ಮವಿದರು ಸ್ಮರಿಸಿದ್ದಾರೆ. ಈ ತ್ರಿವಿಧ ನಿರ್ದೇಶದಿಂದ ಪೂರ್ವದಲ್ಲಿ ಬ್ರಾಹ್ಮಣರು, ವೇದಗಳು, ಯಜ್ಞಗಳು – ಇವುಗಳ ಸೃಷ್ಟಿಯಾಯಿತು.

**ವಿವರಣೆ :** ಈ ನಿರ್ದೇಶವನ್ನುಳ್ಳ ಬ್ರಹ್ಮದಿಂದ ಬ್ರಾಹ್ಮಣಾದಿಗಳ ಸೃಷ್ಟಿಯಾಯಿತು. ಈ ಮೂರು ಶಬ್ದಗಳನ್ನು ಸ್ತುತಿಸುವುದಕ್ಕಾಗಿ ಈ ಶಬ್ದಗಳಿಂದ ಸೃಷ್ಟಿಯಾಯಿತೆಂದು ವರ್ಣಿಸಿದೆ. ಓಂಕಾರವು ಬ್ರಹ್ಮವಾಚಕವೆಂದು ಹಿಂದೆ (೮–೧೩) ಹೇಳಲಾಗಿದೆ. ಬ್ರಹ್ಮವು ನಿರ್ವಿಶೇಷವಾದ್ದರಿಂದ ತತ್ = ಅದು ಎಂದಿಷ್ಟೇ ಹೇಳಬಹುದು. ಹಾಗೆಯೇ ಸತ್ – ಇರತಕ್ಕದ್ದು ಎಂದು ಹೇಳಬಹುದು. ಬೇರೆ ಯಾವ ಶಬ್ದವೂ ಬ್ರಹ್ಮವನ್ನು ಸರಿಯಾಗಿ ಬೋಧಿಸಲಾರದು.

**ತಸ್ಮಾದೋಮಿತ್ಯುದಾಹೃತ್ಯ ಯಜ್ಞದಾನತಪಃಕ್ರಿಯಾಃ ।**
**ಪ್ರವರ್ತಂತೇ ವಿಧಾನೋಕ್ತಾಃ ಸತತಂ ಬ್ರಹ್ಮವಾದಿನಾಮ್ ॥ ೨೪**

ಹೀಗೆ ಬ್ರಹ್ಮವಾಚಕವಾದ್ದರಿಂದಲೇ ಬ್ರಹ್ಮವಾದಿಗಳ ಯಜ್ಞ ದಾನ ತಪಸ್ಸು ಮುಂತಾದ ಶಾಸ್ತ್ರೋಕ್ತ ಕ್ರಿಯೆಗಳು ಓಂ ಎಂದು ಸದಾ ಪ್ರಣವೋಚ್ಚಾರಣಪೂರ್ವಕವಾಗಿಯೇ ನಡೆಯುತ್ತವೆ.

**ತದಿತ್ಯನಭಿಸಂಧಾಯ ಫಲಂ ಯಜ್ಞತಪಃಕ್ರಿಯಾಃ ।**
**ದಾನಕ್ರಿಯಾಶ್ಚ ವಿವಿಧಾಃ ಕ್ರಿಯಂತೇ ಮೋಕ್ಷಕಾಂಕ್ಷಿಭಿಃ ॥ ೨೫**

ಹಾಗೆಯೇ ಮುಮುಕ್ಷುಗಳಾದವರು ಫಲವನ್ನು ಬಯಸದೆ ಯಜ್ಞತಪಸ್ಸುಗಳನ್ನೂ ವಿವಿಧ ದಾನಕರ್ಮಗಳನ್ನೂ 'ತತ್' ಎಂಬ ಪದವನ್ನುಚ್ಚರಿಸಿ ಪ್ರಾರಂಭಿಸುತ್ತಾರೆ.

**ಸದ್ಭಾವೇ ಸಾಧುಭಾವೇ ಚ ಸದಿತ್ಯೇತತ್ ಪ್ರಯುಜ್ಯತೇ ।**
**ಪ್ರಶಸ್ತೇ ಕರ್ಮಣಿ ತಥಾ ಸಚ್ಛಬ್ದಃ ಪಾರ್ಥ ಯುಜ್ಯತೇ ॥ ೨೬**

ಪಾರ್ಥ, ಹೊಸದಾಗಿ ಹುಟ್ಟಿ ಇರುವುದೆಂಬ – ಸದ್ಭಾವದಲ್ಲಿಯೂ ಕೆಟ್ಟ ನಡತೆಯವನು ಸಾಧು ನಡತೆಯುವನಾದನೆಂಬ – ಸಾಧುಭಾವದಲ್ಲಿಯೂ 'ಸತ್' ಶಬ್ದದ ಪ್ರಯೋಗವಾಗುತ್ತದೆ. ಹಾಗೆಯೇ ಪ್ರಶಸ್ತವಾದ ಶುಭಕರ್ಮದಲ್ಲಿಯೂ ಸಚ್ಛಬ್ದವು ಪ್ರಯುಕ್ತವಾಗುತ್ತದೆ.

**ಯಜ್ಞೇ ತಪಸಿ ದಾನೇ ಚ ಸ್ಥಿತಿಃ ಸದಿತಿ ಚೋಚ್ಯತೇ ।**
**ಕರ್ಮ ಚೈವ ತದರ್ಥೀಯಂ ಸದಿತ್ಯೇವಾಭಿಧೀಯತೇ ॥ ೨೭**

ಯಜ್ಞ, ತಪಸ್ಸು, ದಾನ – ಇವುಗಳಲ್ಲಿರುವ ನಿಷ್ಠೆಯು ಸತ್ ಎನಿಸಿಕೊಳ್ಳುತ್ತದೆ. ಯಜ್ಞಾದಿಗಳಿಗಾಗಿ ಮಾಡುವ ಕರ್ಮವೂ ಅಥವಾ ಈಶ್ವರನಿಗಾಗಿ ಮಾಡುವ ಕರ್ಮವೂ 'ಸತ್' ಎಂದೇ ಹೇಳಿಸಿಕೊಳ್ಳುತ್ತದೆ.

ವಿವರಣೆ : 'ಸದ್ಭಾವೇ ಸಾಧುಭಾವೇ ಚ' – ಎಂಬುದರಿಂದ ಹಿಡಿದು ಇಲ್ಲಿಯವರೆಗೆ 'ಸತ್' ಎಂಬ ಶಬ್ದದ ಪ್ರಶಂಸೆಯನ್ನು ಮಾಡಲಾಗಿದೆ. ಅಸ್ತಿತ್ವ ಮತ್ತು ಒಳ್ಳೆಯದು ಎಂಬ ಅರ್ಥದಲ್ಲಿ ಈ ಶಬ್ದವಿದ್ದು ಪ್ರಶಂಸನೀಯ ವಿಷಯವನ್ನು 'ಸತ್–ಒಳ್ಳೆಯದು' ಎಂದು ಹೊಗಳುತ್ತಾರೆ. ಒಂದು ಬ್ರಹ್ಮವಾಚಕ ಶಬ್ದದ ಮಹಿಮೆ ಇಷ್ಟಿದೆ. ಹೀಗಿರುವಾಗ 'ಓಂ ತತ್ ಸತ್' ಎಂಬ ಮೂರು ಪದಗಳನ್ನು ಬಳಸಿ ಯಜ್ಞಾದಿಕ್ರಿಯೆಗಳನ್ನು ನಡೆಸಿದರೆ, ಗುಣಾಧಿಕ್ಯ ಉಂಟು ಎಂದು ಅಭಿಪ್ರಾಯ.

**ಅಶ್ರದ್ಧಯಾ ಹುತಂ ದತ್ತಂ ತಪಸ್ತಪ್ತಂ ಕೃತಂ ಚ ಯತ್ ।**
**ಅಸದಿತ್ಯುಚ್ಯತೇ ಪಾರ್ಥ ನ ಚ ತತ್ಪ್ರೇತ್ಯ ನೋ ಇಹ ॥ ೨೮**

**ಇತಿ ಶ್ರೀಮದ್ಭಗವದ್ಗೀತಾಸೂಪನಿಷತ್ಸು ಬ್ರಹ್ಮವಿದ್ಯಾಯಾಂ ಯೋಗಶಾಸ್ತ್ರೇ**
**ಶ್ರದ್ಧಾತ್ರಯವಿಭಾಗಯೋಗೋ ನಾಮ ಸಪ್ತದಶೋಽಧ್ಯಾಯಃ**

ಅಶ್ರದ್ಧೆಯಿಂದ ಹವನಮಾಡಿದ್ದೂ ದಾನಕೊಟ್ಟಿದ್ದೂ ತಪಸ್ಸನ್ನಾಚರಿಸಿದ್ದೂ ಅಥವಾ ಶ್ರದ್ಧೆಯಿಲ್ಲದೆ ಮಾಡಿದ ಸ್ತುತಿ, ನಮಸ್ಕಾರ ಮೊದಲಾದ ಕ್ರಿಯೆಯೂ 'ಅಸತ್–ಅಯೋಗ್ಯವಾದದ್ದು' ಎಂದು ಹೇಳಲ್ಪಡುತ್ತದೆ. ಅರ್ಜುನ, ಅಂತಹ ಕರ್ಮಕ್ಕೆ ಪರದಲ್ಲಿಯೂ ಫಲವಿಲ್ಲ, ಇಹದಲ್ಲಿಯೂ ಇಲ್ಲ.

**ಇಲ್ಲಿಗೆ ಶ್ರೀಮದ್ಭಗವದ್ಗೀತೆಯಲ್ಲಿ ಶ್ರದ್ಧಾತ್ರಯವಿಭಾಗಯೋಗವೆಂಬ**
**ಹದಿನೇಳನೆಯ ಅಧ್ಯಾಯವು ಸಮಾಪ್ತವಾಯಿತು.**

## ೧೭ನೆಯ ಅಧ್ಯಾಯದ ಸಾರ

"ಯಾರು ಶಾಸ್ತ್ರವಿಧಿಯನ್ನು ತಿಳಿಯದೆ, ಆದರೆ ಶ್ರದ್ಧೆಯಿಂದಲೇ ಶಿಷ್ಟಾಚಾರವನ್ನನುಸರಿಸಿ ಇತರ ದೇವತೆಗಳನ್ನು ಪೂಜಿಸುತ್ತಾರೆಯೋ, ಅವರ ಕರ್ಮವು ಸಾತ್ತ್ವಿಕವೊ, ರಾಜಸವೊ, ತಾಮಸವೊ ?" ಎಂದು ಅರ್ಜುನನು

ಪ್ರಶ್ನೆಮಾಡಿದನು. ಅದಕ್ಕೆ ಭಗವಂತನು ಹೇಳಿದ್ದೇನೆಂದರೆ : ಜನರ ಶ್ರದ್ಧೆಯು ಯಾವ ವಿಧವಾದದ್ದೆಂದು ತಿಳಿದು ಉತ್ತರ ಹೇಳಬೇಕಾಗುತ್ತದೆ. ಜನರ ಶ್ರದ್ಧೆಯು ಅವರವರ ಸ್ವಭಾವಕ್ಕನುಸರಿಸಿ ಮೂರು ಬಗೆಯಾಗಿರುತ್ತದೆ. ಹೇಗೆಂದರೆ, ಸಾತ್ತ್ವಿಕರು ದೇವತೆಗಳನ್ನೂ ರಾಜಸರು ಯಕ್ಷರಾಕ್ಷಸರನ್ನೂ ತಾಮಸರು ಭೂತಪ್ರೇತಗಳನ್ನೂ ಪೂಜಿಸುತ್ತಾರೆ. ಶಾಸ್ತ್ರವು ಹೇಳಿದ್ದನ್ನು ಗಣಿಸದೆ ದಂಭಾಹಂಕಾರಗಳಿಂದ ಕೂಡಿ ಕಾಮರಾಗಗಳಿಂದ ಶರೀರವನ್ನು ದಂಡಿಸುತ್ತ ಘೋರವಾದ ಅಶಾಸ್ತ್ರೀಯತಪಸ್ಸನ್ನು ಮಾಡತಕ್ಕವರು ಆಸುರ ನಿಶ್ಚಯದವ ರೆಂದು ತಿಳಿಯಬೇಕು. (ಉದಾಹರಣೆಗೆ : ರಾಮಾಯಣದಲ್ಲಿ ಬರುವ ಶೂದ್ರತಪಸ್ವಿ)

ಆಹಾರಾದಿಗಳೂ ಸಹ ಅವರವರ ಗುಣಕ್ಕೆ ಅನುಸಾರವಾಗಿ ಮೂರು ವಿಧ ವಾಗಿರುತ್ತದೆ. ಸಾತ್ತ್ವಿಕರಾದವರು ಆಯುಃಸತ್ತ್ವಬಲಾರೋಗ್ಯಗಳನ್ನು ಹೆಚ್ಚಿಸುವ ರಸವತ್ತಾದ ಹಿತಕರವಾದ ಆಹಾರವನ್ನು ಸೇವಿಸುತ್ತಾರೆ. ರಾಜಸರಾದರೋ ಬಹಳ ಖಾರ, ಹುಳಿ, ಉಪ್ಪು, ಒಣಕಲು – ಮುಂತಾದ ಆಹಾರವನ್ನು ಮೆಚ್ಚುತ್ತಾರೆ. ತಾಮಸರು ತಂಗಳು, ಹಳಸಿದ್ದು, ಕೊಳೆತದ್ದು – ಮುಂತಾದ ಕೆಟ್ಟ ಆಹಾರವನ್ನು ಸೇವಿಸುತ್ತಾರೆ. ಹಾಗೆಯೇ ಸಾತ್ತ್ವಿಕರು ಫಲಾಪೇಕ್ಷೆಯಿಲ್ಲದೆಯೇ, ಶಾಸ್ತ್ರದಲ್ಲಿ ವಿಧಿಸಿದೆಯೆಂಬ ಕಾರಣದಿಂದ ಯಜ್ಞವನ್ನು ಮಾಡುತ್ತಾರೆ. ರಾಜಸರು ಫಲದ ಆಸೆಯಿಂದ ಆಡಂಬರಪೂರ್ವಕವಾಗಿ ಯಜ್ಞವನ್ನು ಮಾಡುತ್ತಾರೆ. ತಾಮಸರು ಶ್ರದ್ಧೆಯಿಲ್ಲದೆ, ಶಾಸ್ತ್ರವನ್ನೂ ಗಣಿಸದೆ, ಯಜ್ಞಾಂಗಕಾರ್ಯಗಳ ಲ್ಲಿಯೂ ನ್ಯೂನತೆಯನ್ನುಂಟುಮಾಡುತ್ತ ಆಚರಿಸುತ್ತಾರೆ.

ತಪಸ್ಸು ಕಾಯಿಕ, ವಾಚಿಕ, ಮಾನಸಿಕ – ಎಂದು ಮೂರು ವಿಧ. ಶ್ರದ್ಧೆಯಿಂದ ಫಲಾಪೇಕ್ಷೆಯಿಲ್ಲದೆ ತಪಸ್ಸನ್ನಾಚರಿಸತಕ್ಕವರು ಸಾತ್ತ್ವಿಕರು. ಸತ್ಕಾರ, ಸಂಮಾನ, ಗೌರವಗಳು ದೊರೆಯಲೆಂದು ಮಾಡತಕ್ಕವರು ರಾಜಸರು. ಯಾವ ವಿಧಿಯನ್ನೂ ತಿಳಿಯದೆ ಇನ್ನೊಬ್ಬರಿಗೆ ತೊಂದರೆಯನ್ನುಂಟುಮಾಡಬೇಕೆಂದು ತಪಸ್ಸು ಮಾಡತಕ್ಕವರು ತಾಮಸರು. ಕರ್ತವ್ಯವೆಂದು ಭಾವಿಸಿ ದೇಶಕಾಲ ಪಾತ್ರಗಳನ್ನು ನೋಡಿ ದಾನಮಾಡುವವರು ಸಾತ್ತ್ವಿಕರು. ಪ್ರತ್ಯುಪಕಾರವನ್ನು ಬಯಸಿ ಅಥವಾ ಇನ್ನೊಂದು ಫಲಾಪೇಕ್ಷೆಯಿಂದ ದಾನಮಾಡತಕ್ಕವರು ರಾಜಸರು. ದೇಶಕಾಲಪಾತ್ರಗಳನ್ನು ಲೆಕ್ಕಿಸದೆ ಅನಾದರದಿಂದ ಹೀಯಾಳಿಸುತ್ತ ದಾನಮಾಡತಕ್ಕವರು ತಾಮಸರು. ಹೀಗೆ ಯಾವ ಭಾವನೆಯನ್ನಿಟ್ಟುಕೊಂಡು ಕರ್ಮವನ್ನನುಸರಿಸುತ್ತಾರೋ ಅದರ ಮೇಲಿಂದ ಆ ಕರ್ಮವು ಸಾತ್ತ್ವಿಕವೆ,

ರಾಜಸವೆ, ತಾಮಸವೆ – ಎಂಬುದನ್ನು ನಿರ್ಧರಿಸಬೇಕು.

ಯಜ್ಞ, ದಾನ, ತಪಸ್ಸುಗಳನ್ನು 'ಓಮ್, ತತ್, ಸತ್' ಎಂಬ ಬ್ರಹ್ಮವಾಚಕ ಶಬ್ದಗಳನ್ನುಚ್ಚರಿಸಿ ಮಾಡಿದರೆ, ಯಜ್ಞಾದಿಗಳಲ್ಲಿ ಯಾವ ದೋಷವು ಘಟಿಸಿದರೂ ಅದು ಗುಣವೇ ಆಗಿಬಿಡುತ್ತದೆ. ಈ ಕರ್ಮಗಳಲ್ಲಿ ಶ್ರದ್ಧಾಭಕ್ತಿಗಳು ಮುಖ್ಯವಾದವು. ಅವಿಲ್ಲದಿದ್ದರೆ ಇಹದಲ್ಲಾಗಲಿ, ಪರದಲ್ಲಾಗಲಿ ಯಾವ ಫಲವೂ ದೊರೆಯುವುದಿಲ್ಲ.

## ಅಧ್ಯಾಯ ೧೮

# ಮೋಕ್ಷಸಂನ್ಯಾಸಯೋಗ

ಈ ಅಧ್ಯಾಯದಲ್ಲಿ ಹಿಂದಿನ ಎಲ್ಲ ಅಧ್ಯಾಯಗಳ ವಿಷಯಗಳನ್ನೂ ಸಂಗ್ರಹಿಸಿ ಉಪಸಂಹಾರ ಮಾಡಲಾಗಿದೆ. ಭಗವಂತನು ಹಿಂದೆ 'ಸಂನ್ಯಾಸಸ್ತು ಮಹಾಬಾಹೋ ದುಃಖಮಾಪ್ತುಮಯೋಗತಃ', 'ಸರ್ವಸಂಕಲ್ಪ ಸಂನ್ಯಾಸೀ ಯೋಗಾರೂಢಸ್ತದೋಚ್ಯತೇ' – ಮುಂತಾದ ಸ್ಥಳಗಳಲ್ಲಿ ಸಂನ್ಯಾಸ ಶಬ್ದವನ್ನೂ 'ಸರ್ವಕರ್ಮಫಲತ್ಯಾಗಂ ತತಃ ಕುರು ಯತಾತ್ಮವಾನ್', 'ಸರ್ವಾರಂಭ ಪರಿತ್ಯಾಗೀ ಗುಣಾತೀತಃ ಸ ಉಚ್ಯತೇ' ಮುಂತಾದ ಸ್ಥಳಗಳಲ್ಲಿ ತ್ಯಾಗಶಬ್ದವನ್ನೂ ಬಳಸಿದ್ದಾನೆ. ಅರ್ಜುನನಿಗೆ 'ನಿನಗೆ ಸಂನ್ಯಾಸ ಬೇಡ, ತ್ಯಾಗಮಾಡು' ಎನ್ನುತ್ತಾನೆ. ಈ ಎರಡು ಶಬ್ದಗಳಿಗೂ ತ್ಯಜಿಸುವುದು ಎಂಬ ಸಾಮಾನ್ಯಾರ್ಥ ಇದೆ. ಹಾಗಿದ್ದರೆ ಅರ್ಥವಿಶೇಷ ಯಾವುದು ? ಎಂದು ತಿಳಿಯಲು ಅರ್ಜುನನು ಪ್ರಶ್ನೆ ಮಾಡುತ್ತಾನೆ.

**ಅರ್ಜುನ ಉವಾಚ –**

**ಸಂನ್ಯಾಸಸ್ಯ ಮಹಾಬಾಹೋ ತತ್ತ್ವಮಿಚ್ಛಾಮಿ ವೇದಿತುಮ್ ।**<br>
**ತ್ಯಾಗಸ್ಯ ಚ ಹೃಷೀಕೇಶ ಪೃಥಕ್ಕೇಶಿನಿಷೂದನ ॥** ೧

**ಅರ್ಜುನನು ಹೇಳಿದನು :** ಹೇ ಮಹಾಬಾಹು, ಹೃಷೀಕೇಶ, ಕೇಶಿ ನಿಷೂದನ, ಸಂನ್ಯಾಸ ಮತ್ತು ತ್ಯಾಗವೆಂಬ ಶಬ್ದಗಳಿಗಿರುವ ಬೇರೆ ಬೇರೆ ಅರ್ಥವಿಶೇಷವನ್ನು ತಿಳಿಯಲು ಇಚ್ಛೆಸುತ್ತೇನೆ. (ಹೃಷೀಕ = ಇಂದ್ರಿಯಗಳಿಗೆ, ಈಶ = ಸ್ವಾಮಿ.)

**ಶ್ರೀಭಗವಾನುವಾಚ –**

**ಕಾಮ್ಯಾನಾಂ ಕರ್ಮಣಾಂ ನ್ಯಾಸಂ ಸಂನ್ಯಾಸಂ ಕವಯೋ ವಿದುಃ ।**<br>
**ಸರ್ವಕರ್ಮಫಲತ್ಯಾಗಂ ಪ್ರಾಹುಸ್ತ್ಯಾಗಂ ವಿಚಕ್ಷಣಾಃ ॥** ೨

**ಭಗವಂತನು ಹೇಳಿದನು :** ಫಲವನ್ನು ಕೊಡುವ ಕರ್ಮಗಳ – ಎಂದರೆ ಕಾಮ್ಯನಿತ್ಯನೈಮಿತ್ತಿಕಕರ್ಮಗಳ ಪರಿತ್ಯಾಗವನ್ನು ಸಂನ್ಯಾಸವೆಂದು ಪಂಡಿತರು ತಿಳಿದಿದ್ದಾರೆ. ಸರ್ವಕರ್ಮಗಳ ಫಲತ್ಯಾಗವನ್ನು ತ್ಯಾಗವೆಂದು ವಿದ್ವಾಂಸರು ಹೇಳುತ್ತಾರೆ.

**ವಿವರಣೆ :** ಕರ್ಮಗಳ ಆಚರಣೆಯನ್ನೇ ತ್ಯಜಿಸುವುದು ಸಂನ್ಯಾಸ. ಕರ್ಮಗಳನ್ನು ಆಚರಿಸುತ್ತಲೇ ಅವುಗಳ ಫಲವನ್ನು ತ್ಯಜಿಸುವುದು ತ್ಯಾಗ. ಒಂದು ಸರ್ವಕರ್ಮತ್ಯಾಗ ; ಇನ್ನೊಂದು ಸರ್ವಕರ್ಮಫಲತ್ಯಾಗ. ಇವುಗಳಿಗಿರುವ ಭೇದವನ್ನು ಗಮನಿಸಬೇಕು. ಕರ್ಮವನ್ನು ತ್ಯಜಿಸತಕ್ಕವನು ಸಂನ್ಯಾಸಿ. ಅದರ ಫಲವನ್ನು ಮಾತ್ರ ತ್ಯಜಿಸತಕ್ಕವನು ಕರ್ಮಯೋಗಿ. ನಿತ್ಯನೈಮಿತ್ತಿಕಕರ್ಮಗಳಿಗೂ ಫಲವಿರುವುದರಿಂದ ಅವೂ ಕಾಮ್ಯಗಳೇ.

**ತ್ಯಾಜ್ಯಂ ದೋಷವದಿತ್ಯೇಕೇ ಕರ್ಮ ಪ್ರಾಹುರ್ಮನೀಷಿಣಃ ।**
**ಯಜ್ಞದಾನತಪಃಕರ್ಮ ನ ತ್ಯಾಜ್ಯಮಿತಿ ಚಾಪರೇ ॥ ೩**

ನಿತ್ಯನೈಮಿತ್ತಿಕಾದಿಕರ್ಮವು (ಬಂಧನಕಾರಿಯಾದ್ದರಿಂದ) ದೋಷವುಳ್ಳದ್ದು. ಆದ್ದರಿಂದ ಅದು ತ್ಯಾಜ್ಯವೆಂದು ಕೆಲವು ಪಂಡಿತರು ಹೇಳುತ್ತಾರೆ. ಯಜ್ಞದಾನ ತಪೋರೂಪವಾದ ಆ ಕರ್ಮವು ತ್ಯಾಜ್ಯವಲ್ಲ – (ಅದನ್ನು ಆಚರಿಸಬೇಕು) ಎಂದು ಇನ್ನು ಕೆಲವರು ಹೇಳುತ್ತಾರೆ.

**ವಿವರಣೆ :** 'ದೋಷ ಇವ ದೋಷವತ್' ಎಂದು ವಿಗ್ರಹಿಸಿ, ಕಾಮಕ್ರೋಧಾದಿ ದೋಷವು ಹೇಗೆ ತ್ಯಾಜ್ಯವೋ ಹಾಗೆ ಕರ್ಮವೂ ತ್ಯಾಜ್ಯ – ಎಂಬ ಇನ್ನೊಂದು ಅರ್ಥವನ್ನೂ ಹೇಳಬಹುದು. ಮುಮುಕ್ಷುವಾದವನು ಅಜ್ಞನಾಗಿ ಕರ್ಮದಲ್ಲಿ ಅಧಿಕೃತನಾಗಿದ್ದರೂ ಕರ್ಮವು ಬಂಧಕವಾದ್ದರಿಂದ ಅದನ್ನು ಮಾಡಬಾರದೆಂದು ಈ ಜನರ ಅಭಿಪ್ರಾಯ. ಇವೆಲ್ಲವೂ ಕರ್ಮದಲ್ಲಿ ಅಧಿಕೃತರಾದ ಕರ್ಮಿಗಳನ್ನು ಕುರಿತು ಮಾಡಿದ ವಿಕಲ್ಪಗಳು. ಜ್ಞಾನನಿಷ್ಠರಾದ ಸಂನ್ಯಾಸಿಗಳಿಗೆ ಸಂಬಂಧಿಸಿದವುಗಳಲ್ಲ. ಅವರಿಗೆ ಕರ್ಮಗಳಿಲ್ಲವೆಂಬುದು ಸ್ಫುಟವಾಗಿದೆ.

**ನಿಶ್ಚಯಂ ಶೃಣು ಮೇ ತತ್ರ ತ್ಯಾಗೇ ಭರತಸತ್ತಮ ।**
**ತ್ಯಾಗೋ ಹಿ ಪುರುಷವ್ಯಾಘ್ರ ತ್ರಿವಿಧಃ ಸಂಪ್ರಕೀರ್ತಿತಃ ॥ ೪**

ಭರತಸತ್ತಮ, ಈ ತ್ಯಾಗದ ವಿಷಯದಲ್ಲಿ ನನ್ನ ನಿಶ್ಚಯವೇನೆಂಬುದನ್ನು ಕೇಳು. ತ್ಯಾಗವು (ಗುಣತ್ರಯನಿಮಿತ್ತದಿಂದ) ಮೂರು ವಿಧವಾಗಿರುತ್ತದೆ.

**ವಿವರಣೆ :** ಇಲ್ಲಿ ತ್ಯಾಗ, ಸಂನ್ಯಾಸಗಳೆರಡನ್ನೂ ಸೇರಿಸಿ ತ್ಯಾಗವೆಂದೇ ಹೇಳಲಾಗಿದೆ. 'ಬಿಡುವುದು' ಎಂಬ ಅರ್ಥಸಾಮಾನ್ಯವು ಇಲ್ಲಿ ವಿವಕ್ಷಿತ.

**ಯಜ್ಞದಾನತಪಃಕರ್ಮ ನ ತ್ಯಾಜ್ಯಂ ಕಾರ್ಯಮೇವ ತತ್ ।**
**ಯಜ್ಞೋ ದಾನಂ ತಪಶ್ಚೈವ ಪಾವನಾನಿ ಮನೀಷಿಣಾಮ್ ॥ ೫**

ಯಜ್ಞ, ದಾನ, ತಪಸ್ಸು – ಎಂಬ ಕರ್ಮವು ತ್ಯಾಜ್ಯವಲ್ಲ. ಅದನ್ನು ಆಚರಿಸಲೇಬೇಕು. ಆ ಕರ್ಮಗಳು ಬುದ್ಧಿಶಾಲಿಗಳನ್ನು–ಎಂದರೆ– ಫಲಾಕಾಂಕ್ಷೆಯಿಲ್ಲದವರನ್ನು, ಪಾವನಗೊಳಿಸತಕ್ಕವು.

**ಏತಾನ್ಯಪಿ ತು ಕರ್ಮಾಣಿ ಸಂಗಂ ತ್ಯಕ್ತ್ವಾ ಫಲಾನಿ ಚ ।**
**ಕರ್ತವ್ಯಾನೀತಿ ಮೇ ಪಾರ್ಥ ನಿಶ್ಚಿತಂ ಮತಮುತ್ತಮಮ್ ॥ ೬**

ಈ ಕರ್ಮಗಳನ್ನಾದರೋ ಸಂಗವನ್ನೂ ಫಲಗಳನ್ನೂ ಪರಿತ್ಯಜಿಸಿ ಮಾಡಬೇಕೆಂದು, ಅರ್ಜುನ, ನನ್ನ ನಿಶ್ಚಿತವಾದ ಮತವಾಗಿರುತ್ತದೆ. ಇದೇ ಉತ್ತಮವಾದದ್ದು.

**ವಿವರಣೆ :** ಸಂಗ=ನಾನು ಮಾಡುತ್ತೇನೆಂಬ ಕರ್ತೃತ್ವಾಭಿಮಾನವನ್ನಿಡುವುದು. ಈ ಕರ್ಮಗಳನ್ನು – ಎಂದರೆ – ಯಜ್ಞದಾನತಪೋರೂಪವಾದ ನಿತ್ಯಕರ್ಮಗಳನ್ನು ಎಂದರ್ಥ. ನಿತ್ಯಕರ್ಮಗಳಿಗೂ ಫಲವಿದೆ.

**ನಿಯತಸ್ಯ ತು ಸಂನ್ಯಾಸಃ ಕರ್ಮಣೋ ನೋಪಪದ್ಯತೇ ।**
**ಮೋಹಾತ್ತಸ್ಯ ಪರಿತ್ಯಾಗಸ್ತಾಮಸಃ ಪರಿಕೀರ್ತಿತಃ ॥ ೭**

ವಿಧಿಪ್ರಾಪ್ತವಾದ ನಿತ್ಯಕರ್ಮದ ಪರಿತ್ಯಾಗವು ಯುಕ್ತವಲ್ಲ. ಅಜ್ಞಾನದಿಂದ ಅದನ್ನು ತ್ಯಜಿಸುವುದು ತಾಮಸವಾದ ಪರಿತ್ಯಾಗವೆನಿಸುತ್ತದೆ.

**ದುಃಖಮಿತ್ಯೇವ ಯತ್ಕರ್ಮ ಕಾಯಕ್ಲೇಶಭಯಾತ್ತ್ಯಜೇತ್ ।**
**ಸ ಕೃತ್ವಾ ರಾಜಸಂ ತ್ಯಾಗಂ ನೈವ ತ್ಯಾಗಫಲಂ ಲಭೇತ್ ॥ ೮**

ದೇಹಕ್ಕೆ ಆಯಾಸವಾಗುವುದೆಂಬ ಅಂಜಿಕೆಯಿಂದ 'ಕರ್ಮ ಮಾಡುವುದು ಕಷ್ಟ' ಎಂದು ತಿಳಿದು, ಯಾವಾತನು ಕರ್ಮವನ್ನು ತ್ಯಜಿಸುತ್ತಾನೋ ಅದು ರಾಜಸತ್ಯಾಗವಾದ್ದರಿಂದ ಅವನಿಗೆ ಕರ್ಮಫಲವಾದ ಮೋಕ್ಷವು ದೊರೆಯುವುದಿಲ್ಲ.

**ವಿವರಣೆ :** ಈ ಶ್ಲೋಕದಲ್ಲಿ 'ಯತ್' ಪದಕ್ಕೆ ಬದಲಾಗಿ 'ಯಃ' ಎಂದಿರಬೇಕಾಗಿತ್ತು. ಆದರೂ ತ್ಯಜೇದಿತಿ ಯತ್ = ತ್ಯಜಿಸುವುದೆಂಬುದೇನುಂಟೋ (ಸಃ ರಾಜಸತ್ಯಾಗಃ = ಅದು ರಾಜಸತ್ಯಾಗ) ಎಂದು ಅಧ್ಯಾಹಾರಮಾಡಿ ವಾಕ್ಯ ಪೂರ್ತಿಮಾಡಬಹುದು. ಈ ರಾಜಸತ್ಯಾಗದಿಂದ

ಚಿತ್ತಶುದ್ಧಿಯಾಗುವುದಿಲ್ಲ. ವಿಹಿತಕರ್ಮವನ್ನು ಮಾಡದೇ ಇದ್ದುದರಿಂದ ಬರತಕ್ಕ ಪಾಪವಂತೂ ಇದ್ದೇ ಇರುತ್ತದೆ.

**ಕಾರ್ಯಮಿತ್ಯೇವ ಯತ್ಕರ್ಮ ನಿಯತಂ ಕ್ರಿಯತೇಽರ್ಜುನ ।**
**ಸಂಗಂ ತ್ಯಕ್ತ್ವಾ ಫಲಂ ಚೈವ ಸ ತ್ಯಾಗಃ ಸಾತ್ತ್ವಿಕೋ ಮತಃ ॥ ೯**

ಈ ನಿತ್ಯಕರ್ಮವು ನನ್ನ ಕರ್ತವ್ಯವೆಂದೇ ತಿಳಿದು ಕರ್ತೃತ್ವಾಭಿಮಾನವೆಂಬ ಸಂಗವನ್ನೂ ಫಲವನ್ನೂ ತ್ಯಜಿಸಿ ಆಚರಿಸುವುದೇನುಂಟು, ಅದು ಸಾತ್ತ್ವಿಕವಾದ ತ್ಯಾಗವೆನಿಸುತ್ತದೆ.

**ವಿವರಣೆ :** ಫಲತ್ಯಾಗವನ್ನೇ ಇಲ್ಲಿ ತ್ಯಾಗವೆಂದು ಹೊಗಳಲಾಗಿದೆ. ರಾಜಸ, ತಾಮಸಗಳು ಕರ್ಮತ್ಯಾಗಗಳು. ಸಾತ್ತ್ವಿಕವು ಫಲತ್ಯಾಗ ಎಂಬ ಭೇದವನ್ನು ಗಮನಿಸಬೇಕು. ನಿತ್ಯಕರ್ಮಕ್ಕೂ ಫಲವಿದೆಯೆಂಬುದಕ್ಕೆ ಈ ಭಗವದ್ವಚನವೇ ಪ್ರಮಾಣ. ನಿತ್ಯಕರ್ಮದ ಫಲ ಚಿತ್ತಶುದ್ಧಿ ಅಥವಾ ಪಾಪನಿರೋಧ.

**ನ ದ್ವೇಷ್ಟ್ಯಕುಶಲಂ ಕರ್ಮ ಕುಶಲೇ ನಾನುಷಜ್ಜತೇ ।**
**ತ್ಯಾಗೀ ಸತ್ತ್ವಸಮಾವಿಷ್ಟೋ ಮೇಧಾವೀ ಛಿನ್ನಸಂಶಯಃ ॥ ೧೦**

ಫಲಾಸಕ್ತಿಯನ್ನು ತೊರೆದು ನಿತ್ಯಕರ್ಮವನ್ನಾಚರಿಸುವ ಆ ಸಾತ್ತ್ವಿಕ ತ್ಯಾಗಿಯು (ಆತ್ಮ–ಅನಾತ್ಮಗಳ ವಿವೇಕಕ್ಕೆ ಕಾರಣವಾದ) ಸತ್ತ್ವಗುಣದಿಂದ ಕೂಡಿದವನಾಗಿ, ಅಹಿತಕರವಾದ ಕಾಮ್ಯಕರ್ಮವನ್ನು ದ್ವೇಷಿಸುವುದೂ ಇಲ್ಲ, ಹಿತಕರವಾದ ನಿತ್ಯಕರ್ಮದಲ್ಲಿ ಪ್ರೀತಿಯಿಂದ ತೊಡಗುವುದೂ ಇಲ್ಲ. ಆತನು ಆತ್ಮಜ್ಞಾನವನ್ನು ಪಡೆದ ಮೇಧಾವಿಯೂ (ಆತ್ಮನಲ್ಲಿ ನೆಲೆ ನಿಲ್ಲುವುದಕ್ಕಿಂತ ಬೇರೊಂದು ಸಾಧನ ವಿಲ್ಲವೆಂದು) ಸಂಶಯವನ್ನು ತೊರೆದ ನಿಶ್ಚಯಬುದ್ಧಿಯುವನೂ ಆಗುತ್ತಾನೆ.

**ವಿವರಣೆ :** ಹಿಂದೆ ಹೇಳಿದಂತೆ ಕರ್ಮಯೋಗವನ್ನಾಚರಿಸತಕ್ಕವನು ಕ್ರಮವಾಗಿ ಚಿತ್ತಸಂಸ್ಕಾರವನ್ನು ಪಡೆದು ನಿಷ್ಕ್ರಿಯನಾದ ಆತ್ಮನೇ ತಾನೆಂದು ಅರಿತುಕೊಳ್ಳುತ್ತಾನೆ. ಆಗ ನೈಷ್ಕರ್ಮ್ಯವೆಂಬ ಜ್ಞಾನನಿಷ್ಠೆಯನ್ನು ಪಡೆಯುತ್ತಾನೆ – ಎಂದು ಕರ್ಮಯೋಗದ ಫಲವನ್ನು ಇಲ್ಲಿ ಹೇಳಲಾಗಿದೆ.

**ನ ಹಿ ದೇಹಭೃತಾ ಶಕ್ಯಂ ತ್ಯಕ್ತುಂ ಕರ್ಮಾಣ್ಯಶೇಷತಃ ।**
**ಯಸ್ತು ಕರ್ಮಫಲತ್ಯಾಗೀ ಸ ತ್ಯಾಗೀತ್ಯಭಿಧೀಯತೇ ॥ ೧೧**

ದೇಹಾಭಿಮಾನವುಳ್ಳ ಯಾರಿಂದಲೂ ಕರ್ಮಗಳನ್ನು ಪೂರ್ಣವಾಗಿ ತ್ಯಜಿಸಲು ಶಕ್ಯವಿಲ್ಲ. ಆದರೆ ಯಾವಾತನು ಕರ್ಮಫಲಾಭಿಲಾಷೆಯನ್ನು

ತ್ಯಜಿಸುತ್ತಾನೋ ಅವನು ತ್ಯಾಗಿ (ಸಂನ್ಯಾಸಿ) ಎನಿಸುತ್ತಾನೆ.

**ವಿವರಣೆ :** ಇಲ್ಲಿ ದೇಹಭೃತ್ ಎಂದು ಹೇಳಿದ್ದು ಉದ್ದೇಶಪೂರ್ವಕವಾಗಿ. ದೇಹಾಭಿಮಾನವುಳ್ಳವನೆಂದು ಅದರ ಅರ್ಥ. ಅವನಿಗೆ ನಾನು ಕರ್ತನೆಂಬ ಭ್ರಾಂತಿ ಇನ್ನೂ ಇರುವುದರಿಂದ ದೇಹದಿಂದಾಗುವ ಸಮಸ್ತ ಕ್ರಿಯೆಯನ್ನೂ ನಾನು ಮಾಡುತ್ತೇನೆಂದು ಭಾವಿಸುತ್ತಾನೆ. ದೇಹವಾದರೋ ಕರ್ಮವನ್ನು ಮಾಡದೇ ಒಂದು ಕ್ಷಣವೂ ಇರುವುದಿಲ್ಲ. ಜ್ಞಾನಿಯು ಆತ್ಮನು ಅಕರ್ತನೆಂದು ಸ್ಫುಟವಾಗಿ ತಿಳಿದಿರುವುದರಿಂದ 'ಸರ್ವಕರ್ಮಾಣಿ ಮನಸಾ ಸಂನ್ಯಸ್ಯ', 'ಗುಣಾ ಗುಣೇಷು ವರ್ತಂತೇ' ಎಂದು ನಿಶ್ಚಯಿಸಿರುತ್ತಾನೆ. ಆಗ ಜ್ಞಾನಿಯು ಸರ್ವಕರ್ಮ ತ್ಯಾಗವನ್ನು ಮಾಡಿದಂತೆಯೇ ಆಯಿತು. ಈ ಶ್ಲೋಕದಲ್ಲಿ ತ್ಯಾಗಿ–ಸಂನ್ಯಾಸಿ ಎಂದು ಹೇಳಿದ್ದು ಕರ್ಮಫಲತ್ಯಾಗವನ್ನು ಸ್ತುತಿಸುವುದಕ್ಕಾಗಿ. ದೇಹವು ಕರ್ತೃವೇ ಹೊರತು ಆತ್ಮನಲ್ಲ ಎಂದು ಅರಿತರೆ ಸರ್ವಕರ್ಮಪರಿತ್ಯಾಗವೇ ಆಗುತ್ತದೆ.

**ಅನಿಷ್ಟಮಿಷ್ಟಂ ಮಿಶ್ರಂ ಚ ತ್ರಿವಿಧಂ ಕರ್ಮಣಃ ಫಲಮ್ ।**
**ಭವತ್ಯತ್ಯಾಗಿನಾಂ ಪ್ರೇತ್ಯ ನ ತು ಸಂನ್ಯಾಸಿನಾಂ ಕ್ವಚಿತ್ ॥** ೧೨

ಫಲತ್ಯಾಗಿಗಳಲ್ಲದ ಕರ್ಮಿಗಳಿಗೆ ಅನಿಷ್ಟ, ಇಷ್ಟ, ಮಿಶ್ರ – ಎಂದು ಕರ್ಮದ ಫಲವು ಮೂರು ವಿಧವಾಗಿರುತ್ತದೆ. ಈ ಫಲವು ಮರಣಾನಂತರ ಒದಗತಕ್ಕದ್ದು. ಸಂನ್ಯಾಸಿಗಳಿಗೆ ಮಾತ್ರ ಇಂತಹ ಫಲದ ಸಂಬಂಧವೇ ಇಲ್ಲ.

**ವಿವರಣೆ :** ಅನಿಷ್ಟಫಲ = ನರಕ, ಮೃಗಜನ್ಮ ಮುಂತಾದದ್ದು. ಇಷ್ಟಫಲ = ದೇವಜನ್ಮ ಮೊದಲಾದದ್ದು. ಮಿಶ್ರಫಲ = ಸುಖದುಃಖಾತ್ಮಕವಾದ ಮನುಷ್ಯ ಜನ್ಮ. ಇಲ್ಲಿ ಸಂನ್ಯಾಸಿಗಳೆಂದರೆ ಕೇವಲ ಜ್ಞಾನನಿಷ್ಠರಾದ ಪರಮಾರ್ಥ ಸಂನ್ಯಾಸಿಗಳು. ಜ್ಞಾನೋದಯವಾಗದ ಕರ್ಮಯೋಗಿಗಳಿಗೆ ಚಿತ್ತಶುದ್ಧಿಯೆಂಬ ಫಲ ಉಂಟು.

**ಪಂಚೈತಾನಿ ಮಹಾಬಾಹೋ ಕಾರಣಾನಿ ನಿಬೋಧ ಮೇ ।**
**ಸಾಂಖ್ಯೇ ಕೃತಾಂತೇ ಪ್ರೋಕ್ತಾನಿ ಸಿದ್ಧಯೇ ಸರ್ವಕರ್ಮಣಾಮ್ ॥** ೧೩

ಮಹಾಬಾಹು – ಅರ್ಜುನ, ಯಾವ ಕರ್ಮವು ನೆರವೇರುವುದಕ್ಕೂ ಐದು ಕಾರಣಗಳು ಬೇಕಾಗುತ್ತವೆಯೆಂದು ವೇದಾಂತಸಿದ್ಧಾಂತದಲ್ಲಿ ನಿರ್ಣೀತವಾಗಿದೆ. ಅವುಗಳನ್ನು ಹೇಳುತ್ತೇನೆ, ಕೇಳು.

**ವಿವರಣೆ :** ಸಂಖ್ಯಾ ಎಂದರೆ ಜ್ಞಾನ. ಅದಕ್ಕೆ ಸಂಬಂಧಿಸಿದ ಜ್ಞೇಯ ಪದಾರ್ಥವನ್ನು ತಿಳಿಸುವ ಶಾಸ್ತ್ರ ಸಾಂಖ್ಯ. ಪ್ರಕೃತದಲ್ಲಿ ಅದು ವೇದಾಂತ, ಕಾಪಿಲ

ಸಾಂಖ್ಯವಲ್ಲ. ಆತ್ಮನು ಕರ್ತನಲ್ಲ ಎಂಬುದನ್ನು ಈಗ ಹೇಳಲಾಗುತ್ತದೆ –

**ಅಧಿಷ್ಠಾನಂ ತಥಾ ಕರ್ತಾ ಕರಣಂ ಚ ಪೃಥಗ್ವಿಧಮ್ ।**
**ವಿವಿಧಾಶ್ಚ ಪೃಥಕ್ಚೇಷ್ಟಾ ದೈವಂ ಚೈವಾತ್ರ ಪಂಚಮಮ್ ॥ ೧೪**

ಅವು ಯಾವುವೆಂದರೆ : ಶರೀರ, ಕರ್ತೃವೆನಿಸುವ ಜೀವ, (ಜ್ಞಾನೇಂದ್ರಿಯ, ಕರ್ಮೇಂದ್ರಿಯ, ಮನೋಬುದ್ಧಿಗಳಿಂದ ಹನ್ನೆರಡು ಬಗೆಯಾದ) ಕರಣ, (ಪ್ರಾಣಾಪಾನಾದಿವಾಯುಗಳು ನಡೆಸುವ) ಬೇರೆ ಬೇರೆ ಕ್ರಿಯೆ ಮತ್ತು ಇಲ್ಲಿ ಐದನೆಯದಾದ ದೈವ. (ಇವಿಷ್ಟು ಕರ್ಮ ನಡೆಯಲು ಕಾರಣಗಳು)

**ವಿವರಣೆ :** ಅಧಿಷ್ಠಾನ = ಆಶ್ರಯ. ಇಚ್ಛಾ ದ್ವೇಷ ಸುಖದುಃಖಗಳಿಗೆ ಆಶ್ರಯವಾದ ಶರೀರ. ಅಂತಃಕರಣವೆಂಬ ಉಪಾಧಿಯಿಂದ ಜೀವಾತ್ಮನಿಗೆ ಕರ್ತೃತ್ವ ಬರುತ್ತದೆ. ದೇಹದ ಕ್ರಿಯೆಯು ಪಂಚವಾಯುಗಳ ಸಹಾಯಕ ಕ್ರಿಯೆಯಿಂದ ನಡೆಯುತ್ತದೆ. ದೈವವೆಂದರೆ ಇಂದ್ರಿಯಗಳಿಗೆ ಚೈತನ್ಯವನ್ನನು ಗ್ರಹಿಸುವ ಆದಿತ್ಯನೇ ಮೊದಲಾದ ಇಂದ್ರಿಯಾಭಿಮಾನಿದೇವತೆ ; ಅದೃಷ್ಟವಲ್ಲ.

**ಶರೀರವಾಙ್ಮನೋಭಿರ್ಯತ್ ಕರ್ಮ ಪ್ರಾರಭತೇ ನರಃ ।**
**ನ್ಯಾಯ್ಯಂ ವಾ ವಿಪರೀತಂ ವಾ ಪಂಚೈತೇ ತಸ್ಯ ಹೇತವಃ ॥ ೧೫**

ಮನುಷ್ಯನು ತನ್ನ ಶರೀರ ವಾಕ್ ಮನಸ್ಸು – ಇವುಗಳಿಂದ ಯಾವ ಕರ್ಮವನ್ನು ಆರಂಭಿಸುತ್ತಾನೋ – ಅದು ನ್ಯಾಯ್ಯ(ಧರ್ಮಯುಕ್ತ)ವಾಗಿರಲಿ ಅಥವಾ ವಿರುದ್ಧವಾಗಿ ಅನ್ಯಾಯ್ಯ(ಅಧರ್ಮಯುಕ್ತ)ವಾಗಿರಲಿ ಈ ಐದು ಅದಕ್ಕೆ ಕಾರಣಗಳಾಗುತ್ತವೆ.

**ತತ್ರೈವಂ ಸತಿ ಕರ್ತಾರಮಾತ್ಮಾನಂ ಕೇವಲಂ ತು ಯಃ ।**
**ಪಶ್ಯತ್ಯಕೃತಬುದ್ಧಿತ್ವಾತ್ ನ ಸ ಪಶ್ಯತಿ ದುರ್ಮತಿಃ ॥ ೧೬**

ಕರ್ಮದ ವಿಷಯದಲ್ಲಿ ಹೀಗೆ ಐದು ಕಾರಣಗಳು ಇರುವಾಗ, (ಶಾಸ್ತ್ರಾಧ್ಯಯನ ಗುರೂಪದೇಶಗಳ ಮೂಲಕ) ಬುದ್ಧಿಸಂಸ್ಕಾರವನ್ನು ಪಡೆಯದಿರುವುದರಿಂದ ಯಾವಾತನು ಕೇವಲ ಶುದ್ಧನಾದ ಆತ್ಮನನ್ನು ಕರ್ತನೆಂದು ತಿಳಿಯುತ್ತಾನೋ ಅವನು ತತ್ತ್ವವನ್ನರಿಯನು. ಅವನು ದುರ್ಬುದ್ಧಿಯೇ ಸರಿ.

**ಯಸ್ಯ ನಾಹಂಕೃತೋ ಭಾವೋ ಬುದ್ಧಿರ್ಯಸ್ಯ ನ ಲಿಪ್ಯತೇ ।**
**ಹತ್ವಾಪಿ ಸ ಇಮಾಂಲ್ಲೋಕಾನ್ ನ ಹಂತಿ ನ ನಿಬಧ್ಯತೇ ॥ ೧೭**

(ಬುದ್ಧಿಸಂಸ್ಕಾರವನ್ನು ಪಡೆದ) ಯಾವಾತನ ಭಾವನೆಯು ನಾನು ಕರ್ತನೆಂಬ

ಅಹಂಕಾರವನ್ನು ಹೊಂದಿಲ್ಲವೋ ಯಾವಾತನ ಬುದ್ಧಿಯು ನಾನು ಕರ್ಮವನ್ನು ಮಾಡಿದೆನೆಂಬ ಸೋಂಕನ್ನು ಪಡೆದಿಲ್ಲವೋ ಅವನು ಈ ಎಲ್ಲ ಪ್ರಾಣಿಗಳನ್ನು ಕೊಂದರೂ ಕೊಂದವನಲ್ಲ. ಅವನು ಕರ್ಮಬಂಧನಕ್ಕೆ ಒಳಗಾಗುವುದೂ ಇಲ್ಲ.

**ವಿವರಣೆ :** 'ಪ್ರಾಣಿಗಳನ್ನು ಕೊಂದರೂ' ಎಂದದ್ದು ವ್ಯವಹಾರದೃಷ್ಟಿಯಿಂದ. 'ಕೊಂದವನಲ್ಲ' ಎಂದದ್ದು ಪಾರಮಾರ್ಥಿಕದೃಷ್ಟಿಯಿಂದ.

**ಜ್ಞಾನಂ ಜ್ಞೇಯಂ ಪರಿಜ್ಞಾತಾ ತ್ರಿವಿಧಾ ಕರ್ಮಚೋದನಾ ।**
**ಕರಣಂ ಕರ್ಮ ಕರ್ತೇತಿ ತ್ರಿವಿಧಃ ಕರ್ಮಸಂಗ್ರಹಃ ॥ ೧೮**

ಒಟ್ಟಿನಲ್ಲಿ ಹೇಳುವುದೇನೆಂದರೆ : ವಸ್ತುವಿನ ಸಾಮಾನ್ಯಜ್ಞಾನ, ಜ್ಞೇಯವಾದ ವಸ್ತು, ಅದನ್ನು ಅರಿಯುವ ಜ್ಞಾತೃ – ಇವು ಮೂರು ಕ್ರಿಯೆಯನ್ನು ಮಾಡಲು ಪ್ರವರ್ತಕಗಳು. ಕರಣವಾದ ಇಂದ್ರಿಯ, ಕರ್ಮವಾದ ವಸ್ತು, ಕರ್ತ – ಇವು ಮೂರು ಸಂಗ್ರಹವಾಗಿ ಕ್ರಿಯೆಗೆ ಆಶ್ರಯವಾದವುಗಳು.

**ವಿವರಣೆ :** ಜ್ಞಾನವು ಕ್ರಿಯೆಗೆ ಪ್ರೇರಕ. ಹೀಗೆ ಮಾಡಬೇಕೆಂದು ಜ್ಞಾನವಾದ ಮೇಲೆ ಕ್ರಿಯೆ ಹುಟ್ಟುತ್ತದೆ. ಜ್ಞಾನವಾಗಬೇಕಾದರೆ ಜ್ಞೇಯ, ಜ್ಞಾತೃಗಳಿರಬೇಕು. ಕರಣ, ಕರ್ಮ, ಕರ್ತ – ಇವು ಮೂರು ವ್ಯಾಕರಣಶಾಸ್ತ್ರಪ್ರಸಿದ್ಧವಾದ ಕಾರಕಗಳು. ಸಾಧಕತಮವಾದದ್ದು ಕರಣ (instrument). ಪ್ರಕೃತದಲ್ಲಿ ಇಂದ್ರಿಯವರ್ಗ. ಕ್ರಿಯೆಗೆ ವಿಷಯವಾದದ್ದು ಕರ್ಮ (object). ಗಡಿಗೆಯನ್ನು ಮಾಡಿದನು – ಎಂಬಲ್ಲಿ ಗಡಿಗೆಯೂ ಚಂದ್ರನನ್ನು ನೋಡಿದನು – ಎಂಬಲ್ಲಿ ಚಂದ್ರನೂ ಕರ್ಮ. ಸ್ವತಂತ್ರವಾಗಿ ಕ್ರಿಯೆಯನ್ನು ನಡೆಸತಕ್ಕವನು ಕರ್ತ. ಪ್ರಕೃತದಲ್ಲಿ ಅಂತಃಕರಣೋಪಾಧಿಯುಳ್ಳ ಜೀವನೇ ಕರ್ತ. ಅವನೇ ಜ್ಞಾತೃವೂ ಹೌದು. ಉಪಾಧಿಯಾದ ಅಂತಃಕರಣವೇ ಕರ್ತೃ, ಜ್ಞಾತೃ – ಎಂಬುದು ಸಿದ್ಧಾಂತ. ಶುದ್ಧಾತ್ಮನು ಕ್ರಿಯಾಪ್ರೇರಕನೂ ಅಲ್ಲ, ಕ್ರಿಯಾಶ್ರಯನೂ ಅಲ್ಲ.

**ಜ್ಞಾನಂ ಕರ್ಮ ಚ ಕರ್ತಾ ಚ ತ್ರಿಧೈವ ಗುಣಭೇದತಃ ।**
**ಪ್ರೋಚ್ಯತೇ ಗುಣಸಂಖ್ಯಾನೇ ಯಥಾವಚ್ಛೃಣು ತಾನ್ಯಪಿ ॥ ೧೯**

ಜ್ಞಾನ, ಕ್ರಿಯೆ, ಕರ್ತಾ – ಇವು ಗುಣಭೇದಗಳಿಂದ ಮೂರೇ ವಿಧವಾಗಿವೆಯೆಂದು ಕಾಪಿಲಸಾಂಖ್ಯಶಾಸ್ತ್ರದಲ್ಲಿ ಹೇಳಿದೆ. ಯಥಾವತ್ತಾಗಿ – ಶಾಸ್ತ್ರೋಕ್ತ ರೀತಿಯಲ್ಲಿ ಅದನ್ನೂ ಹೇಳುತ್ತೇನೆ, ಕೇಳು.

**ವಿವರಣೆ :** ಇಲ್ಲಿ ಕರ್ಮವೆಂದರೆ ಉಳಿದ ಕಡೆ ಹೇಳಿರುವಂತೆ ಕ್ರಿಯೆ. ಹಿಂದಿನ ಶ್ಲೋಕದಲ್ಲಿ ಹೇಳಿದ ಕರ್ಮಕಾರಕವಲ್ಲ. 'ತ್ರಿಧೈವ' ಎಂದು ಏವಕಾರವನ್ನು

ಸೇರಿಸಿದ್ದು ಆತ್ಮಾತಿರಿಕ್ತವಾದ ಸರ್ವವೂ ಗುಣಮಯವೆಂದೂ ಗುಣದ ಉಪಾಧಿಯಿಂದಲೇ ಜೀವಾತ್ಮನು ಕರ್ತೃವೆಂದೂ ಸ್ಪಷ್ಟಗೊಳಿಸುವುದಕ್ಕಾಗಿ. ಗುಣಸಂಖ್ಯಾನವೆಂದರೆ ಗುಣಮಯ ಸೃಷ್ಟಿಯನ್ನು ಹೇಳತಕ್ಕ, ಕಪಿಲ ಮುನಿ ಪ್ರಣೀತವಾದ ಸಾಂಖ್ಯಶಾಸ್ತ್ರ. ಅದು ಪರಮಾರ್ಥದಲ್ಲಿ ಬ್ರಹ್ಮ ಒಂದೇ ಎಂಬ ವಿಷಯದಲ್ಲಿ ನಮಗೆ ವಿರುದ್ಧವಾಗಿದ್ದರೂ ಗುಣ, ಗುಣಗಳ ಕಾರ್ಯ, ಕರ್ತೃತ್ವ, ಭೋಕ್ತೃತ್ವಗಳ ವಿಷಯದಲ್ಲಿ ಪ್ರಮಾಣವೆಂದು ವೇದಾಂತವು ಅಂಗೀಕರಿಸಿದೆ.

ಜ್ಞಾನದ ಮೂರು ಭೇದಗಳು –

**ಸರ್ವಭೂತೇಷು ಯೇನೈಕಂ ಭಾವಮವ್ಯಯಮೀಕ್ಷತೇ ।**
**ಅವಿಭಕ್ತಂ ವಿಭಕ್ತೇಷು ತಜ್ಜ್ಞಾನಂ ವಿದ್ಧಿ ಸಾತ್ತ್ವಿಕಮ್ ॥ ೨೦**

ಬಿಡಿಬಿಡಿಯಾಗಿ ಬೇರೆಬೇರೆಯಾಗಿರುವ ಬ್ರಹ್ಮಾದಿಸ್ಥಾವರಾಂತವಾದ ದೇಹಗಳಲ್ಲಿ ಯಾವ ವಿಭಾಗವೂ ಇಲ್ಲದಿರುವ, ಅವ್ಯಯವಾದ – ಕೂಟಸ್ಥವಾದ ಒಂದೇ ಒಂದು ಆತ್ಮವಸ್ತುವನ್ನು ಯಾವ ಜ್ಞಾನದಿಂದ ಕಾಣುತ್ತಾನೋ ಆ ಜ್ಞಾನವು ಸಾತ್ತ್ವಿಕವೆಂದು ತಿಳಿ.

**ವಿವರಣೆ :** ಆಕಾಶವು ಸರ್ವವ್ಯಾಪಿಯಾದರೂ ಹೇಗೆ ವಿಭಾಗವಿಲ್ಲದಿರುವುದೋ ಹಾಗೆ ಸರ್ವವ್ಯಾಪಿಯಾದ ಆತ್ಮದಲ್ಲಿ ಯಾವ ವಿಭಾಗವೂ ಇಲ್ಲ.

**ಪೃಥಕ್ತ್ವೇನ ತು ಯಜ್ಜ್ಞಾನಂ ನಾನಾಭಾವಾನ್ ಪೃಥಗ್ವಿಧಾನ್ ।**
**ವೇತ್ತಿ ಸರ್ವೇಷು ಭೂತೇಷು ತಜ್ಜ್ಞಾನಂ ವಿದ್ಧಿ ರಾಜಸಮ್ ॥ ೨೧**

ಸಮಸ್ತಭೂತಗಳಲ್ಲಿಯೂ ಒಂದೊಂದು ದೇಹಕ್ಕೆ ಬೇರೆಬೇರೆಯಾಗಿ ನಾನಾ ಪ್ರಕಾರದ ಅನೇಕ ಆತ್ಮರಿದ್ದಾರೆಂದು ಯಾವ ಜ್ಞಾನವು ತಿಳಿಯುತ್ತದೆಯೋ – ಎಂದರೆ – ಯಾವ ಜ್ಞಾನದಿಂದ ತಿಳಿದುಕೊಳ್ಳುವನೋ ಆ ಜ್ಞಾನವು ರಾಜಸವೆಂದು ತಿಳಿ.

**ವಿವರಣೆ :** ನಾನು ಸುಖಿ, ನಾನು ದುಃಖಿಯೆಂದು ಜನರಿಗೆ ಬೇರೆ ಬೇರೆ ಅನುಭವಗಳಿರುವುದರಿಂದ ಆತ್ಮರೂ ಅನೇಕರೆಂದು ಕೆಲವರು ತಿಳಿಯುತ್ತಾರೆ. ಶರೀರ, ಮನಸ್ಸು – ಎಂಬ ಉಪಾಧಿಗಳನ್ನು ಬೆರೆಸಿಕೊಂಡು ನಾನಾ ಆತ್ಮಗಳಿದ್ದಾರೆಂದು ತಿಳಿಯುವ ಈ ದ್ವೈತಭಾವನೆ ರಾಜಸ.

**ಯತ್ತು ಕೃತ್ಸ್ನವದೇಕಸ್ಮಿನ್ ಕಾರ್ಯೇ ಸಕ್ತಮಹೈತುಕಮ್ ।**
**ಅತತ್ತ್ವಾರ್ಥವದಲ್ಪಂ ಚ ತತ್ತಾಮಸಮುದಾಹೃತಮ್ ॥ ೨೨**

ಜೀವಾತ್ಮನಾಗಲಿ ಈಶ್ವರನೇ ಆಗಲಿ, ಕಾರ್ಯವಾದ ಒಂದು ದೇಹದಲ್ಲಿ ಅಥವಾ ಪ್ರತಿಮೆಯಲ್ಲಿ ಪೂರ್ತಿಯಾಗಿ ಅದೇ ಅಳತೆಯಲ್ಲಿ ತುಂಬಿಕೊಂಡಿದ್ದಾನೆಂಬ ಯುಕ್ತಿಹೀನವಾದ ಯಾವ ಜ್ಞಾನವುಂಟೋ ಅದು ತಾಮಸವೆನಿಸುತ್ತದೆ. ಅದು ಸತ್ಯವಾದ ತತ್ತ್ವವನ್ನು ತಿಳಿದದ್ದಲ್ಲ. ಅಂತಹ ಜ್ಞಾನವು ನೀಚವಾದದ್ದು.

**ವಿವರಣೆ :** ಆತ್ಮನು ಬೇರೆ ಬೇರೆ ದೇಹದಲ್ಲಿ ಅಷ್ಟೇ ದೇಹಪ್ರಮಾಣದಲ್ಲಿ ತುಂಬಿಕೊಂಡಿದ್ದಾನೆ. ಆದ್ದರಿಂದ ಆತ್ಮರು ಅನೇಕರು ಅಥವಾ ದೇಹವೇ ಆತ್ಮ ಪ್ರತಿಮೆಯೇ ಈಶ್ವರ – ಎಂದು ತಿಳಿಯುವುದು ತಾಮಸಜ್ಞಾನ. ಪ್ರಾಣಿದೇಹದಷ್ಟು ಆತ್ಮನ ಪ್ರಮಾಣವೆಂದು ಜೈನರು ಹೇಳುತ್ತಾರೆ. ಅದು ಸರಿಯಲ್ಲ.

ಕರ್ಮದ ಮೂರು ಭೇದಗಳು–

**ನಿಯತಂ ಸಂಗರಹಿತಮರಾಗದ್ವೇಷತಃ ಕೃತಮ್ ।**
**ಅಫಲಪ್ರೇಪ್ಸುನಾ ಕರ್ಮ ಯತ್ತತ್ಸಾತ್ತ್ವಿಕಮುಚ್ಯತೇ ॥ ೨೩**

ಫಲಾಪೇಕ್ಷೆಯನ್ನು ಹಿಡಿಯದವನು ನಾನು ಚೆನ್ನಾಗಿ ಮಾಡುತ್ತೇನೆ ಎಂಬ ಅಭಿಮಾನವನ್ನು (ಸಂಗವನ್ನು) ಇಡದೆ ರಾಗದ್ವೇಷರಹಿತವಾಗಿ ಕರ್ತವ್ಯ ಬುದ್ಧಿಯಿಂದ ಮಾಡುವ ನಿತ್ಯಕರ್ಮ ಯಾವುದುಂಟೋ ಅದು ಸಾತ್ತ್ವಿಕಕರ್ಮವೆನಿಸುತ್ತದೆ.

**ಯತ್ತು ಕಾಮೇಪ್ಸುನಾ ಕರ್ಮ ಸಾಹಂಕಾರೇಣ ವಾ ಪುನಃ ।**
**ಕ್ರಿಯತೇ ಬಹುಲಾಯಾಸಂ ತದ್ರಾಜಸಮುದಾಹೃತಮ್ ॥ ೨೪**

ಇನ್ನು ಫಲಾಪೇಕ್ಷೆಯುಳ್ಳವನು ಗರ್ವದಿಂದಲೂ ಬಹಳ ಆಯಾಸಪಟ್ಟುಕೊಂಡೂ ನಡೆಸತಕ್ಕ ಯಾವ ಕರ್ಮ ಉಂಟೋ ಅದು ರಾಜಸವೆನಿಸುತ್ತದೆ.

**ಅನುಬಂಧಂ ಕ್ಷಯಂ ಹಿಂಸಾಮನಪೇಕ್ಷ್ಯ ಚ ಪೌರುಷಮ್ ।**
**ಮೋಹಾದಾರಭ್ಯತೇ ಕರ್ಮ ಯತ್ತತ್ತಾಮಸಮುಚ್ಯತೇ ॥ ೨೫**

ಮುಂದೆ ಆಗಬಹುದಾದ ಪರಿಣಾಮವನ್ನೂ ತನ್ನ ಶಕ್ತಿಯ ಮತ್ತು ಹಣದ ವ್ಯಯವೆಷ್ಟೆಂಬುದನ್ನೂ ಆಗಬಹುದಾದ ಪ್ರಾಣಿಹಿಂಸೆಯನ್ನೂ ತನ್ನ ಸಾಮರ್ಥ್ಯವನ್ನೂ ಲಕ್ಷಿಸದೆ, ಅವಿವೇಕದಿಂದ ಆರಂಭಿಸುವ ಕರ್ಮವು ತಾಮಸವೆನಿಸುತ್ತದೆ.

**ವಿವರಣೆ :** ಈ ಮೂರು ಬಗೆಯ ಕರ್ಮಗಳನ್ನು ಮಾಡತಕ್ಕವರೂ ಆತ್ಮವಿದರಲ್ಲ – ಎಂದು ತಿಳಿಯಬೇಕು. ಸಾತ್ತ್ವಿಕಕರ್ಮವನ್ನು ಮಾಡತಕ್ಕವನು

ಕರ್ಮಯೋಗಿ.

ಮೂರು ಬಗೆಯ ಕರ್ತೃಗಳು–

**ಮುಕ್ತಸಂಗೋಽನಹಂವಾದೀ ಧೃತ್ಯುತ್ಸಾಹಸಮನ್ವಿತಃ ।**
**ಸಿದ್ಧ್ಯಸಿದ್ಧ್ಯೋರ್ನಿರ್ವಿಕಾರಃ ಕರ್ತಾ ಸಾತ್ತ್ವಿಕ ಉಚ್ಯತೇ ॥ ೨೬**

ನಾನು ಚೆನ್ನಾಗಿ ಮಾಡುತ್ತೇನೆ ಎಂಬ ಅಭಿನಿವೇಶವಿಲ್ಲದೆ, ಗರ್ವಪಡದೆ, ಧೈರ್ಯೋತ್ಸಾಹಗಳಿಂದ ಕೂಡಿ, ಫಲಿಸಲಿ ಫಲಿಸದಿರಲಿ ಹರ್ಷವಿಷಾದಗಳಿಲ್ಲದೆ ಕರ್ಮವನ್ನು ಮಾಡುವ ನಿರ್ವಿಕಾರಚಿತ್ತನಾದ ಕರ್ತನು ಸಾತ್ತ್ವಿಕನೆನಿಸಿ ಕೊಳ್ಳುತ್ತಾನೆ.

**ರಾಗೀ ಕರ್ಮಫಲಪ್ರೇಪ್ಸುರ್ಲುಬ್ಧೋ ಹಿಂಸಾತ್ಮಕೋಽಶುಚಿಃ ।**
**ಹರ್ಷಶೋಕಾನ್ವಿತಃ ಕರ್ತಾ ರಾಜಸಃ ಪರಿಕೀರ್ತಿತಃ ॥ ೨೭**

ಇಷ್ಟವಸ್ತುಗಳಲ್ಲಿ ಅನುರಾಗವನ್ನಿಟ್ಟು, ಕರ್ಮದ ಫಲದಲ್ಲಿ ಆಸೆಯನ್ನಿಟ್ಟು, ಲೋಭಿಯೂ ಪೀಡಾಕರನೂ ಅಶುಚಿಯೂ ಆಗಿ, ಕಾರ್ಯವು ಫಲಿಸಿದಾಗ ಹರ್ಷವನ್ನೂ ಫಲಿಸದಿದ್ದಾಗ ಶೋಕವನ್ನೂ ಪಡತಕ್ಕ ಕರ್ತನು ರಾಜಸ ನೆನಿಸುತ್ತಾನೆ.

**ಅಯುಕ್ತಃ ಪ್ರಾಕೃತಃ ಸ್ತಬ್ಧಃ ಶಠೋ ನೈಷ್ಕೃತಿಕೋಽಲಸಃ ।**
**ವಿಷಾದೀ ದೀರ್ಘಸೂತ್ರೀ ಚ ಕರ್ತಾ ತಾಮಸ ಉಚ್ಯತೇ ॥ ೨೮**

ಸಾಕಷ್ಟು ಎಚ್ಚರಿಕೆ ವಹಿಸದವನೂ ಸಂಸ್ಕಾರವಿಲ್ಲದ ಬಾಲಿಶನೂ ಅವಿನೀತನೂ ವಂಚಕನೂ ಅನ್ಯರ ಕೆಲಸವನ್ನು ಹಾಳುಮಾಡತಕ್ಕ ನೈಷ್ಕೃತಿಕನೂ ಸೋಮಾರಿಯೂ ಜೋಲುಮೋರೆಯವನೂ ಕಾಲಹರಣಮಾಡುತ್ತ ಬಹು ನಿಧಾನವಾಗಿ ಮಾಡುವ ದೀರ್ಘಸೂತ್ರಿಯೂ ಆದ ಕರ್ತನು ತಮೋಗುಣದವ ನೆನ್ನಿಸುತ್ತಾನೆ.

**ಬುದ್ಧೇರ್ಭೇದಂ ಧೃತೇಶ್ಚೈವ ಗುಣತಸ್ತ್ರಿವಿಧಂ ಶೃಣು ।**
**ಪ್ರೋಚ್ಯಮಾನಮಶೇಷೇಣ ಪೃಥಕ್ತ್ವೇನ ಧನಂಜಯ ॥ ೨೯**

ಧನಂಜಯ–ಅರ್ಜುನ, ಈಗ ಬುದ್ಧಿ ಮತ್ತು ಧೃತಿ – ಇವುಗಳಿಗೆ ಗುಣನಿಮಿತ್ತವಾಗಿರುವ ಮೂರು ವಿಧಗಳನ್ನು ಕೇಳು. ಅದನ್ನು ಪೂರ್ತಿಯಾಗಿ ವಿಂಗಡಿಸಿ ಹೇಳುತ್ತೇನೆ.

ಬುದ್ಧಿಯ ಮೂರು ವಿಧಗಳು–

**ಪ್ರವೃತ್ತಿಂ ಚ ನಿವೃತ್ತಿಂ ಚ ಕಾರ್ಯಾಕಾರ್ಯೇ ಭಯಾಭಯೇ ।**
**ಬಂಧಂ ಮೋಕ್ಷಂ ಚ ಯಾ ವೇತ್ತಿ ಬುದ್ಧಿಃ ಸಾ ಪಾರ್ಥ ಸಾತ್ತ್ವಿಕೀ ॥**

ಪ್ರವೃತ್ತಿಮಾರ್ಗವನ್ನೂ ನಿವೃತ್ತಿಮಾರ್ಗವನ್ನೂ ಶಾಸ್ತ್ರವಿಹಿತವಾದ್ದರಿಂದ ಮಾಡಬೇಕಾದ್ದನ್ನೂ ನಿಷಿದ್ಧವಾದ್ದರಿಂದ ಮಾಡಬಾರದ್ದನ್ನೂ ಯಾವುದರಲ್ಲಿ ಭಯವಿದೆಯೆಂಬುದನ್ನೂ ಯಾವುದರಲ್ಲಿ ಭಯವಿಲ್ಲವೆಂಬುದನ್ನೂ ಸಕಾರಣವಾಗಿ ಬಂಧಸ್ವರೂಪವನ್ನೂ ಸಕಾರಣವಾಗಿ ಮೋಕ್ಷಸ್ವರೂಪವನ್ನೂ ಯಾವ ಬುದ್ಧಿಯು ತಿಳಿದುಕೊಳ್ಳುತ್ತದೆಯೋ, ಪಾರ್ಥ, ಅದು ಸಾತ್ತ್ವಿಕಬುದ್ಧಿ.

**ವಿವರಣೆ :** ಹಿಂದೆ ಜ್ಞಾನದ ಮೂರು ಭೇದಗಳನ್ನು ಹೇಳಿದ್ದಾಗಿದೆ. ಜ್ಞಾನಕ್ಕೂ ಬುದ್ಧಿಗೂ ಇರುವ ವ್ಯತ್ಯಾಸವೇನು ? ಅಂತಃಕರಣವನ್ನು ಇಲ್ಲಿ ಬುದ್ಧಿಯೆಂದು ಹೇಳಿದ್ದಾರೆ. ಅದು ಒಂದು ಸೂಕ್ಷ್ಮದ್ರವ್ಯ. ಅದನ್ನು ಸೂಕ್ಷ್ಮೇಂದ್ರಿಯವೆಂದೂ ಹೇಳುತ್ತಾರೆ. ಅದು ಮಾಡುವ ವ್ಯಾಪಾರವನ್ನನುಸರಿಸಿ ಮನಸ್ಸು, ಬುದ್ಧಿ, ಚಿತ್ತ, ಅಹಂಕಾರ – ಎಂದು ಅಂತಃಕರಣದಲ್ಲಿ ನಾಲ್ಕು ಭೇದಗಳಾಗುತ್ತವೆ. ನಿಶ್ಚಯವನ್ನು ಮಾಡತಕ್ಕದ್ದು ಅಂತಃಕರಣದ (ಬುದ್ಧಿಯ) ಒಂದು ವೃತ್ತಿ ಎಂದರೆ ವ್ಯಾಪಾರವು ಜ್ಞಾನವೆನಿಸಿಕೊಳ್ಳುತ್ತದೆ. ಜ್ಞಾನವು ವೃತ್ತಿ, ಬುದ್ಧಿಯು ವೃತ್ತಿಮತ್–ವೃತ್ತಿಯುಕ್ತ ಎಂದು ಇವುಗಳಲ್ಲಿ ವ್ಯತ್ಯಾಸವಿದೆ. 'ಇದು ಕರ್ತವ್ಯ' ಎಂದು ಬುದ್ಧಿಯು ನಿರ್ಣಯಿಸಿದಾಗ 'ಇದು ಕರ್ತವ್ಯ' ಎಂಬ ಜ್ಞಾನವು ಬುದ್ಧಿಯಲ್ಲಿ ಹುಟ್ಟುತ್ತದೆ – ಎಂದು ಶಾಸ್ತ್ರಪ್ರಕ್ರಿಯೆ. ಉದಾಹರಣೆಗೆ: ಅಗ್ನಿಯು ಒಂದು ದ್ರವ್ಯ, ಸುಡುವುದು ಅದರ ವ್ಯಾಪಾರ. ಜಲ ಒಂದು ದ್ರವ್ಯ, ಒದ್ದೆ ಮಾಡುವುದು ಅದರ ವ್ಯಾಪಾರ. ಅಂತಃಕರಣವೆಂಬ ಉಪಾಧಿಯಿಂದ ಕೂಡಿದ ಚಿದಾಭಾಸನನ್ನು ಜೀವ ಎನ್ನುತ್ತಾರೆ. ಜೀವನೇ ಕರ್ತಾ. ಬುದ್ಧಿಯು ಅವನ ಕರಣ. ಇಲ್ಲಿ ಕರಣವನ್ನೇ ಕರ್ತೃವಿನಂತೆ ಭಾವಿಸಿ 'ಯಾವ ಬುದ್ಧಿಯು ತಿಳಿದುಕೊಳ್ಳುತ್ತದೆಯೋ' ಎಂದು ಹೇಳಿದೆ. ಬುದ್ಧಿಯೆಂಬ ಅಂತಃಕರಣದಲ್ಲಿ ಜ್ಞಾನವು ಹುಟ್ಟುತ್ತದೆ ಎಂದರ್ಥ.

**ಯಯಾ ಧರ್ಮಮಧರ್ಮಂ ಚ ಕಾರ್ಯಂ ಚಾಕಾರ್ಯಮೇವ ಚ ।**
**ಅಯಥಾವತ್ಪ್ರಜಾನಾತಿ ಬುದ್ಧಿಃ ಸಾ ಪಾರ್ಥ ರಾಜಸೀ ॥ ೩೧**

ಯಾವುದು ಧರ್ಮಾಧರ್ಮಗಳನ್ನೂ ಕಾರ್ಯಾಕಾರ್ಯಗಳನ್ನೂ ವಿಮರ್ಶಿಸಿಯೂ ಯಥಾವತ್ತಾಗಿ ತಿಳಿದುಕೊಳ್ಳದೇ ಹೋಗುವುದೋ ಅದು ರಾಜಸ ಬುದ್ಧಿ.

**ಅಧರ್ಮಂ ಧರ್ಮಮಿತಿ ಯಾ ಮನ್ಯತೇ ತಮಸಾವೃತಾ ।**
**ಸರ್ವಾರ್ಥಾನ್ವಿಪರೀತಾಂಶ್ಚ ಬುದ್ಧಿಃ ಸಾ ಪಾರ್ಥ ತಾಮಸೀ ॥ ೩೨**

ಯಾವುದು ತಮೋಗುಣದ ಆವರಣಕ್ಕೆ ಒಳಗಾಗಿ ಅಧರ್ಮವನ್ನು ಧರ್ಮವೆಂದೂ ಜ್ಞೇಯವಾದ ಸರ್ವವಿಷಯವನ್ನು ತಲೆಕೆಳಗಾಗಿಯೂ ತಿಳಿದುಕೊಳ್ಳುತ್ತದೆಯೋ, ಪಾರ್ಥ, ಅದು ತಾಮಸಬುದ್ಧಿ.

ಧೃತಿಯು ಮೂರು ವಿಧಗಳು–

**ಧೃತ್ಯಾ ಯಯಾ ಧಾರಯತೇ ಮನಃಪ್ರಾಣೇಂದ್ರಿಯಕ್ರಿಯಾಃ ।**
**ಯೋಗೇನಾವ್ಯಭಿಚಾರಿಣ್ಯಾ ಧೃತಿಃ ಸಾ ಪಾರ್ಥ ಸಾತ್ತ್ವಿಕೀ ॥ ೩೩**

ಚಿತ್ತದ ಏಕಾಗ್ರತೆಯೆಂಬ ಯೋಗದಿಂದ ಅವ್ಯಭಿಚರಿತವಾದ ಎಂದರೆ ಅನ್ಯವಿಷಯಕ್ಕೆ ಹೋಗಿ ಏರುಪೇರನ್ನು ಪಡೆಯದ ಯಾವ ಧೃತಿಯಿಂದ ಮನಸ್ಸು ಪ್ರಾಣ ಮತ್ತು ಇಂದ್ರಿಯಗಳ ವ್ಯಾಪಾರಗಳನ್ನು ಅನ್ಯತ್ರ ಚಲಿಸದಂತೆ ಬಿಗಿಹಿಡಿದುಕೊಳ್ಳುತ್ತಾನೋ ಅಂತಹ ಧೃತಿಯು ಸಾತ್ತ್ವಿಕವಾದದ್ದು.

**ವಿವರಣೆ :** ಧೃತಿಯೂ ಸಹ ಒಂದು ಅಂತಃಕರಣವೃತ್ತಿ. ಧೀರತೆಯಿಂದ ಪಟ್ಟುಹಿಡಿಯುವುದೆಂದರ್ಥ. (Firmness, self Command). ಮನಸ್ಸು – ಮೊದಲಾದವುಗಳ ಕ್ರಿಯೆಯನ್ನು ಧರ್ಮವಿರುದ್ಧವಾಗಿ ಹೋಗದಂತೆ ಬಿಗಿಹಿಡಿಯುವುದು ಸಾತ್ತ್ವಿಕಧೃತಿ.

**ಯಯಾ ತು ಧರ್ಮಕಾಮಾರ್ಥಾನ್ ಧೃತ್ಯಾ ಧಾರಯತೇಽರ್ಜುನ ।**
**ಪ್ರಸಂಗೇನ ಫಲಾಕಾಂಕ್ಷೀ ಧೃತಿಃ ಸಾ ಪಾರ್ಥ ರಾಜಸೀ ॥ ೩೪**

ಆದರೆ ಯಾವ ಧೃತಿಯಿಂದ ಧರ್ಮ, ಅರ್ಥ, ಕಾಮಗಳು ತನಗೆ ಬೇಕೆಂದು ಮನಸ್ಸಿನಲ್ಲಿ ನಿಶ್ಚಯಿಸಿಕೊಳ್ಳುತ್ತಾನೋ ಆಯಾ ಸಂದರ್ಭಕ್ಕೆ ತಕ್ಕಹಾಗೆ ಫಲವನ್ನೂ ಬಯಸುತ್ತಾನೋ ಆ ಧೃತಿಯು ರಾಜಸವಾದದ್ದು.

**ಯಯಾ ಸ್ವಪ್ನಂ ಭಯಂ ಶೋಕಂ ವಿಷಾದಂ ಮದಮೇವ ಚ ।**
**ನ ವಿಮುಂಚತಿ ದುರ್ಮೇಧಾ ಧೃತಿಃ ಸಾ ಪಾರ್ಥ ತಾಮಸೀ ॥ ೩೫**

ತಿಳಿಗೇಡಿಯಾದವನು ಯಾವ ಧೃತಿಯಿಂದ ನಿದ್ರೆ, ಏನಾಗುವುದೋ ಎಂಬ ಹೆದರಿಕೆ, ದುಃಖ, ಅನಿಷ್ಟ ಪ್ರಾಪ್ತಿಯಾದಾಗ ಜೋಲುಮೋರೆಹಾಕುವ ವಿಷಾದ, ಸೊಕ್ಕು ಇವುಗಳನ್ನು ಬಿಡುವುದಿಲ್ಲವೋ – ಮತ್ತೆಮತ್ತೆ ಅನುಭವಿಸುತ್ತಲೇ ಇರುವನೋ, ಅರ್ಜುನ, ಅದು ತಾಮಸವಾದ ಧೃತಿ.

ಇವೆಲ್ಲವುಗಳ ಫಲವಾದ ಸುಖವೂ ಮೂರು ವಿಧ–

**ಸುಖಂ ತ್ವಿದಾನೀಂ ತ್ರಿವಿಧಂ ಶೃಣು ಮೇ ಭರತರ್ಷಭ ।**
**ಅಭ್ಯಾಸಾದ್ರಮತೇ ಯತ್ರ ದುಃಖಾಂತಂ ಚ ನಿಗಚ್ಛತಿ ॥ ೩೬**

ಭರತಕುಲೋತ್ತಮ, ಸುಖವು ಮೂರು ವಿಧವಾಗಿರುವುದನ್ನು ಹೇಳುತ್ತೇನೆ, ಕೇಳು. ಅಭ್ಯಾಸ ಮಾಡುತ್ತ ಕ್ರಮಕ್ರಮವಾಗಿ ಯಾವ ಸುಖದಲ್ಲಿ ಓಲಾಡುತ್ತಾನೋ (ವಿಷಯಸುಖದಂತೆ ಥಟ್ಟನೆ ಧುಮುಕುವುದಿಲ್ಲವೋ) ದುಃಖದ ಕೊನೆಯನ್ನೇ ಮುಟ್ಟಿಬಿಡುತ್ತಾನೋ – (ಅಂತಹ ಸಾತ್ತ್ವಿಕಸುಖದ ಲಕ್ಷಣವನ್ನು ಮೊದಲು ಹೇಳುತ್ತೇನೆ) ಅದು ಯಾವುದೆಂದರೆ–

**ಯತ್ತದಗ್ರೇ ವಿಷಮಿವ ಪರಿಣಾಮೇಽಮೃತೋಪಮಮ್ ।**
**ತತ್ಸುಖಂ ಸಾತ್ತ್ವಿಕಂ ಪ್ರೋಕ್ತಮಾತ್ಮಬುದ್ಧಿಪ್ರಸಾದಜಮ್ ॥ ೩೭**

ಯಾವ ಸುಖವು ಮೊದಲು ಅದಕ್ಕಾಗಿ ಯತ್ನಿಸುವ ಕಾಲದಲ್ಲಿ ವಿಷದಂತೆ ಕಹಿಯಾಗಿ ದುಃಖಕಾರಿಯಾಗಿರುವುದೋ ಪರಿಣಾಮದಲ್ಲಿ ಅಮೃತದಂತೆ ಸಿಹಿಯಾಗಿ ಆನಂದಮಯವಾಗಿರುವುದೋ ಅದು ಸಾತ್ತ್ವಿಕವಾದ ಸುಖ. ಆತ್ಮವಿಷಯಕವಾದ ಬುದ್ಧಿಯ ನೈರ್ಮಲ್ಯದಿಂದ ಅದು ಹುಟ್ಟುತ್ತದೆ.

**ವಿವರಣೆ :** ಈ ಸುಖವನ್ನು ಪಡೆಯಲು ಆರಂಭದಲ್ಲಿ ವೈರಾಗ್ಯ, ಚಿತ್ತದ ಏಕಾಗ್ರತೆ, ಧ್ಯಾನ–ಮೊದಲಾದವು ಇರಬೇಕಾದ್ದರಿಂದ ಕಷ್ಟಕರವಾಗಿ ಕಾಣುತ್ತದೆ. ಪರಿಣಾಮದಲ್ಲಿ ವೈರಾಗ್ಯಾದಿಗಳು ಪರಿಪಾಕಗೊಂಡಾಗ ಆ ಸುಖವೇ ಪರಮರಮಣೀಯವಾಗಿರುತ್ತದೆ. ಬುದ್ಧಿಯು ರಜೋಗುಣ ತಮೋಗುಣಗಳ ಕೊಳೆಯನ್ನು ನೀಗಿಕೊಂಡಾಗ ಅದರಲ್ಲಿ ನೈರ್ಮಲ್ಯವುಂಟಾಗುತ್ತದೆ.

**ವಿಷಯೇಂದ್ರಿಯಸಂಯೋಗಾದ್ಯತ್ತದಗ್ರೇಽಮೃತೋಪಮಮ್ ।**
**ಪರಿಣಾಮೇ ವಿಷಮಿವ ತತ್ಸುಖಂ ರಾಜಸಂ ಸ್ಮೃತಮ್ ॥ ೩೮**

ವಿಷಯಗಳಿಗೂ ಇಂದ್ರಿಯಗಳಿಗೂ ಸಂಬಂಧವಾದಾಗ ಅದರಿಂದ ಹುಟ್ಟುವ ಯಾವ ವಿಷಯಸುಖ ಉಂಟೋ ಅದು ಆರಂಭದಲ್ಲಿ, ಅಮೃತದಂತೆ ಇದ್ದು ಪರಿಣಾಮದಲ್ಲಿ ವಿಷಕ್ಕೆ ಸದೃಶವಾಗುತ್ತದೆ. ಅದು ರಾಜಸಸುಖವೆಂದು ಸ್ಮೃತವಾಗಿದೆ.

**ವಿವರಣೆ :** ಬಲ, ವೀರ್ಯ, ಉತ್ಸಾಹ, ಬುದ್ಧಿಶಕ್ತಿ – ಮೊದಲಾದವು ನಾಶವಾಗುವುದರಿಂದ ವಿಷಯಸುಖವು ಕೇಡನ್ನು ತಂದೊಡ್ಡುತ್ತದೆ. ನಾನಾ

ರೋಗಗಳಿಗೂ ಅದು ಕಾರಣ.

**ಯದಗ್ರೇ ಚಾನುಬಂಧೇ ಚ ಸುಖಂ ಮೋಹನಮಾತ್ಮನಃ ।**
**ನಿದ್ರಾಲಸ್ಯಪ್ರಮಾದೋತ್ಥಂ ತತ್ತಾಮಸಮುದಾಹೃತಮ್ ॥ ೩೯**

ಯಾವುದು ಬುದ್ಧಿಗೆ ಮಂಕನ್ನು ಹಿಡಿಸಿ ಮೊದಲಿನಿಂದ ಕಡೆಯುವರೆಗೆ ಸುಖವಾಗಿ ಕಾಣುವುದೋ ಆ ಸುಖವು ತಾಮಸವಾದದ್ದು. ನಿದ್ರೆ, ಸೋಮಾರಿತನ, ಮನೋರಾಜ್ಯವನ್ನು ಕಲ್ಪಿಸಿಕೊಂಡು ಕರ್ತವ್ಯದಲ್ಲಿ ಪ್ರಮಾದ – ಮುಂತಾದುದರಿಂದ ಇದು ಹುಟ್ಟುತ್ತದೆ.

**ಟಿಪ್ಪಣಿ :** ಮಾದಕವಸ್ತುಗಳ ಸೇವನೆಯಿಂದ ಕಾಣುವ ಸುಖವೂ ತಾಮಸ.

**ನ ತದಸ್ತಿ ಪೃಥಿವ್ಯಾಂ ವಾ ದಿವಿ ದೇವೇಷು ವಾ ಪುನಃ ।**
**ಸತ್ತ್ವಂ ಪ್ರಕೃತಿಜೈರ್ಮುಕ್ತಂ ಯದೇಭಿಃ ಸ್ಯಾತ್ತ್ರಿಭಿರ್ಗುಣೈಃ ॥ ೪೦**

ಈ ಪೃಥ್ವಿಯಲ್ಲಾಗಲಿ ಆಕಾಶದಲ್ಲಾಗಲಿ ದೇವತೆಗಳಲ್ಲಾಗಲಿ ಈ ಪ್ರಕೃತಿಜನ್ಯವಾದ ಮೂರು ಗುಣಗಳಿಂದ ಮುಕ್ತವಾದ ಒಂದು ಪ್ರಾಣಿಯಾಗಲಿ ವಸ್ತುವಾಗಲಿ ಇಲ್ಲವೇ ಇಲ್ಲ.

**ಬ್ರಾಹ್ಮಣಕ್ಷತ್ರಿಯವಿಶಾಂ ಶೂದ್ರಾಣಾಂ ಚ ಪರಂತಪ ।**
**ಕರ್ಮಾಣಿ ಪ್ರವಿಭಕ್ತಾನಿ ಸ್ವಭಾವಪ್ರಭವೈರ್ಗುಣೈಃ ॥ ೪೧**

ಹೇ ಪರಂತಪ, ಬ್ರಾಹ್ಮಣ ಕ್ಷತ್ರಿಯ ವೈಶ್ಯರಿಗೂ ಶೂದ್ರರಿಗೂ ಸ್ವಭಾವ ಜನ್ಯವಾದ ಗುಣಗಳಿಗೆ ಅನುಸಾರವಾಗಿ ಅವರವರ ಕರ್ಮಗಳು ಬೇರೆ ಬೇರೆಯಾಗಿ ಗೊತ್ತುಮಾಡಲ್ಪಟ್ಟಿವೆ.

**ವಿವರಣೆ :** ಸ್ವಭಾವ = ಈಶ್ವರನ ತ್ರಿಗುಣಾತ್ಮಕವಾದ ಮಾಯೆಯೆಂಬ ಪ್ರಕೃತಿ ಅಥವಾ ಜನ್ಮಾಂತರದಲ್ಲಿ ಅವರವರು ಪಡೆದ ಸಂಸ್ಕಾರವೇ ಸ್ವಭಾವ.

**ಶಮೋ ದಮಸ್ತಪಃ ಶೌಚಂ ಕ್ಷಾಂತಿರಾರ್ಜವಮೇವ ಚ ।**
**ಜ್ಞಾನಂ ವಿಜ್ಞಾನಮಾಸ್ತಿಕ್ಯಂ ಬ್ರಹ್ಮಕರ್ಮ ಸ್ವಭಾವಜಮ್ ॥ ೪೨**

ಬಾಹ್ಯೇಂದ್ರಿಯನಿಗ್ರಹ, ಮನೋನಿಗ್ರಹ, ತಪಸ್ಸು, ದೇಹವಾಙ್ಮನಸ್ಸುಗಳಲ್ಲಿ ಶುಚಿತ್ವ, ತಾಳ್ಮೆ, ಋಜುಬುದ್ಧಿ, ವೇದಾದಿಶಾಸ್ತ್ರಾರ್ಥಜ್ಞಾನ, ಸ್ವಾನುಭವ, ವೇದಾರ್ಥದಲ್ಲಿ ಅಚಲವಾದ ನಂಬಿಕೆ – ಇವು ಬ್ರಾಹ್ಮಣನಿಗೆ ಸ್ವಭಾವಜನ್ಯವಾದ ಕರ್ತವ್ಯಗಳು.

**ಶೌರ್ಯಂ ತೇಜೋ ಧೃತಿರ್ದಾಕ್ಷ್ಯಂ ಯುದ್ಧೇ ಚಾಪ್ಯಪಲಾಯನಮ್ ।**
**ದಾನಮೀಶ್ವರಭಾವಶ್ಚ ಕ್ಷಾತ್ರಂ ಕರ್ಮ ಸ್ವಭಾವಜಮ್ ॥ ೪೩**

ಪರಾಕ್ರಮ, ಎದುರಿಸುವ ಕೆಚ್ಚು, ಎಷ್ಟು ಶ್ರಮವಾದರೂ ಜಗ್ಗದಿರುವ ಪಟ್ಟು, ಯುದ್ಧದಲ್ಲಿ ಹೆದರಿ ಓಡದೆ ನಿಲ್ಲುವುದು, ಪಾತ್ರದಲ್ಲಿ ದಾನ, ಪ್ರಭುತ್ವ – ಇವು ಕ್ಷತ್ರಿಯನಿಗೆ ಸ್ವಭಾವಜನ್ಯವಾದ ಕರ್ತವ್ಯಗಳು.

**ಕೃಷಿಗೌರಕ್ಷ್ಯವಾಣಿಜ್ಯಂ ವೈಶ್ಯಕರ್ಮ ಸ್ವಭಾವಜಮ್ ।**
**ಪರಿಚರ್ಯಾತ್ಮಕಂ ಕರ್ಮ ಶೂದ್ರಸ್ಯಾಪಿ ಸ್ವಭಾವಜಮ್ ॥ .೪೪**

ಭೂವ್ಯವಸಾಯ, ಗೋರಕ್ಷಣೆ (ಪಶುಪಾಲನೆ), ವಾಣಿಜ್ಯ – ಇವು ವೈಶ್ಯನಿಗೆ ಸ್ವಭಾವಜನ್ಯವಾದ ಕರ್ಮಗಳು. ಸೇವೆ – ಮುಂತಾದ ದೈಹಿಕಶ್ರಮಪಡುವುದು ಶೂದ್ರನಿಗೆ ಸ್ವಭಾವಜನ್ಯವಾದ ಕರ್ತವ್ಯ.

**ಸ್ವೇ ಸ್ವೇ ಕರ್ಮಣ್ಯಭಿರತಃ ಸಂಸಿದ್ಧಿಂ ಲಭತೇ ನರಃ ।**
**ಸ್ವಕರ್ಮನಿರತಃ ಸಿದ್ಧಿಂ ಯಥಾ ವಿಂದತಿ ತಚ್ಛೃಣು ॥ ೪೫**

ಹೀಗಿರುವ ತನ್ನ ತನ್ನ ಕರ್ಮದಲ್ಲಿ ಶ್ರದ್ಧೆಯಿಂದ ತೊಡಗಿರುವ ಪ್ರತಿಯೊಬ್ಬ ಮನುಷ್ಯನೂ ಜ್ಞಾನನಿಷ್ಠಾಯೋಗ್ಯತೆಯೆಂಬ ಸಿದ್ಧಿಯನ್ನು ಪಡೆಯುತ್ತಾನೆ. ಸ್ವಕರ್ಮನಿರತನಾದವನು ಈ ಸಿದ್ಧಿಯನ್ನು ಹೇಗೆ ಪಡೆಯುತ್ತಾನೆಂಬುದನ್ನು ಕೇಳು.

**ಯತಃ ಪ್ರವೃತ್ತಿರ್ಭೂತಾನಾಂ ಯೇನ ಸರ್ವಮಿದಂ ತತಮ್ ।**
**ಸ್ವಕರ್ಮಣಾ ತಮಭ್ಯರ್ಚ್ಯ ಸಿದ್ಧಿಂ ವಿಂದತಿ ಮಾನವಃ ॥ ೪೬**

ಅಂತರ್ಯಾಮಿಯಾದ ಯಾವ ಈಶ್ವರನಿಂದ ಸಮಸ್ತಭೂತಗಳ ಉತ್ಪತ್ತಿ ಯಾಗಿದೆಯೋ ಅಥವಾ ಆ ಭೂತಗಳ ಕ್ರಿಯೆಯು ನಡೆಯುತ್ತದೆಯೋ, ಯಾರಿಂದ ಇದೆಲ್ಲ ವಿಶ್ವವೂ ವ್ಯಾಪ್ತವಾಗಿದೆಯೋ ಆ ಈಶ್ವರನನ್ನು ಮಾನವನು ತನಗೆ ವಿಹಿತಕರ್ಮದಿಂದ ಅರ್ಚಿಸಿದರೆ, ಜ್ಞಾನನಿಷ್ಠಾಯೋಗ್ಯತೆಯೆಂಬ ಸಿದ್ಧಿಯನ್ನು ಪಡೆಯುತ್ತಾನೆ.

**ಶ್ರೇಯಾನ್ ಸ್ವಧರ್ಮೋ ವಿಗುಣಃ ಪರಧರ್ಮಾತ್ ಸ್ವನುಷ್ಠಿತಾತ್ ।**
**ಸ್ವಭಾವನಿಯತಂ ಕರ್ಮ ಕುರ್ವನ್ನಾಪ್ನೋತಿ ಕಿಲ್ಬಿಷಮ್ ॥ ೪೭**

ತನ್ನ ಧರ್ಮವು ಯಾವುದಾದರೂ ಕೊರತೆಯಿಂದ ಕೂಡಿದ್ದರೂ ಚೆನ್ನಾಗಿ ಅನುಷ್ಠಾನ ಮಾಡಿದ ಪರಮಧರ್ಮಕ್ಕಿಂತಲೂ ಸ್ವಧರ್ಮವು ಹೆಚ್ಚು

ಶ್ರೇಯಸ್ಕರವಾದದ್ದು. ಸ್ವಭಾವದಿಂದ ನಿಯತವಾದ ಸ್ವಕೀಯಕರ್ಮವನ್ನು ಆಚರಿಸತಕ್ಕವನಿಗೆ ಯಾವ ಪಾಪವೂ ತಗಲುವುದಿಲ್ಲ.

**ವಿವರಣೆ :** ಕ್ಷತ್ರಿಯನಿಗೆ ಬಂಧುಮಿತ್ರರನ್ನು ಯುದ್ಧದಲ್ಲಿ ಕೊಲ್ಲಬೇಕಾದ ಪ್ರಸಂಗವು ದೋಷವಾಗಿ ಕಾಣಬಹುದು. ಅದು ಅನಿವಾರ್ಯವಾದ್ದರಿಂದ ದೋಷಾವಹವಲ್ಲ.

**ಸಹಜಂ ಕರ್ಮ ಕೌಂತೇಯ ಸದೋಷಮಪಿ ನ ತ್ಯಜೇತ್ ।**
**ಸರ್ವಾರಂಭಾ ಹಿ ದೋಷೇಣ ಧೂಮೇನಾಗ್ನಿರಿವಾವೃತಾಃ ॥ ೪೮**

ಕೌಂತೇಯ, ತನ್ನ ಹುಟ್ಟಿನಿಂದಲೇ ಅನುಗುಣವಾಗಿ ಬಂದ ಕರ್ಮವು ದೋಷಯುಕ್ತವಾಗಿದ್ದರೂ ಅದನ್ನು ತ್ಯಜಿಸಬಾರದು. ಏಕೆಂದರೆ, ಬೆಂಕಿಯನ್ನು ಹೊಗೆಯು ಆವರಿಸಿಕೊಂಡಿರುವಂತೆ, ಸರ್ವಕರ್ಮಗಳಲ್ಲಿಯೂ ಒಂದು ಕೊರತೆ ಇದ್ದೇ ಇರುತ್ತದೆ.

**ವಿವರಣೆ :** ಆದ್ದರಿಂದ ಅರ್ಜುನು ತನಗೆ ವಿಹಿತವಾದ ಸ್ವಧರ್ಮದ ಕರ್ತವ್ಯವನ್ನು ಆಚರಿಸುತ್ತಿರಬೇಕು. ಕರ್ಮವನ್ನು ಪೂರ್ತಿಯಾಗಿ ತ್ಯಜಿಸಲು ಅವನಿಂದ ಶಕ್ಯವಲ್ಲ.

ಜ್ಞಾನಿಯು ಸರ್ವಕರ್ಮತ್ಯಾಗವನ್ನು ಮಾಡಬಲ್ಲನು. ಹೇಗೆಂದರೆ–

**ಅಸಕ್ತಬುದ್ಧಿಃ ಸರ್ವತ್ರ ಜಿತಾತ್ಮಾ ವಿಗತಸ್ಪೃಹಃ ।**
**ನೈಷ್ಕರ್ಮ್ಯಸಿದ್ಧಿಂ ಪರಮಾಂ ಸಂನ್ಯಾಸೇನಾಧಿಗಚ್ಛತಿ ॥ ೪೯**

(ಆಸಕ್ತಿಗೆ ಕಾರಣಗಳಾದ ಪುತ್ರಕಳತ್ರಾದಿ) ಸಮಸ್ತ ವಿಷಯಗಳಲ್ಲಿಯೂ ಆಸಕ್ತಿಯಿಲ್ಲದ ಬುದ್ಧಿಯುಳ್ಳವನೂ ಮನಸ್ಸನ್ನು ಜಯಿಸಿದವನೂ ಭೋಗದಲ್ಲಿ ಆಸೆಯನ್ನು ತೊರೆದವನೂ ಆದ ಮನುಷ್ಯನು ಸರ್ವಕರ್ಮಗಳ ಸಂನ್ಯಾಸದಿಂದ ಉತ್ಕೃಷ್ಟವಾದ ನೈಷ್ಕರ್ಮ್ಯಸಿದ್ಧಿಯನ್ನು ಪಡೆಯುತ್ತಾನೆ.

**ವಿವರಣೆ :** ನಿಷ್ಕರ್ಮವಾದ ಪರಬ್ರಹ್ಮವಸ್ತುವನ್ನು ಅರಿತುಕೊಂಡಾಗ ಸಾಧಕನು ನಿಷ್ಕರ್ಮನೆನಿಸುತ್ತಾನೆ. ಅದೇ ನೈಷ್ಕರ್ಮ್ಯಸಿದ್ಧಿ. ಅಥವಾ ನಿಷ್ಕ್ರಿಯವಾದ ಆತ್ಮಸ್ವರೂಪದಲ್ಲಿ ನೆಲೆನಿಲ್ಲುವುದು ನೈಷ್ಕರ್ಮ್ಯಸಿದ್ಧಿ. ಅವಿದ್ಯೆಯಿಂದ ಆತ್ಮನಲ್ಲಿ ಕರ್ಮವು ಆರೋಪಿತವಾಗಿದೆ. ಅವಿದ್ಯೆಯು ಪೂರ್ತಿಯಾಗಿ ತೊಲಗಿದ ಮೇಲೆ ಆತ್ಮನಾದ ತನ್ನಲ್ಲಿ ಯಾವ ಕರ್ಮವೂ ಇಲ್ಲ. 'ಗುಣಾ ಗುಣೇಷು ವರ್ತಂತೇ' (೩–೨೮) – ಎಂದು ತಿಳಿಯುತ್ತಾನೆ. ಆದ್ದರಿಂದಲೇ 'ಸರ್ವಕರ್ಮಾಣಿ ಮನಸಾ ಸಂನ್ಯಸ್ಯಾಸ್ತೇ ಸುಖಂ ವಶೀ' (೫–೧೩) ಎಂಬ ಮಾತು

ಉಪಪನ್ನವಾಗುತ್ತದೆ. ದೇಹಧಾರಣೆಗೆ ಮಾಡುವ ಕರ್ಮವು ಅವನ ದೃಷ್ಟಿಯಲ್ಲಿ ಕರ್ಮವೇ ಅಲ್ಲ. ಇಂದ್ರಿಯಾದಿಗಳು ಕರ್ಮವನ್ನು ಮಾಡುತ್ತವೆ. ನಾನು ನಿಷ್ಕರ್ಮ–ಎಂದು ನಿರ್ಧರಿಸಿಕೊಳ್ಳುವುದೇ ನೈಷ್ಕರ್ಮ್ಯಸಿದ್ಧಿ.

**ಸಿದ್ಧಿಂ ಪ್ರಾಪ್ತೋ ಯಥಾ ಬ್ರಹ್ಮ ತಥಾಽಽಪ್ನೋತಿ ನಿಬೋಧ ಮೇ ।**
**ಸಮಾಸೇನೈವ ಕೌಂತೇಯ ನಿಷ್ಠಾ ಜ್ಞಾನಸ್ಯ ಯಾ ಪರಾ ॥ ೫೦**

(ಹಿಂದೆ ಹೇಳಿದ (೧೮–೪೬) ಜ್ಞಾನನಿಷ್ಠಾಯೋಗ್ಯತೆಯೆಂಬ) ಸಿದ್ಧಿಯನ್ನು ಪಡೆದುಕೊಂಡ ಕರ್ಮಯೋಗಿಯು ಬ್ರಹ್ಮವನ್ನು ಹೇಗೆ ಹೊಂದುತ್ತಾನೆಂಬು ದನ್ನು ಸಂಕ್ಷೇಪವಾಗಿ ಹೇಳುತ್ತೇನೆ, ಕೇಳು. ಕೌಂತೇಯ, ಈ ಬ್ರಹ್ಮಪ್ರಾಪ್ತಿ ಯೆಂಬುದು ಜ್ಞಾನದ ಪರಾನಿಷ್ಠೆ (ಕಡೆಯ ಅವಧಿ, ಮುಕ್ತಾಯ).

**ವಿವರಣೆ :** ಜ್ಞಾನನಿಷ್ಠಾಯೋಗ್ಯತೆಯೆಂಬ ಸಿದ್ಧಿಯಿಂದ ಆತ್ಮಜ್ಞಾನನಿಷ್ಠೆ ಯೆಂಬ ಪರಮಸಿದ್ಧಿ ದೊರೆಯುತ್ತದೆ.

**ಬುದ್ಧ್ಯಾ ವಿಶುದ್ಧಯಾ ಯುಕ್ತೋ ಧೃತ್ಯಾತ್ಮಾನಂ ನಿಯಮ್ಯ ಚ ।**
**ಶಬ್ದಾದೀನ್ವಿಷಯಾಂಸ್ತ್ಯಕ್ತ್ವಾ ರಾಗದ್ವೇಷೌ ವ್ಯುದಸ್ಯ ಚ ॥ ೫೧**

ಸಂಶಯ ಮತ್ತು ಭ್ರಾಂತಿಗಳಿಲ್ಲದೆ ಶುದ್ಧವಾದ ನಿಶ್ಚಯಾತ್ಮಕಬುದ್ಧಿಯಿಂದ ಯುಕ್ತನಾಗಿ, ಧೀರತೆಯಿಂದ ಶರೀರೇಂದ್ರಿಯಗಳನ್ನು ಹಿಡಿತದಲ್ಲಿಟ್ಟು, ಶಬ್ದಾದಿ ವಿಷಯಗಳನ್ನೂ ಅವುಗಳಲ್ಲಿ ರಾಗದ್ವೇಷಗಳನ್ನೂ ತಳ್ಳಿಹಾಕಿ–

**ವಿವರಣೆ :** ಸಾಧನೆಗೆ ದೇಹದ ಆವಶ್ಯಕತೆ ಇರುವುದರಿಂದ ದೇಹಯಾತ್ರೆಗೆ ಶಬ್ದ ಸ್ಪರ್ಶಾದಿ ವಿಷಯಗಳು ಬೇಕಾಗುತ್ತವೆ. ಆದ್ದರಿಂದ ಶರೀರಸ್ಥಿತಿಗೆ ಬೇಕಾದಷ್ಟು ಮಾತ್ರ ವಿಷಯಗಳನ್ನು ರಾಗದ್ವೇಷಗಳಿಲ್ಲದೆ ಸ್ವೀಕರಿಸಬೇಕು. ಶರೀರಸ್ಥಿತಿಗೆ ಅನಾವಶ್ಯಕವಾದ ವಿಷಯಗಳನ್ನು ಸಂಪೂರ್ಣವಾಗಿ ತ್ಯಜಿಸ ಬೇಕೆಂದು ಅಭಿಪ್ರಾಯ.

**ವಿವಿಕ್ತಸೇವೀ ಲಘ್ವಾಶೀ ಯತವಾಕ್ಕಾಯಮಾನಸಃ ।**
**ಧ್ಯಾನಯೋಗಪರೋ ನಿತ್ಯಂ ವೈರಾಗ್ಯಂ ಸಮುಪಾಶ್ರಿತಃ ॥ ೫೨**

ಜನಸಂಚಾರವಿಲ್ಲದ ಏಕಾಂತಸ್ಥಳವನ್ನು ಸೇರಿ, ಲಘುವಾದ ಆಹಾರವನ್ನು ಸ್ವೀಕರಿಸುತ್ತ, ಮಾತು ದೇಹ ಮನಸ್ಸುಗಳನ್ನು ನಿಯಂತ್ರಿಸಿದವನಾಗಿ, ದೃಷ್ಟವಾದ ಮತ್ತು ಅದೃಷ್ಟವಾದ ಫಲದಲ್ಲಿ ವೈರಾಗ್ಯವನ್ನು ತಳೆದು ಸರ್ವದಾ ಧ್ಯಾನಯೋಗ ಪರನಾಗಿರಬೇಕು.

**ವಿವರಣೆ :** ಧ್ಯಾನ = ಆತ್ಮಸ್ವರೂಪಚಿಂತನ, ಯೋಗ = ಆತ್ಮನಲ್ಲಿ ಮನಸ್ಸನ್ನು ಏಕಾಗ್ರವಾಗಿ ನಿಲ್ಲಿಸುವುದು. ಮಂತ್ರಜಪ – ಮೊದಲಾದ ಅನ್ಯಕರ್ತವ್ಯವಿಲ್ಲ ಎಂದು ಸೂಚಿಸುವುದಕ್ಕಾಗಿ ಶ್ಲೋಕದಲ್ಲಿ ನಿತ್ಯಂ = ಸರ್ವದಾ ಎಂದು ಹೇಳಿದೆ.

**ಅಹಂಕಾರಂ ಬಲಂ ದರ್ಪಂ ಕಾಮಂ ಕ್ರೋಧಂ ಪರಿಗ್ರಹಮ್ ।**
**ವಿಮುಚ್ಯ ನಿರ್ಮಮಃ ಶಾಂತೋ ಬ್ರಹ್ಮಭೂಯಾಯ ಕಲ್ಪತೇ ॥ ೫೩**

ಮತ್ತು ದೇಹೇಂದ್ರಿಯಾದಿಗಳಲ್ಲಿ ನಾನು ಎಂಬ ಅಹಂಕಾರವನ್ನೂ ಅಮಾನುಷಕಾರ್ಯವನ್ನು ಮಾಡಬಲ್ಲ ಯೋಗಬಲದ ಸಾಮರ್ಥ್ಯವನ್ನೂ ಹರ್ಷದಿಂದ ಉನ್ಮಾರ್ಗಕ್ಕೆಳಸುವ ದರ್ಪವನ್ನೂ ವಿಷಯಾಭಿಲಾಷೆಯನ್ನೂ ಕ್ರೋಧವನ್ನೂ ಶರೀರಯಾತ್ರೆಗೆ ಬೇಕಾಗದ ವಸ್ತುಗಳ ಪರಿಗ್ರಹವನ್ನೂ ಪರಿತ್ಯಜಿಸಿ, ಶರೀರವು ಉಳಿದಿರಬೇಕೆಂಬ ವಿಷಯದಲ್ಲಿ ಕೂಡ ಮಮತೆಯನ್ನು ವರ್ಜಿಸಿ, ಯಾವ ಹರ್ಷಾಯಾಸಗಳೂ ಇಲ್ಲದೆ ಶಾಂತನಾಗಿರತಕ್ಕ ಜ್ಞಾನನಿಷ್ಠನು ಬ್ರಹ್ಮವೇ ಆಗುವುದಕ್ಕೆ ಸಮರ್ಥನಾಗುತ್ತಾನೆ.

**ಬ್ರಹ್ಮಭೂತಃ ಪ್ರಸನ್ನಾತ್ಮಾ ನ ಶೋಚತಿ ನ ಕಾಂಕ್ಷತಿ ।**
**ಸಮಃ ಸರ್ವೇಷು ಭೂತೇಷು ಮದ್ಭಕ್ತಿಂ ಲಭತೇ ಪರಾಮ್ ॥ ೫೪**

ಹೀಗೆ ಕ್ರಮವಾಗಿ ಬ್ರಹ್ಮಸ್ವರೂಪನಾದವನು ತನ್ನಲ್ಲಿಯೇ ಪ್ರಸನ್ನತೆಯನ್ನು ತಳೆದು ಯಾವುದೊಂದು ಪದಾರ್ಥದ ಕೊರತೆಯಿಂದ ಕುದಿಯುವುದೂ ಇಲ್ಲ, ಅದನ್ನು ಬಯಸುವುದೂ ಇಲ್ಲ. ಆತನು ಸರ್ವಭೂತಗಳೂ ತನ್ನಂತೆಯೇ ಎಂದು ಅವುಗಳಲ್ಲಿ ಸಮಬುದ್ಧಿಯನ್ನಿಟ್ಟು ನನ್ನಲ್ಲಿ ಜ್ಞಾನವೆಂಬ ಪರಾಭಕ್ತಿಯನ್ನು ಪಡೆಯುತ್ತಾನೆ.

**ವಿವರಣೆ :** 'ಚತುರ್ವಿಧಾ ಭಜಂತೇ ಮಾಮ್' (೭–೧೬) ಎಂಬ ಶ್ಲೋಕದಲ್ಲಿ ಜ್ಞಾನಿಯು ತನ್ನ ಭಕ್ತನೆಂದು ಭಗವಂತನು ಹೇಳಿದ್ದಾನೆ. ನಾಲ್ಕು ಬಗೆಯ ಭಕ್ತರಲ್ಲಿ ಜ್ಞಾನಿಯೇ ಶ್ರೇಷ್ಠನಾದ ಭಕ್ತನೆಂದೂ 'ಜ್ಞಾನೀ ತ್ವಾತ್ಮೈವ ಮೇ ಮತಮ್' ಎಂದೂ ತಿಳಿಸಿದ್ದಾನೆ. ಆದ್ದರಿಂದ ಪರಾಭಕ್ತಿಯೆಂದರೆ ಆತ್ಮಜ್ಞಾನವೆಂದು ತಿಳಿಯಬೇಕು.

**ಭಕ್ತ್ಯಾ ಮಾಮಭಿಜಾನಾತಿ ಯಾವಾನ್ಯಶ್ಚಾಸ್ಮಿ ತತ್ತ್ವತಃ ।**
**ತತೋ ಮಾಂ ತತ್ತ್ವತೋ ಜ್ಞಾತ್ವಾ ವಿಶತೇ ತದನಂತರಮ್ ॥ ೫೫**

ಈ ಜ್ಞಾನಲಕ್ಷಣಭಕ್ತಿಯಿಂದ, ನಾನು (ಉಪಾಧಿಕೃತ ಭೇದಗಳ ಮೂಲಕ) ಎಷ್ಟು ಆಗಿದ್ದೇನೆ, ವಸ್ತುತಃ ನಿಜವಾದ ನನ್ನ ಸ್ವರೂಪವೇನೆಂಬುದು ಅವನಿಗೆ ಗೊತ್ತಾಗುತ್ತದೆ. ಆ ಭಕ್ತಿಯಿಂದ ನನ್ನನ್ನು ಅರಿತುಕೊಂಡು ಅನಂತರ ನನ್ನನ್ನು ಪ್ರವೇಶಿಸುತ್ತಾನೆ.

**ವಿವರಣೆ :** ಉಪಾಧಿಯಾದ ಮಾಯೆಯಿಂದ ಪರಮಾತ್ಮನು ಪಂಚ ಭೂತಾತ್ಮಕವಾದ ಸ್ಥಾವರಜಂಗಮಗಳ ರೂಪದಲ್ಲಿ ವಿಶ್ವವೇ ಆಗಿದ್ದಾನೆ. 'ನಾನು ಎಷ್ಟು ಆಗಿದ್ದೇನೆ' ಎಂಬುದರಿಂದ ಇದು ಸೂಚಿತವಾಗಿದೆ. ಪರಮಾರ್ಥದಲ್ಲಿ ನಾನು ಅಜ, ಅಜರ, ಅಮರ, ಅಭಯನಾಗಿದ್ದೇನೆ – ಎಂದು ಅಭಿಪ್ರಾಯ. 'ಅರಿತುಕೊಂಡು ಅನಂತರ ಪ್ರವೇಶಿಸುತ್ತಾನೆ' ಎಂಬಲ್ಲಿ ಅರಿತುಕೊಳ್ಳುವುದು, ಪ್ರವೇಶಿಸುವುದು ಎಂದು ಎರಡು ಕ್ರಿಯೆಗಳಿಲ್ಲ. ಅರಿತುಕೊಳ್ಳುವುದಕ್ಕೆ ಇನ್ನೊಂದು ಫಲವಿಲ್ಲ. ಅರಿತುಕೊಳ್ಳುವುದೂ ಪ್ರವೇಶಿಸುವುದೂ ಜ್ಞಾನವೆಂಬ ಒಂದೇ ಅರ್ಥವನ್ನು ಬೋಧಿಸುತ್ತವೆ. 'ಸ್ನಾನವನ್ನು ಮಾಡಿ ಸ್ನಾನಕ್ರಿಯೆಯನ್ನು ಮುಗಿಸಿದನು' ಎಂದು ಹೇಳುವಂತೆ ಈ ಪ್ರಯೋಗ. ಅನಂತರ ಎಂದರೆ ಜ್ಞಾನಸಮಕಾಲದಲ್ಲಿ – ನಡುವೆ ಕಾಲವನ್ನು ಕಳೆಯದೆ ಎಂದರ್ಥ.

**ಸರ್ವಕರ್ಮಾಣ್ಯಪಿ ಸದಾ ಕುರ್ವಾಣೋ ಮದ್ವ್ಯಪಾಶ್ರಯಃ ।**
**ಮತ್ಪ್ರಸಾದಾದವಾಪ್ನೋತಿ ಶಾಶ್ವತಂ ಪದಮವ್ಯಯಮ್ ॥ ೫೬**

ಎಲ್ಲ ಕರ್ಮಗಳನ್ನೂ (ನಿಷಿದ್ಧಕರ್ಮವನ್ನು ಸಹ) ಸದಾ ಮಾಡುತ್ತಿದ್ದರೂ ಸರ್ವಾತ್ಮಭಾವವನ್ನೂ ನನಗೆ ಅರ್ಪಿಸಿದ ಭಕ್ತನು ನನ್ನ ಅನುಗ್ರಹದಿಂದ ಶಾಶ್ವತವಾದ ವಿಷ್ಣುಪದವನ್ನು – ಮೋಕ್ಷವನ್ನು ಪಡೆಯುತ್ತಾನೆ.

**ವಿವರಣೆ :** ನನಗೆ ಶರಣಾದವನು ನಿಷಿದ್ಧಕರ್ಮವನ್ನು ಮಾಡುವುದೇ ಇಲ್ಲ. ಮಾಡುತ್ತಿದ್ದರೆ, ಅವನಿಗೆ ಸದ್ಬುದ್ಧಿಯನ್ನಿತ್ತು ಉದ್ಧರಿಸುವೆನು – ಎಂದು ಅಭಿಪ್ರಾಯ.

**ಚೇತಸಾ ಸರ್ವಕರ್ಮಾಣಿ ಮಯಿ ಸಂನ್ಯಸ್ಯ ಮತ್ಪರಃ ।**
**ಬುದ್ಧಿಯೋಗಮುಪಾಶ್ರಿತ್ಯ ಮಚ್ಚಿತ್ತಃ ಸತತಂ ಭವ ॥ ೫೭**

ಆದಕಾರಣ, ಇಹಕ್ಕಾಗಿ ಪರಕ್ಕಾಗಿ ಮಾಡುವ ಸಕಲಕರ್ಮಗಳನ್ನೂ ವಿವೇಕಬುದ್ಧಿಯಿಂದ ನನಗೆ – ಈಶ್ವರಾರ್ಪಣವಾಗಲಿ – ಎಂದು ಒಪ್ಪಿಸಿ, ವಾಸುದೇವನಾದ ನಾನೇ ಪರಮಗಮ್ಯನೆಂದು ತಿಳಿದಿರು: ಬುದ್ಧಿಯನ್ನು ಸಮಾಧಾನದಲ್ಲಿಟ್ಟುಕೊಂಡು ಅನನ್ಯಶರಣನಾಗಿ ಸತತವೂ ನನ್ನಲ್ಲಿಯೇ

ಚಿತ್ತವನ್ನಿಟ್ಟಿರು.

**ಟಿಪ್ಪಣಿ :** 'ಉಪಾಶ್ರಿತ್ಯ' ಎಂಬಲ್ಲಿ 'ಅಪಾಶ್ರಿತ್ಯ' ಎಂದೂ ಪಾಠ ಉಂಟು. ಅರ್ಥದಲ್ಲಿ ವ್ಯತ್ಯಾಸವಿಲ್ಲ.

**ಮಚ್ಚಿತ್ತಃ ಸರ್ವದುರ್ಗಾಣಿ ಮತ್ಪ್ರಸಾದಾತ್ತರಿಷ್ಯಸಿ ।**
**ಅಥ ಚೇತ್ತ್ವಮಹಂಕಾರಾನ್ನ ಶ್ರೋಷ್ಯಸಿ ವಿನಂಕ್ಷ್ಯಸಿ ॥ ೫೮**

ಹೀಗೆ ನೀನು ಸತತವೂ ನನ್ನಲ್ಲಿಯೇ ಚಿತ್ತವನ್ನಿಟ್ಟರೆ, ದುರ್ಗಮವಾದ ಎಲ್ಲ ಸಾಂಸಾರಿಕ ಕ್ಲೇಶಗಳನ್ನೂ ನನ್ನ ಅನುಗ್ರಹದಿಂದ ದಾಟಿಹೋಗುವೆ. ಹಾಗಲ್ಲದೆ 'ನಾನೇ ಬಲ್ಲವನು' ಎಂಬ ಅಹಂಕಾರದಿಂದ ನನ್ನ ಮಾತನ್ನು ಕೇಳದಿದ್ದರೆ ಹಾಳಾಗಿಹೋಗುತ್ತೀಯೆ !

**ಯದಹಂಕಾರಮಾಶ್ರಿತ್ಯ ನ ಯೋತ್ಸ್ಯ ಇತಿ ಮನ್ಯಸೇ ।**
**ಮಿಥ್ಯೈಷ ವ್ಯವಸಾಯಸ್ತೇ ಪ್ರಕೃತಿಸ್ತ್ವಾಂ ನಿಯೋಕ್ಷ್ಯತಿ ॥ ೫೯**

ನಾನು ಬಲ್ಲವನು – ಎಂಬ ಅಹಂಕಾರವನ್ನು ತಳೆದು 'ನಾನು ಯುದ್ಧ ಮಾಡುವುದಿಲ್ಲ' ಎಂದು ಸಂಕಲ್ಪಿಸುವೆಯಾದರೆ, ಈ ನಿನ್ನ ನಿಶ್ಚಯವು ವ್ಯರ್ಥವಾಗುವುದು. ಕ್ಷತ್ರಿಯಸ್ವಭಾವವು ನಿನ್ನನ್ನು ಯುದ್ಧಕ್ಕೆ ಪ್ರೇರಿಸಿಯೇ ಬಿಡುವುದು.

**ಸ್ವಭಾವಜೇನ ಕೌಂತೇಯ ನಿಬದ್ಧಃ ಸ್ವೇನ ಕರ್ಮಣಾ ।**
**ಕರ್ತುಂ ನೇಚ್ಛಸಿ ಯನ್ಮೋಹಾತ್ ಕರಿಷ್ಯಸ್ಯವಶೋಽಪಿ ತತ್ ॥ ೬೦**

ಕೌಂತೇಯ, ಕ್ಷತ್ರಿಯಸ್ವಭಾವಜನ್ಯವಾದ ನಿನ್ನ ಶೌರ್ಯಾದಿಕರ್ಮದಿಂದ ನೀನು ನಿಯಂತ್ರಿತನಾಗಿದ್ದೀಯೆ. ಅವಿವೇಕದಿಂದ ಯುದ್ಧವನ್ನು ಮಾಡಲೊಲ್ಲೆ ನೆನ್ನುತ್ತೀಯಲ್ಲ, ಪ್ರಕೃತಿಗೆ ವಶನಾಗಿ ಪರತಂತ್ರನಾದ ನೀನು ಯುದ್ಧವನ್ನು ಮಾಡಿಯೇ ತೀರುವೆ.

**ಈಶ್ವರಃ ಸರ್ವಭೂತಾನಾಂ ಹೃದ್ದೇಶೇಽರ್ಜುನ ತಿಷ್ಠತಿ ।**
**ಭ್ರಾಮಯನ್ ಸರ್ವಭೂತಾನಿ ಯಂತ್ರಾರೂಢಾನಿ ಮಾಯಯಾ ॥ ೬೧**

ಅರ್ಜುನ, ಪ್ರಭುವಾದ ಈಶ್ವರನು ಸರ್ವಪ್ರಾಣಿಗಳ ಹೃದಯದೇಶದಲ್ಲಿ ಇದ್ದು, ತಿರುಗುಯಂತ್ರವನ್ನೇರಿದ ಬೊಂಬೆಗಳನ್ನು ತಿರುಗಿಸುವಂತೆ, ತನ್ನ ಮಾಯೆಯಿಂದ ಈ ಪ್ರಾಣಿಗಳನ್ನು ತಿರುಗಿಸುತ್ತಿದ್ದಾನೆ.

**ಟಿಪ್ಪಣಿ :** 'ಯಂತ್ರಾರೂಢಾನಿ' ಎಂಬಲ್ಲಿ 'ಇವ' ಶಬ್ದವನ್ನು ಅಧ್ಯಾಹಾರ

ಮಾಡಿಕೊಳ್ಳಬೇಕು. ಅಥವಾ ದೇಹವೆಂಬ ಯಂತ್ರವನ್ನೇರಿದ ಪ್ರಾಣಿಜೀವರನ್ನು ಎಂದೂ ಅರ್ಥಮಾಡಬಹುದು.

**ತಮೇವ ಶರಣಂ ಗಚ್ಛ ಸರ್ವಭಾವೇನ ಭಾರತ ।**
**ತತ್ಪ್ರಸಾದಾತ್ಪರಾಂ ಶಾಂತಿಂ ಸ್ಥಾನಂ ಪ್ರಾಪ್ಸ್ಯಸಿ ಶಾಶ್ವತಮ್ ॥ ೬೨**

ಹೇ ಭರತಕುಲೋತ್ಪನ್ನ–ಅರ್ಜುನ, ಅಂತರ್ಯಾಮಿಯಾದ ಆ ಈಶ್ವರ ನನ್ನೇ ಸರ್ವಭಾವದಿಂದಲೂ – ಮನೋವಾಕ್ಕಾಯಗಳಿಂದಲೂ ಶರಣೆಂದು ಆಶ್ರಯಿಸು. ಆತನ ಅನುಗ್ರಹದಿಂದ ಪರಮಶಾಂತಿಯನ್ನೂ ಶಾಶ್ವತವಾದ ಪರಮಪದವನ್ನೂ ಪಡೆಯುವೆ.

**ಇತಿ ತೇ ಜ್ಞಾನಮಾಖ್ಯಾತಂ ಗುಹ್ಯಾದ್ಗುಹ್ಯತರಂ ಮಯಾ ।**
**ವಿಮೃಶ್ಯೈತದಶೇಷೇಣ ಯಥೇಚ್ಛಸಿ ತಥಾ ಕುರು ॥ ೬೩**

ಈ ಪ್ರಕಾರವಾಗಿ ರಹಸ್ಯಗಳಲ್ಲಿ ಅತ್ಯಂತ ರಹಸ್ಯವಾದ ಈ ಜ್ಞಾನವನ್ನು ನಿನಗೆ ಹೇಳಿದ್ದೇನೆ. ಇದೆಲ್ಲವನ್ನೂ ಪೂರ್ತಿಯಾಗಿ ಪರ್ಯಾಲೋಚಿಸಿ, ನಿನಗೆ ಹೇಗೆ ಇಚ್ಛೆಯಾಗುವುದೋ ಹಾಗೆ ಮಾಡು.

**ವಿವರಣೆ :** ಯೋಗ್ಯನಾದ ಅಧಿಕಾರಿಗೆ ಮಾತ್ರ ಬ್ರಹ್ಮವಿದ್ಯೆಯನ್ನು ಹೇಳಬಹುದಾದ್ದರಿಂದ ಇದು ಪರಮರಹಸ್ಯವಾದ ವಿದ್ಯೆ. ಇಷ್ಟು ಉಪದೇಶವನ್ನು ಪಡೆದವನು ತಪ್ಪು ಮಾಡುವುದಿಲ್ಲವೆಂದು ಶ್ರೀಕೃಷ್ಣನು ಅರ್ಜುನನಿಗೆ 'ನಿನಗೆ ತಿಳಿದಂತೆ ಮಾಡು' – ಎಂದು ಇಚ್ಛಾಸ್ವಾತಂತ್ರ್ಯವನ್ನು ಕೊಟ್ಟಿದ್ದಾನೆ.

ಹಲವಾರು ತೊಡಕಿನ ವಿಷಯಗಳನ್ನು ಗೀತಾಶಾಸ್ತ್ರದಲ್ಲಿ ಹೇಳಿದ್ದರಿಂದ, ಅದೆಲ್ಲವನ್ನೂ ಪರ್ಯಾಲೋಚಿಸುವುದು – ವಿಶೇಷವಾಗಿ ಯುದ್ಧಪ್ರಸಂಗದಲ್ಲಿ ಅರ್ಜುನನಿಗೆ ಕಷ್ಟವಾದೀತೆಂದು ಭಗವಂತನು ಪರಮಕಾರುಣ್ಯದಿಂದ ಒಂದು ಸುಲಭಮಾರ್ಗವನ್ನೀಗ ಹೇಳುತ್ತಾನೆ–

**ಸರ್ವಗುಹ್ಯತಮಂ ಭೂಯಃ ಶೃಣು ಮೇ ಪರಮಂ ವಚಃ ।**
**ಇಷ್ಟೋಽಸಿ ಮೇ ದೃಢಮಿತಿ ತತೋ ವಕ್ಷ್ಯಾಮಿ ತೇ ಹಿತಮ್ ॥ ೬೪**

ನಾನು ಹೇಳುವ ಅತ್ಯಂತ ರಹಸ್ಯವಾದ ಒಂದು ಶ್ರೇಷ್ಠ ಹಿತೋಪದೇಶ ವಾಕ್ಯವನ್ನು ಇನ್ನೊಮ್ಮೆ ಕೇಳು. ನನಗೆ ನೀನು ಬಹಳ ಪ್ರೀತಿಪಾತ್ರನಾದ್ದರಿಂದ ನಿನಗೆ ಶ್ರೇಯಸ್ಕರವಾದದ್ದನ್ನು ಹೇಳುತ್ತೇನೆ.

**ಮನ್ಮನಾ ಭವ ಮದ್ಭಕ್ತೋ ಮದ್ಯಾಜೀ ಮಾಂ ನಮಸ್ಕುರು ।**
**ಮಾಮೇವೈಷ್ಯಸಿ ಸತ್ಯಂ ತೇ ಪ್ರತಿಜಾನೇ ಪ್ರಿಯೋಽಸಿ ಮೇ ॥ ೬೫**

ಏನೆಂದರೆ, ಪರಮೇಶ್ವರನಾದ ನನ್ನಲ್ಲಿಯೇ ಮನಸ್ಸನ್ನು ನಿಲ್ಲಿಸು. ನನ್ನ ಭಕ್ತನಾಗಿ ನನ್ನನ್ನು ಪೂಜಿಸುತ್ತ ನನಗೆ ನಮಸ್ಕರಿಸುತ್ತಿರು. ಹೀಗೆ ಮಾಡುತ್ತಿದ್ದರೆ, ಅರ್ಜುನ, ನಿನಗೆ ಸತ್ಯವಾಗಿ ಪ್ರತಿಜ್ಞೆಮಾಡಿ ಹೇಳುತ್ತೇನೆ – ನೀನು ನನ್ನನ್ನೇ ಸೇರಿಕೊಳ್ಳುವೆ. ಏಕೆಂದರೆ, ನೀನು ನನಗೆ ಪ್ರೀತಿಪಾತ್ರನಾಗಿದ್ದೀಯೆ.

**ವಿವರಣೆ :** ಭಗವಂತನ ಈ ಸತ್ಯಪ್ರತಿಜ್ಞೆಯನ್ನರಿತು ಮುಮುಕ್ಷುವಾದವನು ಭಕ್ತಿಗೆ ಕಾಲಾಂತರದಲ್ಲಿ ಮೋಕ್ಷಫಲವಿದೆಯೆಂದು ನಂಬಿ ಭಗವದ್ಭಕ್ತನಾಗಬೇಕು – ಎಂದು ಅಭಿಪ್ರಾಯ. ಕರ್ಮಯೋಗನಿಷ್ಠೆಯ ಪರಮರಹಸ್ಯವಾದ ಈಶ್ವರಭಕ್ತಿಯನ್ನಿಲ್ಲಿಗೆ ತಿಳಿಸಿ ಮುಗಿಸಿದ್ದಾಯಿತು.

ಈಗ ಕರ್ಮಯೋಗನಿಷ್ಠೆಯ ಫಲವಾದ ಸಮ್ಯಗ್ದರ್ಶನವನ್ನು ಕುರಿತು ಕಡೆಯದಾಗಿ ಭಗವಂತನು ಈ ಮಾತನ್ನು ಹೇಳುತ್ತಾನೆ–

**ಸರ್ವಧರ್ಮಾನ್ ಪರಿತ್ಯಜ್ಯ ಮಾಮೇಕಂ ಶರಣಂ ವ್ರಜ ।**
**ಅಹಂ ತ್ವಾ ಸರ್ವಪಾಪೇಭ್ಯೋ ಮೋಕ್ಷಯಿಷ್ಯಾಮಿ ಮಾ ಶುಚಃ ॥ ೬೬**

ಸರ್ವಧರ್ಮಗಳನ್ನೂ – ಎಂದರೆ – ಸರ್ವಕರ್ಮಗಳನ್ನೂ ಪರಿತ್ಯಜಿಸಿ ಸರ್ವಚೈತನ್ಯಸ್ವರೂಪನಾದ ನನ್ನೊಬ್ಬನನ್ನೇ (ನಿನ್ನ ಆತ್ಮವೆಂದು) ಶರಣು ಹೊಂದು. ಹೀಗೆ ನಿಶ್ಚಯಿಸಿದ ನಿನ್ನನ್ನು ಹುಟ್ಟುಸಾವುಗಳನ್ನುಂಟುಮಾಡುವ ಪಾಪಗಳೆಂಬ ಎಲ್ಲ ತೊಡಕುಗಳಿಂದಲೂ ನಾನು ಬಿಡುಗಡೆ ಮಾಡುವೆನು. ಚಿಂತಿಸಬೇಡ.

**ವಿವರಣೆ :** ಇಲ್ಲಿ ಕರ್ಮಸಂನ್ಯಾಸಪೂರ್ವಕವಾದ ಜ್ಞಾನನಿಷ್ಠೆಯನ್ನು ಸಂಕ್ಷೇಪವಾಗಿ ಹೇಳಿ ಉಪಸಂಹಾರ ಮಾಡಲಾಗಿದೆ. ಅರ್ಜುನನ ನೆವದಿಂದ ಎಲ್ಲ ಮುಮುಕ್ಷುಗಳಿಗೂ ಮಾಡಿದ ಬೋಧೆ ಇದು.

**ಇದಂ ತೇ ನಾತಪಸ್ಕಾಯ ನಾಭಕ್ತಾಯ ಕದಾಚನ ।**
**ನ ಚಾಶುಶ್ರೂಷವೇ ವಾಚ್ಯಂ ನ ಚ ಮಾಂ ಯೋಽಭ್ಯಸೂಯತಿ ॥ ೬೭**

ನಾನು ನಿನಗೆ ಹೇಳಿದ ಈ ಆತ್ಮವಿಚಾರಶಾಸ್ತ್ರವನ್ನು ತಪಸ್ವಿಯಲ್ಲದವನಿಗೆ ಹೇಳಬಾರದು. ತಪಸ್ವಿಯಾದರೂ ಗುರುದೇವತಾಭಕ್ತಿರಹಿತನಿಗೆ ಹೇಳಬಾರದು. ತಪಸ್ವಿಯೂ ಭಕ್ತನೂ ಆದರೂ ಗುರುಶುಶ್ರೂಷೆ ಮಾಡದೆ ಇರುವ ಅಥವಾ ಕೇಳಲು ಕುತೂಹಲವಿಲ್ಲದ ಮನುಷ್ಯನಿಗೆ ಎಂದಿಗೂ ತಿಳಿಸಬಾರದು.

ಈಶ್ವರನಾದ ನನ್ನನ್ನು ಯಾವನು 'ಇವನೊಬ್ಬ ಆತ್ಮಪ್ರಶಂಸಕ' ಎಂದು ದ್ವೇಷಿಸುತ್ತಾನೋ ಅವನಿಗೂ ತಿಳಿಸಬಾರದು.

**ವಿವರಣೆ :** ಶಾಸ್ತ್ರಸಂಪ್ರದಾಯದ ವಿಧಿಯನ್ನು ಇಲ್ಲಿ ತಿಳಿಸಲಾಗಿದೆ.

ಭಗವಂತನಲ್ಲಿ ಅಸೂಯೆಯಿಲ್ಲದವನಾಗಿ, ತಪಸ್ವಿಯಾಗಿ, ಭಕ್ತನಾಗಿ, ಶುಶ್ರೂಷುವಾಗಿರುವವನಿಗೆ ಈ ಶಾಸ್ತ್ರವನ್ನು ಉಪದೇಶಿಸಬೇಕು – ಎಂದು ತಾತ್ಪರ್ಯ. ತಪಸ್ವಿ = ಈಶ್ವರಪ್ರೀತಿಗಾಗಿ ವಿಹಿತಕರ್ಮಗಳನ್ನು ದೈಹಿಕ ಶ್ರಮದ ಗಣನೆಯಿಲ್ಲದೆ ಶ್ರದ್ಧೆಯಿಂದ ಆಚರಿಸುತ್ತ ಇಂದ್ರಿಯಗಳನ್ನು ಬಿಗಿಹಿಡಿದು ಆತ್ಮಚಿಂತನೆ ಮಾಡತಕ್ಕವನು. 'ಮೇಧಾವಿನೇ ತಪಸ್ವಿನೇ ವಾ' ಎಂದು ಯಾಸ್ಕರು ವಿಕಲ್ಪವನ್ನು ಹೇಳಿರುವುದರಿಂದ (ನಿರುಕ್ತ ೨–೧–೬) ತಪಸ್ವಿಯಲ್ಲದಿದ್ದರೂ ಉಳಿದ ಭಕ್ತಿ ಮುಂತಾದ ಗುಣಗಳಿರುವ ಮೇಧಾವಿಗೆ ಹೇಳಬಹುದೆಂದು ಗೊತ್ತಾಗುತ್ತದೆ.

**ಯ ಇದಂ ಪರಮಂ ಗುಹ್ಯಂ ಮದ್ಭಕ್ತೇಷ್ವಭಿಧಾಸ್ಯತಿ ।**
**ಭಕ್ತಿಂ ಮಯಿ ಪರಾಂ ಕೃತ್ವಾ ಮಾಮೇವೈಷ್ಯತ್ಯಸಂಶಯಃ ॥ ೬೮**

ಯಾವಾತನು ಪರಮಗುಹ್ಯವಾದ ಈ ಗೀತಾಶಾಸ್ತ್ರವನ್ನು, ನನ್ನಲ್ಲಿ ಉತ್ತಮವಾದ ಭಕ್ತಿಯನ್ನಿಟ್ಟು – ಪರಮಗುರುವಾದ ಭಗವಂತನ ಸೇವೆಯನ್ನು ಮಾಡುತ್ತಿದ್ದೇನೆ – ಎಂಬ ನಂಬಿಕೆಯಿಂದ–ನನ್ನ ಭಕ್ತರಿಗೆ ತಿಳಿಸಿಕೊಡುತ್ತಾನೋ ಆತನು ನನ್ನನ್ನೇ ಸೇರಿಕೊಳ್ಳುತ್ತಾನೆ – ಮುಕ್ತನಾಗಿಯೇ ಆಗುತ್ತಾನೆ. ಈ ವಿಷಯದಲ್ಲಿ ಸಂಶಯವಿಲ್ಲ.

**ವಿವರಣೆ :** ಇಲ್ಲಿ ಭಕ್ತಿಯನ್ನು ಮತ್ತೆ ಎತ್ತಿರುವುದರಿಂದ, ಬರಿಯ ಭಕ್ತಿಯೊಂದರಿಂದಲೇ ಶಾಸ್ತ್ರೋಪದೇಶವನ್ನು ಪಡೆಯಲು ಅರ್ಹತೆ ಬರುತ್ತದೆ ಎಂದು ನಿಶ್ಚಯಿಸಬಹುದು.

**ನ ಚ ತಸ್ಮಾನ್ಮನುಷ್ಯೇಷು ಕಶ್ಚಿನ್ಮೇ ಪ್ರಿಯಕೃತ್ತಮಃ ।**
**ಭವಿತಾ ನ ಚ ಮೇ ತಸ್ಮಾದನ್ಯಃ ಪ್ರಿಯತರೋ ಭುವಿ ॥ ೬೯**

ಹೀಗೆ ಸಂಪ್ರದಾಯಾನುಸಾರವಾಗಿ ನನ್ನ ಭಕ್ತರಿಗೆ ಈ ಶಾಸ್ತ್ರವನ್ನು ಹೇಳಿಕೊಡುವವನಿಗಿಂತಲೂ ಹೆಚ್ಚಾಗಿ ನನಗೆ ಪ್ರಿಯವಾದ್ದನ್ನು ಮಾಡುವವನು ಮನುಷ್ಯರಲ್ಲಿ ಇನ್ನು ಯಾವನೂ ಇಲ್ಲ. ಅವನಿಗಿಂತ ನನಗೆ ಪ್ರಿಯತರನಾದವನು ಭೂಮಿಯ ಮೇಲೆ ಹುಟ್ಟುವುದೂ ಇಲ್ಲ.

**ಅಧ್ಯೇಷ್ಯತೇ ಚ ಯ ಇಮಂ ಧರ್ಮ್ಯಂ ಸಂವಾದಮಾವಯೋಃ ।**
**ಜ್ಞಾನಯಜ್ಞೇನ ತೇನಾಹಮಿಷ್ಟಃ ಸ್ಯಾಮಿತಿ ಮೇ ಮತಿಃ ॥ ೭೦**

ನಮ್ಮಿಬ್ಬರ ಧರ್ಮಯುಕ್ತವಾದ ಈ ಸಂವಾದವನ್ನು ಯಾವಾತನು ಪಠಿಸುತ್ತಾನೋ ಆತನು ಜ್ಞಾನಯಜ್ಞದಿಂದ ನನ್ನನ್ನು ಪೂಜಿಸುತ್ತಾನೆಂದು ನನ್ನ ನಿಶ್ಚಯವಿದೆ.

ವಿವರಣೆ : ಶ್ರೇಯಾನ್ ದ್ರವ್ಯಮಯಾದ್ಯಜ್ಞಾತ್ ಜ್ಞಾನಯಜ್ಞಃ ಪರಂತಪ (೪–೩೩) ಎಂದು ಹೇಳಿದ್ದಾಗಿದೆ. ಅರ್ಥವು ಗೊತ್ತಿಲ್ಲದೆ ಕೇವಲ ಪಾರಾಯಣ ದಿಂದಲೂ ಫಲವಿದೆ. ಅರ್ಥಜ್ಞಾನಪೂರ್ವಕವಾಗಿ ಪಠಿಸಿದರೆ ಇನ್ನೂ ಅಧಿಕ ಫಲ ಉಂಟು.

**ಶ್ರದ್ಧಾವಾನನಸೂಯಶ್ಚ ಶೃಣುಯಾದಪಿ ಯೋ ನರಃ ।**
**ಸೋಽಪಿ ಮುಕ್ತಃ ಶುಭಾನ್ ಲೋಕಾನ್**
**ಪ್ರಾಪ್ನುಯಾತ್ಪುಣ್ಯಕರ್ಮಣಾಮ್ ॥ ೭೧**

ಶ್ರದ್ಧಾವಂತನೂ ಅಸೂಯೆಯಿಲ್ಲದವನೂ ಆಗಿ ಯಾವ ಮಾನವನು ಈ ಗೀತಾಶಾಸ್ತ್ರವನ್ನು ಶ್ರವಣಮಾಡುವನೋ ಅವನೂ ಸಹ ಪಾಪಮುಕ್ತನಾಗಿ ಪುಣ್ಯಕರ್ಮಗಳನ್ನು ಮಾಡಿದವರಿಗೆ ದೊರಕುವ ಉತ್ತಮ ಲೋಕಗಳನ್ನು ಪಡೆಯುತ್ತಾನೆ.

**ಕಚ್ಚಿದೇತಚ್ಛ್ರುತಂ ಪಾರ್ಥ ತ್ವಯ್ಯೆಕಾಗ್ರೇಣ ಚೇತಸಾ ।**
**ಕಚ್ಚಿದಜ್ಞಾನಸಂಮೋಹಃ ಪ್ರನಷ್ಟಸ್ತೇ ಧನಂಜಯ ॥ ೭೨**

ಪಾರ್ಥ, ನಾನು ಹೇಳಿದ ಈ ಎಲ್ಲ ವಿಚಾರವನ್ನೂ ಏಕಾಗ್ರಚಿತ್ತದಿಂದ ಕೇಳಿದೆಯಲ್ಲವೆ? ಅರ್ಜುನ, ಅಜ್ಞಾನದಿಂದಾದ ನಿನ್ನ ಭ್ರಾಂತಿಯು ಹೋಯಿತಷ್ಟೆ?

**ಅರ್ಜುನ ಉವಾಚ –**

**ನಷ್ಟೋ ಮೋಹಃ ಸ್ಮೃತಿರ್ಲಬ್ಧಾ ತ್ವತ್ಪ್ರಸಾದಾನ್ಮಯಾಚ್ಯುತ ।**
**ಸ್ಥಿತೋಽಸ್ಮಿ ಗತಸಂದೇಹಃ ಕರಿಷ್ಯೇ ವಚನಂ ತವ ॥ ೭೩**

**ಅರ್ಜುನನು ಹೇಳಿದನು :** ಶ್ರೀಕೃಷ್ಣ, ನನ್ನ ಭ್ರಾಂತಿಯು ಹೋಯಿತು. ಆತ್ಮತತ್ತ್ವದ ಜ್ಞಾನವು ನಿನ್ನ ಅನುಗ್ರಹದಿಂದ ಲಭಿಸಿತು. ಸಂದೇಹವೆಲ್ಲವೂ

ನಿವೃತ್ತವಾಗಿ, ನಿನ್ನ ಆಜ್ಞೆಯಂತೆ ನಡೆಯಲು ಸಿದ್ಧನಾಗಿದ್ದೇನೆ. ನಿನ್ನ ಮಾತನ್ನು ನಡೆಸುತ್ತೇನೆ.

**ಸಂಜಯ ಉವಾಚ –**

**ಇತ್ಯಹಂ ವಾಸುದೇವಸ್ಯ ಪಾರ್ಥಸ್ಯ ಚ ಮಹಾತ್ಮನಃ ।**
**ಸಂವಾದಮಿಮಮಶ್ರೌಷಮದ್ಭುತಂ ರೋಮಹರ್ಷಣಮ್ ॥ ೭೪**

**ಸಂಜಯನು ಹೀಗೆಂದನು –**

ಮಹಾರಾಜ – ಧೃತರಾಷ್ಟ್ರ, ಈ ಪ್ರಕಾರವಾಗಿ ನಾನು ವಾಸುದೇವನಿಗೂ ಮಹಾತ್ಮನಾದ ಅರ್ಜುನನಿಗೂ ನಡೆದ ಅದ್ಭುತವೂ ರೋಮಾಂಚಕಾರಿಯೂ ಆದ ಈ ಸಂಭಾಷಣೆಯನ್ನು ಕೇಳಿದೆನು.

**ವ್ಯಾಸಪ್ರಸಾದಾಚ್ಛ್ರುತವಾನಿಮಂ ಗುಹ್ಯಮಹಂ ಪರಮ್ ।**
**ಯೋಗಂ ಯೋಗೇಶ್ವರಾತ್ ಕೃಷ್ಣಾತ್ ಸಾಕ್ಷಾತ್ಕಥಯತಃ ಸ್ವಯಮ್ ॥**

ಯೋಗೇಶ್ವರನಾದ ಶ್ರೀಕೃಷ್ಣನು ಸಾಕ್ಷಾತ್ತಾಗಿ ತಾನೇ ಉಪದೇಶಿಸುತ್ತಿರುವಾಗ ಅತಿರಹಸ್ಯವಾದ ಯೋಗಶಾಸ್ತ್ರಕ್ಕೆ ಸಂಬಂಧಿಸಿದ ಸಂವಾದವನ್ನು ವ್ಯಾಸಮಹರ್ಷಿಗಳು ಅನುಗ್ರಹಿಸಿದ ದಿವ್ಯಚಕ್ಷುಸ್ಸಿನ ಬಲದಿಂದ ಕೇಳಿದೆನು.

**ವಿವರಣೆ :** ದಿವ್ಯಚಕ್ಷುಸ್ಸೆಂದರೆ ದಿವ್ಯದೃಷ್ಟಿ. ಯುದ್ಧವನ್ನು ಎಲ್ಲಿಂದಾದರೂ ನೋಡಬಹುದಲ್ಲದೆ ಅಲ್ಲಿ ನಡೆಯುವ ಸಂಭಾಷಣೆಯನ್ನೂ ಕೇಳಬಹುದಾದ ಅಲೌಕಿಕಶಕ್ತಿಯೇ ಅದು.

**ರಾಜನ್ ಸಂಸ್ಮೃತ್ಯ ಸಂಸ್ಮೃತ್ಯ ಸಂವಾದಮಿಮಮದ್ಭುತಮ್ ।**
**ಕೇಶವಾರ್ಜುನಯೋಃ ಪುಣ್ಯಂ ಹೃಷ್ಯಾಮಿ ಚ ಮುಹುರ್ಮುಹುಃ ॥೭೬**

ಮಹಾರಾಜ, ಶ್ರೀಕೃಷ್ಣನಿಗೂ ಅರ್ಜುನನಿಗೂ ನಡೆದ ಅದ್ಭುತವೂ ಪುಣ್ಯಕರವೂ ಆದ ಈ ಸಂವಾದವನ್ನು ಮತ್ತೆ ಮತ್ತೆ ನೆನೆಸಿಕೊಂಡು ಹರ್ಷಿಸುತ್ತಿದ್ದೇನೆ.

**ತಚ್ಚ ಸಂಸ್ಮೃತ್ಯ ಸಂಸ್ಮೃತ್ಯ ರೂಪಮತ್ಯದ್ಭುತಂ ಹರೇಃ ।**
**ವಿಸ್ಮಯೋ ಮೇ ಮಹಾನ್ ರಾಜನ್ ಹೃಷ್ಯಾಮಿ ಚ ಪುನಃಪುನಃ ॥**

ಮಹಾರಾಜ, ಶ್ರೀಹರಿಯ ಅತ್ಯಾಶ್ಚರ್ಯಕರವಾದ ಆ ವಿಶ್ವರೂಪವು ಮತ್ತೆ ಮತ್ತೆ ನೆನಪಾಗಿ ವಿಸ್ಮಯವಾಗುತ್ತಿದೆ. ಮತ್ತೆಮತ್ತೆ ರೋಮಾಂಚವಾಗುತ್ತಿದೆ.

ಇನ್ನೇನು ಹೇಳಲಿ ?

**ಯತ್ರ ಯೋಗೇಶ್ವರಃ ಕೃಷ್ಣೋ ಯತ್ರ ಪಾರ್ಥೋ ಧನುರ್ಧರಃ ।**
**ತತ್ರ ಶ್ರೀರ್ವಿಜಯೋ ಭೂತಿರ್ಧ್ರುವಾ ನೀತಿರ್ಮತಿರ್ಮಮ ॥ ೭೮**

**ಇತಿ ಶ್ರೀಮದ್ಭಗವದ್ಗೀತಾಸೂಪನಿಷತ್ಸು ಬ್ರಹ್ಮವಿದ್ಯಾಯಾಂ ಯೋಗಶಾಸ್ತ್ರೇ ಮೋಕ್ಷಸಂನ್ಯಾಸಯೋಗೋ ನಾಮ ಅಷ್ಟಾದಶೋಽಧ್ಯಾಯಃ**

ಯಾವ ಪಕ್ಷದಲ್ಲಿ ಯೋಗೇಶ್ವರನಾದ ಶ್ರೀಕೃಷ್ಣನಿರುವನೋ, ಯಾವ ಪಕ್ಷದಲ್ಲಿ ಗಾಂಡೀವಧನ್ವನಾದ ಅರ್ಜುನನಿರುವನೋ ಆ ಪಕ್ಷದಲ್ಲಿಯೇ ರಾಜ್ಯಲಕ್ಷ್ಮಿಯೂ ಜಯವೂ ಸಂಕಲಸಂಪತ್ತೂ ರಾಜನೀತಿಯೂ ನೆಲೆಸುವುದೆಂದು ನನ್ನ ನಿಶ್ಚಿತವಾದ ಅಭಿಪ್ರಾಯವಿದೆ.

**ಇಲ್ಲಿಗೆ ಶ್ರೀಭಗವದ್ಗೀತೆಯಲ್ಲಿ ಮೋಕ್ಷಸಂನ್ಯಾಸಯೋಗವೆಂಬ ಹದಿನೆಂಟನೆಯ ಅಧ್ಯಾಯವು ಸಮಾಪ್ತವಾಯಿತು.**

**ಓಂ ತತ್ ಸತ್**

## ೧೮ನೆಯ ಅಧ್ಯಾಯದ ಸಾರ

ಸಂನ್ಯಾಸ, ತ್ಯಾಗ – ಇವುಗಳಿಗಿರುವ ಭೇದವೇನೆಂದು ಅರ್ಜುನನು ಪ್ರಶ್ನೆ ಮಾಡಲು ಶ್ರೀಕೃಷ್ಣನು ಈ ರೀತಿಯಲ್ಲಿ ತಿಳಿಸಿದನು : ಅರ್ಜುನ, ಸಂನ್ಯಾಸ ತ್ಯಾಗ – ಈ ಎರಡು ಶಬ್ದಗಳಿಗೂ ಬಿಡುವುದು ಎಂಬ ಒಂದೇ ಅರ್ಥವಿದೆ. ಯಾವುದನ್ನು ಬಿಡುವುದು ?– ಎಂಬುದನ್ನು ಅನುಸರಿಸಿ ಈ ಶಬ್ದಗಳಿಗೆ ಸ್ವಲ್ಪ ಅರ್ಥಭೇದವಿರುತ್ತದೆ. ಸಕಲಕಾಮ್ಯಕರ್ಮಗಳನ್ನೂ ಆಚರಿಸದೆ ವಿಧಿಪೂರ್ವಕವಾಗಿ ಬಿಟ್ಟುಬಿಡುವುದಕ್ಕೆ ಸಂನ್ಯಾಸವೆಂದು ಹೆಸರು. ಕರ್ಮಗಳನ್ನು ಬಿಡದೆ ಆಚರಿಸುತ್ತ ಅವುಗಳ ಫಲವನ್ನು ಮಾತ್ರ ಬಿಡುವುದಕ್ಕೆ ತ್ಯಾಗವೆಂದು ಹೇಳುತ್ತಾರೆ. ಆತ್ಮಜ್ಞಾನಿಯಲ್ಲದ ಮೋಕ್ಷಾಪೇಕ್ಷಿಯು ಕರ್ಮವನ್ನು ಬಿಡಲೇಬೇಕೆಂದು ಕೆಲವರ ಮತವಿದೆ. ಯಜ್ಞದಾನತಪೋರೂಪವಾದ ನಿತ್ಯಕರ್ಮವನ್ನು ಆತನು ಆಚರಿಸಲೇಬೇಕೆಂದು ಉಳಿದವರು ಹೇಳುತ್ತಾರೆ. ನನ್ನ ನಿಶ್ಚಯವನ್ನು ಹೇಳುತ್ತೇನೆ, ಕೇಳು. ಯಜ್ಞದಾನತಪಸ್ಸುಗಳನ್ನು ಮೋಕ್ಷಾಪೇಕ್ಷಿಯಾದರೂ ಬಿಡಬಾರದು. ಆಸಕ್ತಿ, ಫಲಗಳನ್ನು ತ್ಯಾಗಮಾಡಿ ಆ ಕರ್ಮಗಳನ್ನು

ಮಾಡುತ್ತಿದ್ದರೆ ಚಿತ್ತಶುದ್ಧಿಯಾಗುವುದು. ಈ ಫಲತ್ಯಾಗವು ಸಾತ್ತ್ವಿಕತ್ಯಾಗ. ಅವು ಕ್ಲೇಶದಾಯಕವೆಂದು ಬಿಟ್ಟರೆ ರಾಜಸತ್ಯಾಗವಾಗುತ್ತದೆ. ಆ ಕರ್ಮಗಳನ್ನು ಉಪೇಕ್ಷೆಯಿಂದ ಬಿಟ್ಟರೆ ತಾಮಸತ್ಯಾಗವಾಗುತ್ತದೆ. ಸಾತ್ತ್ವಿಕತ್ಯಾಗವನ್ನು ಮಾಡತಕ್ಕವನಿಗೆ ಕ್ರಮವಾಗಿ ಚಿತ್ತಶುದ್ಧಿಯುಂಟಾಗುತ್ತದೆ. ಆಮೇಲೆ ಜ್ಞಾನವು ಪ್ರಾಪ್ತವಾಗುತ್ತದೆ. ದೇಹಧಾರಿಯಾದ ಮನುಷ್ಯನಿಂದ ಸರ್ವಕರ್ಮಗಳನ್ನೂ ಬಿಡಲು ಸಾಧ್ಯವೇ ಇಲ್ಲ. ಫಲವನ್ನು ತ್ಯಜಿಸಿರತಕ್ಕ ಸಾತ್ತ್ವಿಕ ತ್ಯಾಗಿಯೇ ನಿಜವಾದ ತ್ಯಾಗಿಯೆನಿಸುತ್ತಾನೆ. ಅವನಿಗೆ ಜ್ಞಾನವು ಪ್ರಾಪ್ತವಾದಮೇಲೆ ಆ ಪರಮಾರ್ಥಸಂನ್ಯಾಸಿಗೆ ಅನಿಷ್ಟ, ಇಷ್ಟ, ಮಿಶ್ರ – ಎಂಬ ಮೂರು ವಿಧ ಕರ್ಮಫಲಗಳ ಲೇಪವಾಗುವುದಿಲ್ಲ. ಏಕೆಂದರೆ, ಅವನು ಆ ಕರ್ಮಗಳನ್ನು ಮಾಡುತ್ತಿರುವುದಿಲ್ಲವೆಂದೇ ತಿಳಿಯಬೇಕು. ಜ್ಞಾನಿಯೇ ಪರಮಾರ್ಥಸಂನ್ಯಾಸಿ. ಹೇಗೆಂದರೆ, ಯಾವ ಕರ್ಮವು ನಡೆಯಬೇಕಾದರೂ ಶರೀರ, ಕರ್ತೃ, ಕರಣ, ಪ್ರಾಣವೃತ್ತಿ, ದೈವ – ಇವೈದು ಕಾರಣಗಳಿರುತ್ತವೆ. ಆತ್ಮನು ಶುದ್ಧನೂ ಸಂಗರಹಿತನೂ ಆಗಿರುವುದರಿಂದ ಶರೀರಾದಿಗಳ ಸಂಬಂಧವೇ ಅವನಿಗಿಲ್ಲ. ಜ್ಞಾನಿಯಲ್ಲದೆ ಕರ್ಮಫಲತ್ಯಾಗವನ್ನು ಮಾಡಿರುವ ಕರ್ಮಯೋಗಿಗೆ ಚಿತ್ತಶುದ್ಧಿಯೆಂಬ ಫಲವೂ ಅನಂತರ ಜ್ಞಾನವೂ ಲಭಿಸುತ್ತವೆ. ಅವನು ಅಜ್ಞಾನಿಯಾದ್ದರಿಂದ ಶರೀರ, ಕರ್ತೃ, ಕರಣ – ಮುಂತಾದವುಗಳ ಅರಿವು ಇದ್ದೇ ಇರುತ್ತದೆ. ಪರಮಾರ್ಥಸಂನ್ಯಾಸಿಯಾದವನಿಗೆ ಫಲವೆಂಬುದೇ ಇರುವುದಿಲ್ಲ. ಅವನು ಪಡೆಯಬೇಕಾದ ಫಲವೇ ಇಲ್ಲ. ಕರ್ಮಯೋಗಿಗೂ ಜ್ಞಾನಯೋಗಿಗೂ ಇರುವ ಭೇದ ಇದು.

ಒಂದು ಕರ್ಮವು ನಡೆಯಬೇಕಾದರೆ ಜ್ಞಾತೃ, ಜ್ಞೇಯ, ಜ್ಞಾನ ; ಕರ್ತೃ, ಕರ್ಮ, ಕರಣ – ಎಂಬ ತ್ರಿಪುಟಿಯು ಜ್ಞಾನವಿದ್ದೇ ಇರುತ್ತದೆ. ಇದೆಲ್ಲವೂ ತ್ರಿಗುಣಾತ್ಮಕವಾದ್ದರಿಂದ ವಿಚಾರಶೀಲನು ಸಾತ್ತ್ವಿಕವಾದ್ದನ್ನೇ ಅವಲಂಬಿಸಬೇಕು. ಸರ್ವತ್ರ ಒಬ್ಬ ಪರಮೇಶ್ವರನೇ ಇದ್ದಾನೆಂಬ ಜ್ಞಾನವು ಸಾತ್ತ್ವಿಕ. ಅಹಂಕಾರವಿಲ್ಲದೆ ಧೃತ್ಯುತ್ಸಾಹಗಳಿಂದ ಕೂಡಿದ ಕರ್ತೃವು ಸಾತ್ತ್ವಿಕನು. ಹೀಗೆ ಬುದ್ಧಿ, ಧೃತಿ – ಮೊದಲಾದವುಗಳೆಲ್ಲ ಸಾತ್ತ್ವಿಕವಾಗಿರುವಂತೆ ನೋಡಿಕೊಳ್ಳಬೇಕು.

ಚಾತುರ್ವರ್ಣ್ಯವಿಭಾಗದಿಂದ ಯಾರಿಗೆ ಯಾವುದು ಯೋಗ್ಯವಾದ ಸಾತ್ತ್ವಿಕ ಕರ್ಮವೆಂಬುದನ್ನು ಶಾಸ್ತ್ರವು ತಿಳಿಸಿಕೊಡುತ್ತದೆ. ಶಮ, ದಮಾದಿಗಳು ಬ್ರಾಹ್ಮಣನಿಗೂ, ಧೈರ್ಯ, ಶೌರ್ಯಾದಿಗಳು ಕ್ಷತ್ರಿಯನಿಗೂ, ವಾಣಿಜ್ಯ, ಕೃಷಿ, ಪಶುಪಾಲನೆ – ಮೊದಲಾದವು ವೈಶ್ಯನಿಗೂ, ಪರಿಚರ್ಯೆಯೆಂಬ ಕಾರ್ಮಿಕ

ವೃತ್ತಿಯು ಶೂದ್ರನಿಗೂ ಯೋಗ್ಯವಾದವುಗಳೆಂದು ಶಾಸ್ತ್ರವು ತಿಳಿಸುತ್ತದೆ. ತಮ್ಮ ತಮ್ಮ ಕರ್ತವ್ಯಕರ್ಮಗಳೆಲ್ಲವೂ ಪರಮೇಶ್ವರನ ಪೂಜೆಯೆಂದೂ ಆ ಕರ್ಮಗಳ ಆಚರಣೆಯಿಂದ ಪರಮಾತ್ಮನು ಸಂಪ್ರೀತನಾಗುವನೆಂದೂ ತಿಳಿದು ಆಚರಿಸತಕ್ಕ ಸರ್ವವರ್ಣದವರಿಗೂ ಶ್ರೇಯಸ್ಸು ಲಭಿಸುತ್ತದೆ. ಮುಮುಕ್ಷುವಾದವನು ಪರಧರ್ಮಕ್ಕೆ ಕೈಹಾಕದೆ ತನ್ನ ಧರ್ಮವನ್ನು ಸಮೀಚೀನವಾಗಿ ತಿಳಿದು ಸ್ವಕರ್ಮವನ್ನಾಚರಿಸಬೇಕು.

ಕರ್ಮದಿಂದ ಚಿತ್ತಶುದ್ಧಿಯಾಗುತ್ತದೆ. ಚಿತ್ತಶುದ್ಧಿಯಿಂದ ನೈಷ್ಕರ್ಮ್ಯವೆಂಬ ಪರಮಸಿದ್ಧಿಯುಂಟಾಗುತ್ತದೆ. ಆತನು ಧ್ಯಾನಯೋಗಪರನಾಗಿ ಅಹಂಕಾರ ಮಮಕಾರಗಳನ್ನು ಪರಿತ್ಯಜಿಸಿದಾಗ ಬ್ರಹ್ಮಸ್ವರೂಪನೇ ಆಗಲು ಅರ್ಹತೆಯನ್ನು ಗಳಿಸುತ್ತಾನೆ. ಬ್ರಹ್ಮಪ್ರಾಪ್ತಿಯಾದಾಗ ಆತನ ಮನಸ್ಸು ಸದಾ ಪ್ರಸನ್ನವಾಗಿರುತ್ತದೆ. ಶೋಕವೂ ಕಾಮವೂ ಅವನ ಬಳಿ ಸುಳಿಯುವುದಿಲ್ಲ. ಸರ್ವಭೂತಗಳಲ್ಲಿ ಸಮಬುದ್ಧಿಯುಂಟಾಗುತ್ತದೆ.

ಎಂತಹ ದುರಾಚಾರಗಳಲ್ಲಿ ತೊಡಗಿದವನಾದರೂ ಪರಮಾತ್ಮನಿಗೆ ಶರಣಾದರೆ ಸದ್ಗತಿಯುಂಟಾಗುತ್ತದೆ. ಏಕೆಂದರೆ, ನನ್ನ ಭಕ್ತನು ದುರಾಚಾರ ಗಳೆಲ್ಲವನ್ನೂ ಪರಿತ್ಯಜಿಸುತ್ತಾನೆ. ಸರ್ವಕರ್ಮಗಳನ್ನೂ ನನಗೆ ಸಮರ್ಪಿಸಿ ಮನಸ್ಸನ್ನು, ಅರ್ಜುನ, ನನ್ನಲ್ಲಿಯೇ ನಿಲ್ಲಿಸಿರು. ಹೀಗೆ ಮಾಡಿದರೆ ನಿನ್ನ ಕಷ್ಟಗಳೆಲ್ಲವೂ ನೀಗುತ್ತವೆ. ಇಲ್ಲದಿದ್ದರೆ ಹಾಳಾಗಿಹೋಗುತ್ತೀಯೆ. ನೀನು ಯುದ್ಧವನ್ನು ಮಾಡುವುದಿಲ್ಲವೆಂದು ಬಾಯಲ್ಲಿ ಹೇಳುತ್ತೀಯೆ. ನಿನ್ನ ಕ್ಷತ್ರಿಯಸ್ವಭಾವವು ನಿನ್ನಿಂದ ಯುದ್ಧವನ್ನು ಮಾಡಿಸಿಯೇ ತೀರುತ್ತದೆ. ನಿನ್ನ ಹೃದಯದಲ್ಲಿರುವ ಈಶ್ವರನಿಗೆ ಶರಣಾಗು. ಆತನೇ ನಿನಗೆ ಸನ್ಮಾರ್ಗವನ್ನು ತೋರಿಸಿಕೊಡುತ್ತಾನೆ. ಇನ್ನೊಂದು ಅತಿರಹಸ್ಯವಾದ ವಿಷಯವನ್ನು ನಿನಗೆ ಹೇಳುತ್ತೇನೆ. ಅನಂತರ ನಿನಗೆ ತೋರಿದಂತೆ ನಡೆಯಬಹುದು. ಏನೆಂದರೆ, ನನ್ನಲ್ಲಿಯೇ ಮನಸ್ಸನ್ನು ನಿಲ್ಲಿಸಿ ನನ್ನ ಕರ್ಮವನ್ನೇ ನೀನು ಮಾಡುತ್ತ ನನ್ನ ಭಕ್ತನಾಗಿರು. ನಾನು ನಿನ್ನನ್ನು ಸರ್ವಪಾಪಗಳಿಂದಲೂ ಬಿಡುಗಡೆ ಮಾಡುತ್ತೇನೆ, ಶೋಕಿಸಬೇಡ.

ಅರ್ಜುನ, ಈ ಶಾಸ್ತ್ರವನ್ನು ಎಲ್ಲರಿಗೂ ಹೇಳಬಾರದು. ತಪಸ್ಸು ಮಾಡದವನಿಗೆ, ಭಕ್ತನಲ್ಲದವನಿಗೆ, ಗುರುಶುಶ್ರೂಷೆಯನ್ನು ಮಾಡದವನಿಗೆ ಹೇಳಬಾರದು. ನನ್ನನ್ನು ದೂಷಿಸತಕ್ಕವನಿಗೆ ಸರ್ವಥಾ ತಿಳಿಸಬೇಡ. ಯಾವನು ಈ ಪರಮರಹಸ್ಯವನ್ನು ನನ್ನ ಭಕ್ತರಿಗೆ ತಿಳಿಸುವನೋ ಅವನು ನನ್ನ

ಪರಮಭಕ್ತನೆಂದು ತಿಳಿಯುತ್ತೇನೆ. ಯಾವನು ಈ ಪುಣ್ಯಕರ ಸಂವಾದವನ್ನು ಓದುವನೋ ಅವನು ಜ್ಞಾನಯಜ್ಞದಿಂದ ನನ್ನನ್ನು ಪೂಜಿಸಿದಂತಾಗುತ್ತದೆ. ಯಾವನು ಇದನ್ನು ಶ್ರದ್ಧಾಭಕ್ತಿಗಳಿಂದ ಕೇಳುವನೋ ಅವನು ಪುಣ್ಯ ಲೋಕವನ್ನು ಪಡೆಯುತ್ತಾನೆ.

ಅರ್ಜುನ, ಇದನ್ನು ಅವಧಾನವಿಟ್ಟು ಕೇಳಿದೆಯಾ? ನಿನ್ನ ಅಜ್ಞಾನ ಹರಿಯಿತಷ್ಟೆ?–ಎಂದು ಭಗವಂತನು ಕೇಳಿದನು. ಆಗ ಅರ್ಜುನನು "ಶ್ರೀಕೃಷ್ಣ, ನಿನ್ನ ಅನುಗ್ರಹದಿಂದ ಅಜ್ಞಾನವು ಕಳೆಯಿತು. ನನಗೆ ಸರಿಯಾದ ತಿಳಿವಳಿಕೆ ಬಂದಿತು. ಸಂಶಯವೇನೂ ಉಳಿಯಲಿಲ್ಲ. ನಿನ್ನ ಮಾತಿನಂತೆ ನಡೆಯುತ್ತೇನೆ" ಎಂದನು.

ಇದೆಲ್ಲವನ್ನೂ ಸಂಜಯನು ಧೃತರಾಷ್ಟ್ರನಿಗೆ ತಿಳಿಸಿ "ಮಹಾರಾಜ, ಶ್ರೀಕೃಷ್ಣನಿಗೂ ಅರ್ಜುನನಿಗೂ ನಡೆದ ಈ ಅದ್ಭುತ ಸಂವಾದವನ್ನು ವ್ಯಾಸಮುನಿಗಳ ಅನುಗ್ರಹದಿಂದ ನಾನು ಕೇಳಿದೆನು. ಭಗವಂತನ ವಿಶ್ವರೂಪ ವನ್ನು ಕಂಡು ರೋಮಾಂಚಿತನಾಗಿದ್ದೇನೆ. ಯೋಗೇಶ್ವರನಾದ ಶ್ರೀಕೃಷ್ಣನು ಎಲ್ಲಿರುವನೋ ಧನುರ್ಧರನಾದ ಅರ್ಜುನನು ಎಲ್ಲಿರುವನೋ ಅಲ್ಲಿ ಸಮಸ್ತ ಸಂಪತ್ತುಗಳೂ ವಿಜಯವೂ ರಾಜನೀತಿಯೂ ನೆಲೆಸಿರುತ್ತವೆಯೆಂದು ನನ್ನ ನಿಶ್ಚಯ" ಎಂದನು.

**ಓಂ ತತ್ಸತ್**

# ಪರಿಶಿಷ್ಟ

## ವ್ಯಾಕರಣಶಾಸ್ತ್ರಕ್ಕೆ ಸಂಬಂಧಿಸಿದ ವಿಶೇಷಗಳು*

೧.೨೩. ಯ ಏತೇ = ಯೇ ಏತೇ - ಎಂದು ಪದವಿಭಾಗ.

೧.೩೨. ಕಾಂಕ್ಷೇ = ಈ ಧಾತು ಪರಸ್ಮೈಪದಿಯಾದ್ದರಿಂದ 'ಕಾಂಕ್ಷಾಮಿ' ಎಂದಿರಬೇಕಾಗಿತ್ತು. ಇದು ಆರ್ಷಪ್ರಯೋಗ.

೨.೩೭. ಪ್ರಾಪ್ಸ್ಯಸಿ ಸ್ವರ್ಗಂ = ಆಪ್ ಧಾತು ಪರಸ್ಮೈಪದಿಯಾದ್ದರಿಂದ ಇದು ಶುದ್ಧವಾದ ಪ್ರಯೋಗ. ಪ್ರಾಪ್ಸ್ಯಸೇ ಎಂಬ ಪಾಠ ಸರಿಯಲ್ಲ.

೨.೫೦. ಜಹಾತೀಹ ಉಭೇ = ಇಹ + ಉಭೇ = ಇಹೋಭೇ ಎಂದು ಸಂಧಿಕಾರ್ಯವನ್ನು ಮಾಡಿದರೆ ಛಂದಸ್ಸು ಕೆಡುತ್ತದೆಯಾದ್ದರಿಂದ ಸಂಧಿಯನ್ನು ಮಾಡಿಲ್ಲ. ಇದೇನೂ ವ್ಯಾಕರಣವಿರುದ್ಧವಲ್ಲ. ಆಲಂಕಾರಿಕರು ಇದನ್ನು ವಿಸಂಧಿ ದೋಷವನ್ನುತ್ತಾರೆ.

೨.೬೦. ಯತತೋ ಹ್ಯಪಿ = ಯತತಃ ಎಂಬ ಪರಸ್ಮೈಪದದ ಪ್ರಯೋಗವು ಆರ್ಷ. ಯತಮಾನಸ್ಯ ಎಂದಿರಬೇಕು. ಗೀತೆಯಲ್ಲಿ ಬಹಳ ಕಡೆ ಯತ ಧಾತುವನ್ನು ಪರಸ್ಮೈಪದದಲ್ಲಿ ಪ್ರಯೋಗಿಸಲಾಗಿದೆ.

೩.೧೯. ಪೂರುಷಃ = ಪೂರುಷಃ, ಪುರುಷಃ – ಎಂದು ಎರಡು ಶಬ್ದಗಳಿವೆ.

೩.೨೩. ನ ವರ್ತೇಯ = ಈ ಧಾತು ಆತ್ಮನೇಪದಿಯಾದ್ದರಿಂದ 'ವರ್ತೇಯ' ಎಂಬುದೇ ಶುದ್ಧಪಾಠ. 'ವರ್ತೇಯಂ' ಎಂಬುದು ಸರಿಯಲ್ಲ.

೩.೪೧. ಪ್ರಜಹಿಹ್ಯೇನಂ = 'ಪ್ರಜಹಿಹಿ' 'ಪ್ರಜಹೀಹಿ' ಎಂಬ ಎರಡು ರೂಪಗಳೂ ಸರಿಯಾದವು.

೩.೪೩. ಜಹಿ = ಹನ್ ಧಾತುವಿನ ಲೋಟ್ ಮಧ್ಯಮ ಪುರುಷೈಕ ವಚನ.

೪.೩೭. ಭಸ್ಮಸಾತ್ = ಸಾತ್ ಎಂಬುದು ತದ್ಧಿತ ಪ್ರತ್ಯಯ.

೫.೨೧. ಸುಖಮಕ್ಷಯ್ಯಂ = ಕ್ಷಯಿಸುವುದಕ್ಕೆ ಶಕ್ಯವಲ್ಲದ್ದು ಅಕ್ಷಯ್ಯ. ಕ್ಷಯುವಿಲ್ಲದ್ದು ಅಕ್ಷಯ.

---

* ಪರಿಶಿಷ್ಟದ ಮೂರೂ ಪುಟಗಳಲ್ಲಿನ ವಿವರಣೆಗಳಲ್ಲಿ ಮೊದಲನೆಯ ಸಂಖ್ಯೆ ಅಧ್ಯಾಯವನ್ನೂ, ಎರಡನೆಯ ಸಂಖ್ಯೆ ಶ್ಲೋಕದ ಸಂಖ್ಯೆಯನ್ನೂ ಸೂಚಿಸುತ್ತದೆ. ಉದಾ : ೧.೨೩ = ಅಧ್ಯಾಯ ೧ ಶ್ಲೋಕ ೨೩.

೬.೧೦. ಯುಂಜೀತ = ಈ ಧಾತು ಉಭಯಪದಿಯಾದ್ದರಿಂದ ಯುಂಜೀತ, ಯುಂಜ್ಯಾತ್ - ಎಂಬ ಎರಡು ರೂಪಗಳೂ ಸರಿಯಾದವು.

೬.೧೭. ದುಃಖಹಾ = ದುಃಖಹನ್ - ಎಂದು ನಕಾರಂತ ಶಬ್ದವಿದು. ವೃತ್ರಹನ್ ಶಬ್ದದಂತೆ ರೂಪಗಳು. ದುಃಖಹಾ ದುಃಖಹನೌ ದುಃಖಹನಃ.

೬.೩೬. ಯತತಾ = ಆತ್ಮನೇಪದಿಯಾದ್ದರಿಂದ ಯತಮಾನೇನ ಎಂದು ಇರಬೇಕು.

೭.೩. ಯತತಿ = ಯತತೇ ಎಂದಿರಬೇಕು. ಆರ್ಷಪ್ರಯೋಗ.

೭.೨೯. ಯತಂತಿ = ಯತಂತೇ ಎಂದಿರಬೇಕು.

೮.೭. ಯುಧ್ಯ = ಯುಧ್ಯಸ್ವ ಎಂದಿರಬೇಕು. 'ಯುಧಮಿಚ್ಛತಿ ಯುಧ್ಯತಿ' ಎಂದು ಕ್ಯಚ್ ಪ್ರತ್ಯಯವನ್ನು ಸೇರಿಸಿ 'ಯುಧ್ಯ' ಎಂಬ ರೂಪವನ್ನು ಸಾಧಿಸಬಹುದು.

೮.೧೭. ಅಹೋರಾತ್ರವಿದಃ = 'ಅಹಶ್ಚ ರಾತ್ರಿಶ್ಚ ಅಹೋರಾತ್ರಂ'.

೯.೨. ರಾಜವಿದ್ಯಾ, ರಾಜಗುಹ್ಯಂ = ವಿದ್ಯೆಗಳ ರಾಜಾ ರಾಜವಿದ್ಯಾ ಅಥವಾ ರಾಜರ ವಿದ್ಯಾ ರಾಜವಿದ್ಯಾ ಎಂದು ಎರಡು ವಿಧದಲ್ಲಿ ವಿಗ್ರಹವನ್ನು ಹೇಳಬಹುದು. ಅರ್ಥವು ಬೇರೆಯಾಗುತ್ತದೆ. ರಾಜಗುಹ್ಯ ಶಬ್ದದಲ್ಲಿಯೂ ಹೀಗೆಯೇ.

೯.೨೭. ತಪಸ್ಯಸಿ = ತಪಃ ಆತ್ಮನಃ ಇಚ್ಛಸಿ – ತಪಸ್ಯಸಿ. ಕ್ಯಚ್ ಪ್ರತ್ಯಯ. ನಾಮಧಾತು.

೧೦.೯. ರಮಂತಿ = ರಮಂತೇ ಎಂದಿರಬೇಕು.

೧೦.೨೪. ಸೇನಾನೀನಾಂ = ಆರ್ಷಪ್ರಯೋಗ. ಸೇನಾನ್ಯಾಂ ಎಂದಿರಬೇಕಾಗಿತ್ತು. ಷಷ್ಠೀಬಹುವಚನದಲ್ಲಿ ಈ ಶಬ್ದಕ್ಕೆ ನುಡಾಗಮವು ಬರುವುದಿಲ್ಲ.

೧೦.೩೧. ಪವತಾಂ = ಆರ್ಷಪ್ರಯೋಗ. ಪುನತಾಂ ಅಥವಾ ಪವಮಾನಾನಾಂ ಎಂದಿರಬೇಕು.

೧೧.೩೦. ಲೇಲಿಹ್ಯಸೇ = ಲಿಹ್ ಧಾತುವಿನ ಯಙಂತರೂಪ.

೧೧.೪೪. ಪ್ರಿಯಃ ಪ್ರಿಯಾಯಾರ್ಹಸಿ = ಪ್ರಿಯಾಯಾಃ ಅರ್ಹಸಿ – ಎಂದು ಪದವಿಭಾಗ. ಸಂಧಿಯು ಆರ್ಷ. ಪ್ರಿಯಾಯ ಅರ್ಹಸಿ – ಎಂದು ವಿಭಾಗಿಸಿ ಸವರ್ಣದೀರ್ಘಸಂಧಿಯನ್ನು ಕೆಲವರು ಹೇಳುತ್ತಾರೆ. ಆಗ ಶಬ್ದವು ಸರಿಯಾದರೂ ಅರ್ಥವು ಸರಿಯಾಗದು.

೧೧.೫೪. ಶಕ್ಯ ಅಹಂ = ಶಕ್ಯೋಽಹಂ ಎಂದು ಸಂಧಿಯಾಗ

ಬೇಕಾಗಿತ್ತು. ಛಂದಸ್ಸಿಗಾಗಿ ಸಂಧಿಯನ್ನು ಮಾಡಿಲ್ಲ. ವಿಸರ್ಗಲೋಪವನ್ನು ಮಾತ್ರ ಮಾಡಲಾಗಿದೆ.

೧೨.೮. ಮಯ್ಯೇವ + ಅತ ಊರ್ಧ್ವಂ = ಛಂದಸ್ಸು ಕೆಡುವುದರಿಂದ ಸವರ್ಣದೀರ್ಘಸಂಧಿಯನ್ನು ಮಾಡಿಲ್ಲ. ಇದೇನೂ ವ್ಯಾಕರಣ ದೋಷವಲ್ಲ.

೧೩.೧೯. ವಿದ್ಧ್ಯನಾದೀ ಉಭಾವಪಿ = ಅನಾದೀ ಎಂಬುದು ಪ್ರಗೃಹ್ಯ ವಾದ್ದರಿಂದ ಯಣ್ ಸಂಧಿಯಾಗಿಲ್ಲ.

೧೪.೨. ವ್ಯಥಂತಿ = ವ್ಯಥಂತೇ ಎಂದಿರಬೇಕು. ಆರ್ಷಪ್ರಯೋಗ.

೧೪.೨೩. ಇಂಗತೇ = 'ಇಗಿ' ಧಾತು ಪರಸ್ಮೈಪದಿ. ಇಂಗತಿ ಎಂದಿರ ಬೇಕು.

೧೮.೫೫. ವಿಶತೇ = ವಿಶತಿ ಎಂದಿರಬೇಕು.

೧೮.೬೬. ಮೋಕ್ಷಯಿಷ್ಯಾಮಿ = ಮೋಕ್ಷ – ಅವಸಾನೇ – ಎಂಬ ಧಾತುವಿಗೆ ಪ್ರೇರಣಾರ್ಥದಲ್ಲಿ ಭವಿಷ್ಯತ್ಕಾಲದ ರೂಪ. ಅಮರಕೋಶದಲ್ಲಿ ಮೋಕ್ಷ ಶಬ್ದದ ವ್ಯುತ್ಪತ್ತಿಯನ್ನು ಬರೆಯುವಾಗ ಸುಧಾವ್ಯಾಖ್ಯಾನದಲ್ಲಿ ಈ ಧಾತುವನ್ನು ಉದಾಹರಿಸಿದ್ದಾರೆ. ಆಪ್ಟೆಯವರ ನಿಘಂಟುವಿನಲ್ಲಿಯೂ ಇದು ದೊರೆಯುತ್ತದೆ. ಆದರೆ ಉಪಲಬ್ಧವಾದ ಪಾಣಿನೀಯಧಾತುಪಾಠದಲ್ಲಿ ಈ ಧಾತು ನಮಗೆ ದೊರೆಯಲಿಲ್ಲ. ಶ್ರೀಧರಸ್ವಾಮಿಗಳ ಸುಬೋಧಿನೀ ವ್ಯಾಖ್ಯಾನವಿರುವ ಗ್ರಂಥದಲ್ಲಿ 'ಮೋಚಯಿಷ್ಯಾಮಿ ಮಾ ಶುಚಃ' ಎಂಬ ಪಾಠ ದೊರೆಯುತ್ತದೆ.

# ಶ್ಲೋಕಾನುಕ್ರಮಣಿಕೆ

(ಮೊದಲ ಸಂಖ್ಯೆ ಅಧ್ಯಾಯವನ್ನೂ ಎರಡನೆಯ ಸಂಖ್ಯೆ ಶ್ಲೋಕವನ್ನೂ ಸೂಚಿಸುತ್ತದೆ)

---

# ಕೆಲವು ಉತ್ತಮ ಗ್ರಂಥಗಳು

ವಚನ ಭಾರತ (ಸರಳ ಗದ್ಯ)—ಎ. ಆರ್. ಕೃಷ್ಣಶಾಸ್ತ್ರೀ
ಕಥಾಮೃತ (ಕಥಾಸರಿತ್ಸಾಗರದ ಸಂಗ್ರಹ)—ಎ. ಆರ್. ಕೃಷ್ಣಶಾಸ್ತ್ರೀ
ವಚನ ರಾಮಾಯಣ (ಸರಳ ಗದ್ಯ)—ತ. ಸು. ಶಾಮರಾಯ
ಜನಪ್ರಿಯ ಭಾಗವತ (ಸರಳ ಗದ್ಯ)—ಶ್ರೀನಿವಾಸ ಉಡುಪ
ಮಹಾಭಾರತದ ಶಾಪಗಳು (ಮಹಾಕಾವ್ಯದ ಅವಿಭಾಜ್ಯ ಅಂಗವಾಗಿರುವ ಶಾಪ, ಆಣೆ, ಪಣ, ಸತ್ಯಕ್ರಿಯೆಗಳನ್ನು ಕುರಿತ ವಿಚಾರಪೂರಿತ ಕೃತಿ – ೨ ಸಂಪುಟಗಳಲ್ಲಿ)—ಶ್ರೀಪಾದ ರಘುನಾಥ ಭಿಡೆ
ಕಾವ್ಯಗಾಯನ ಸ್ತೋತ್ರಮಂಜರಿ (ಪರಂಪರಾಗತ ವ್ರತಕಥಾದಿಗಳು, ಕಥನಕಾವ್ಯಗಳು: ಸ್ತೋತ್ರಗಳ ಹಿನ್ನೆಲೆ, ವಸ್ತು-ವಿಷಯಗಳನ್ನು ಕುರಿತ ಪೀಠಿಕೆಗಳೊಡನೆ)—ಸಂ : ಪಿ. ಆರ್. ಜಯಲಕ್ಷ್ಮಮ್ಮ
ಶ್ರೀ ತ್ಯಾಗರಾಜ ಕೃತಿಮಂಜರಿ (ಸಂಪೂರ್ಣ ಪಾಠ, ಸಾಹಿತ್ಯ, ಭಾವಾರ್ಥ, ಟಿಪ್ಪಣಿ – ಎರಡು ಸಂಪುಟಗಳಲ್ಲಿ)—ವಿ. ಎಸ್. ಸಂಪತ್ಕುಮಾರಾಚಾರ್ಯ
ಸದ್ಗುರು ತ್ಯಾಗರಾಜರು (ಜೀವನ – ಸಾಧನೆ – ಕೊಡುಗೆ)—ವಿ. ಎಸ್. ಸಂಪತ್ಕುಮಾರಾಚಾರ್ಯ
ವಾಲ್ಮೀಕಿ ರಾಮಾಯಣ : ಶಾಪ ಮತ್ತು ವರ (ಶಾಪ, ಪ್ರತಿಶಾಪ, ಶಪಥ, ಪ್ರತಿಜ್ಞೆ, ಸತ್ಯಕ್ರಿಯೆ, ವರ, ಆಶೀರ್ವಾದ ಇತ್ಯಾದಿಗಳನ್ನು ಕುರಿತ ವಿಚಾರಪೂರಿತ ಕೃತಿ)—ಶ್ರೀಪಾದ ರಘುನಾಥ ಭಿಡೆ
ನಾಡೋಜ ಪಂಪ—ಮುಳಿಯ ತಿಮ್ಮಪ್ಪಯ್ಯ
ಸರಳ ಶೂನ್ಯಸಂಪಾದನೆ (ಗೂಳೂರು ಸಿದ್ಧವೀರನ ಕೃತಿಯ ಸರಳ ನಿರೂಪಣೆ)—ಎಲ್. ಬಸವರಾಜು
ಬಸವಣ್ಣನವರ ವಚನಗಳು (ಪರಿಷ್ಕೃತ ಏಳನೆಯ ಸಂಸ್ಕರಣ)—ಸಂ : ಎಲ್. ಬಸವರಾಜು
ಅಕ್ಕನ ವಚನಗಳು (ಪರಿಷ್ಕೃತ ಏಳನೆಯ ಸಂಸ್ಕರಣ)—ಸಂ : ಎಲ್. ಬಸವರಾಜು
ಅಲ್ಲಮನ ವಚನಗಳು—(ಪರಿಷ್ಕೃತ ಐದನೆಯ ಸಂಸ್ಕರಣ)—ಸಂ : ಎಲ್. ಬಸವರಾಜು
ಹವ್ಯಕ–ಇಂಗ್ಲಿಷ್ ನಿಘಂಟು—ಎಂ. ಮರಿಯಪ್ಪ ಭಟ್ಟ
ಜ್ಯೋತಿಷ್ಯ ಸಾರ ಸಂಗ್ರಹ (ಪರಿಷ್ಕೃತ ನಾಲ್ಕನೆಯ ಸಂಸ್ಕರಣ)—ಎಂ. ರಾಮಸ್ವಾಮಿ
ಸೂಲಂಗಿ (ಮೂವತ್ತು ಚಿಂತನಗಳು)—ಹಾ. ಮಾ. ನಾಯಕ
ಅವಧೇಶ್ವರಿ (ವೇದಕಾಲೀನ ರಾಜಕೀಯ ಕಾದಂಬರಿ)—ಶಂಕರ ಮೊಕಾಶಿ ಪುಣೇಕರ
ಕಟ್ಟುವೆವು ನಾವು (ಚಿಂತನಪರ ಲೇಖನಗಳು)—ವ್ಯಾಸರಾಯ ಬಲ್ಲಾಳ
ಅಡಿಗೆಯ ಒಳಗುಟ್ಟು (ಮೂರನೆಯ ಸಂಸ್ಕರಣ)—ಭಾರತಿ ಭಟ್
ಮನೆಗೆಲಸದ ಒಳಗುಟ್ಟು (ಪರಿಷ್ಕೃತ, ವಿಸ್ತೃತ ದ್ವಿತೀಯ ಸಂಸ್ಕರಣ–ಸಚಿತ್ರ)—ಭಾರತಿ ಭಟ್
ರುಚಿರ (ಪಾಕಶಾಸ್ತ್ರದ ಮೂಲ ಪರಿಚಯ ; ಸಾವಿರಕ್ಕೂ ಮೀರಿದ ದಿನನಿತ್ಯದ ಸಸ್ಯಾಹಾರಿ ಊಟ, ಉಪಾಹಾರ, ಪಾನೀಯಗಳು ಮತ್ತು ವಿಶೇಷ ಖಾದ್ಯಗಳನ್ನು ಮಾಡುವ ಪ್ರಕಾರಗಳು ; ಇವುಗಳನ್ನು ಮಾಡಲು ಬೇಕಾಗುವ ಪರಿಕರಗಳು ; ಗೃಹಿಣಿಯ ಕುಶಲತೆ ; ತಾಂಬೂಲ ; ಸಂಸಾರೋಪಯುಕ್ತ ಸೂಚನೆಗಳು, ಇತ್ಯಾದಿ—ಅನೇಕ ಬಹುವರ್ಣ ಚಿತ್ರಗಳು ಮತ್ತು ರೇಖಾಚಿತ್ರಗಳೊಡನೆ)—ಕಮಲಾಬಾಯಿ ಓಗಲೆ (ಅನು : ವಿದ್ಯಾ ಡಿ. ವಿ. ಮೂರ್ತಿ)
ಪುಸ್ತಕ ಸಂಸ್ಕೃತಿ (ಒಂದು ನೂರು ಪುಸ್ತಕಗಳ ಪರಿಚಯ)—ಹಾ. ಮಾ. ನಾಯಕ
ವೀಣೆಯ ನೆರಳಿನಲ್ಲಿ... (ಆತ್ಮಕಥೆ)—ಮೈಸೂರು ವಿ. ದೊರೆಸ್ವಾಮಿ ಅಯ್ಯಂಗಾರ್ .
ಸಂಸ್ಕೃತ-ಕನ್ನಡ ಶಬ್ದಾರ್ಥಪ್ರಕಾಶ (ಸಂಸ್ಕೃತ–ಕನ್ನಡ ಬೃಹತ್ ನಿಘಂಟು)—ಜಿ. ಎನ್. ಚಕ್ರವರ್ತಿ
ಸುಲಭ ಇಂಗ್ಲಿಷ್ (*English Made Easy*)—ಎಲ್. ಎಸ್. ಶೇಷಗಿರಿರಾವ್

---

ಗೀತಾ ಬುಕ್ ಹೌಸ್ : ಪ್ರಕಾಶಕರು : ಮೈಸೂರು ೫೭೦ ೦೦೧

ಬೆಲೆ : ರೂ. ೬೦